

# ಹೊಸತು




ನೆಮ್ಮದಿಯ ನಾಳೆ ನಮ್ಮದು

ಫೆಬ್ರವರಿ ೨೦೦೧
ಬೆಲೆ : ರೂ. ೧೦

ಪೆಪ್ಸಿ-ಕೋಲಾ ಬಿಡು
ಎಳನೀರು ಕೊಡು

# ಚೌಗಲೆಯವರ ಕಲಾಕೃತಿಗಳು



ತಮ್ಮದೇ ವಿಶಿಷ್ಟ ಶೈಲಿಯ ಕಲಾಕೃತಿಗಳ ಮೂಲಕ ಕಲಾ ಜಗತ್ತಿನಲ್ಲಿ ಪರಿಚಿತರಾಗಿರುವ ಶ್ರೀ. ಡಿ. ಎಸ್. ಚೌಗಲೆ ಕರ್ನಾಟಕ ವಿಶ್ವವಿದ್ಯಾನಿಲಯದ ಎಂ. ಎ. (ಸಾಹಿತ್ಯ) ಪದವೀಧರ. ತಮ್ಮಷ್ಟಕ್ಕೆ ಚಿತ್ರ ರಚನೆಯ ಅಭ್ಯಾಸ ಮಾಡಿ ಕರಗತಪಡಿಸಿಕೊಂಡವರು.

ಬೇರೆ ಬೇರೆ ಕಡೆ ಏಕವ್ಯಕ್ತಿ ಪ್ರದರ್ಶನಗಳ ಮೂಲಕ ತಮ್ಮ ಕಲಾಕೃತಿಗಳನ್ನು ಪರಿಚಯಿಸಿದ್ದಾರೆ. ಕರ್ನಾಟಕದ ಹಲವು ನಗರಗಳಲ್ಲಿ ಮಾತ್ರವಲ್ಲದೆ ಚೆನ್ನೈ, ಹೈದರಾಬಾದು ಮುಂತಾದ ನಗರಗಳಲ್ಲಿಯೂ ಇವರ ಕೃತಿಗಳು ಪ್ರದರ್ಶನಗೊಂಡಿವೆ. ಜನಸಾಮಾನ್ಯರ ಉಡುಗೆ ತೊಡುಗೆಗಳು, ಅವರ ಕಲಾಚಟುವಟಿಕೆಗಳು ಇವರ ಕುಂಚದಿಂದ ಮೂಡಿವೆ. ಇವರು ಅನೇಕ ಕಲಾಶಿಬಿರ ಚಟುವಟಿಕೆಗಳಲ್ಲಿ ಭಾಗವಹಿಸಿದ್ದಾರೆ. ಪುರಸ್ಕಾರಗಳನ್ನು ಗಳಿಸಿದ್ದಾರೆ.

ಸರಳ ವ್ಯಕ್ತಿತ್ವದ ಶ್ರೀ. ಚೌಗಲೆ ಬೆಳಗಾವಿಯಲ್ಲಿ ಪ್ರಾಧ್ಯಾಪಕರಾಗಿದ್ದಾರೆ. ಸಮರ್ಥ ಲೇಖಕರೂ ಹೌದು. ಹಲವು ಕಥೆಗಳನ್ನೂ, ಲೇಖನಗಳನ್ನೂ ಪ್ರಕಟಿಸಿದ್ದಾರೆ. ಬಡವರ, ಶೋಷಿತರ ಬವಣೆಗಳನ್ನು ಸಹಾನುಭೂತಿಯಿಂದ ಚಿತ್ರಿಸಿದ್ದಾರೆ; 'ವಾರಸಾ' ಇವರ ಕಥಾ ಸಂಕಲನ. ಅಲ್ಲದೆ ಮರಾಠಿಯಿಂದ ಅಜಿತ್ ದಳವಿಯವರ 'ಗಾಂಧಿ ವಿರುದ್ಧ ಗಾಂಧಿ' ನಾಟಕವನ್ನೂ, ಜಯವಂತ ದಳವಿಯವರ 'ನೆರಳುಗಳು' ಕಾದಂಬರಿಯನ್ನೂ ಅನುವಾದಿಸಿ ಕನ್ನಡ - ಮರಾಠಿ ಸ್ನೇಹಕ್ಕೆ ಸೇತುವೆ ನಿರ್ಮಿಸಿದ್ದಾರೆ.



ಇವರು ಬರೆದಿರುವ ಕಲಾವಿದ ಬಿ. ಕೆ. ಹುಬ್ಬಿಯವರ ಜೀವನ ಚರಿತ್ರೆಯನ್ನು ಕರ್ನಾಟಕ ಲಲಿತ ಕಲಾ ಅಕಾಡೆಮಿ ಪ್ರಕಟಿಸಿದೆ. ಇಲ್ಲಿ ಪ್ರಕಟವಾಗಿರುವ ಅವರ ಕಲಾಕೃತಿಗಳ ಬಗ್ಗೆ ಸಹೃದಯರ ಪ್ರತಿಕ್ರಿಯೆಗಳನ್ನು ಸ್ವಾಗತಿಸುತ್ತೇವೆ.









# ಹೊಸತು

ಒಳಗೇನಿದೆ.....


ಭೂಪಾಲ್ ಗ್ಯಾಸ್ ದುರಂತ — *ಪಾರ್ಥಸಾರಥಿ* ... ೭
ಜಾಗತಿಕ ಬಂಡವಾಳಕ್ಕೆ ಲಗಾಮು — *ಮ. ಮಹೇಶನ್* ... ೨೬
ಯುವಜನರು ಮತ್ತು ಸಾಮಾಜಿಕ ಬದಲಾವಣೆ — *ಜಿ. ರಾಮಕೃಷ್ಣ* ... ೫೨
ಕೊಳೆಗೇರಿ ವಾಸಿಗಳಿಗೆ ಬದುಕುವ ಹಕ್ಕು ಇದೆಯೆ ? — *ಅಡ್ಡೂರು ಕೃಷ್ಣ ರಾವ್* ... ೫೫

ಕಾಂಪಿಟಿಶನ್ (ಕಥೆ) — *ಶಾಮ ಮನೋಹರ, ಅನು : ಚಂದ್ರಕಾಂತ ಪೋಕಳೆ* ... ೨೦
ರಕ್ತಬೀಜಾಸುರ (ಬೀದಿ ನಾಟಕ) — *ಡಾ॥ ಕೆ. ವೈ. ನಾರಾಯಣ ಸ್ವಾಮಿ* ... ೩೦
ಕಾವ್ಯಧಾರೆ — *ಇಸಾಕ್ ಅಗ್ನಾಡಿ, ರಾಮಗಿರಿ ರವೀಂದ್ರ, ಗಂಗಾರಾಂ ಚಂಡಾಳ* ... ೨೩
ಆ ಒಂದು ಕ್ಷಣ (ಕವಿತೆ) — *ರಾಮಲಿಂಗಪ್ಪ ಟಿ. ಬೇಗೂರು* ... ೫೨
ಕಾರ್ಗಿಲ್ಲಿನ ಮೇಲೆ ಪದ್ಯ ಬರೆಯುವುದಿಲ್ಲ — *ಯು. ಎಸ್. ಶ್ರೀಧರ ಆರಾಧ್ಯ* ... ೫೩

ವಾರಣಾಸಿಯಲ್ಲಿ ನಂದಿಯ ಪಕ್ಕದಲ್ಲಿ ಕುಳಿತ ಪಂಡ — *ಪಾರ್ಥ* ... ೪೬

ಗಾಂಧಿ ಭಕ್ತ - ಕೆ. ಎಸ್. ನಾರಾಯಣಸ್ವಾಮಿ (ನೆನಪು) — *ಸತ್ಯವ್ರತ* ... ೮

ಜಗಳಗಂಟಿ (ಲಲಿತ ಪ್ರಬಂಧ) — *ಪ್ರೊ॥ ಅ.ರಾ. ಮಿತ್ರ* ... ೩೭
ಕ್ಷುರುಗಾಥಾ (ಪ್ರಬಂಧ) — *ಸತ್ಯವತಿ* ... ೨೪

ಹಂಪಿ ಶಿವಾನಂದ ಆಶ್ರಮದ ಸದಾಶಿವಯೋಗಿ (ಸಂದರ್ಶನ) — *ವೆಂಕಟಯ್ಯ ಅಪ್ಪಗೆರೆ* ... ೩೪
ಬೀಡಿ ಕಟ್ಟುವ ಕೈಗಳು — *ಕೆ. ಪಿ. ಸ್ವಾಮಿ* ... ೯

ವಂಶವಾಹಿ ಅಕ್ಷರಮಾಲೆ ಸಿದ್ಧ — *ಟಿ. ಎಸ್. ಸಂಜೀವರಾವ್* ... ೧೦
ವಿಜ್ಞಾನ ವಿವೇಚನೆಯ ಗಡಿ ದಾಟಿದಾಗ — *ಟಿ. ಆರ್. ಅನಂತರಾಮು* ... ೫೮
ಕೋಲ್ಡ್ರಿಂಕ್ಸ್ ಎಷ್ಟು ಸುರಕ್ಷಿತ.. — *ಡಾ॥ ಕರವೀರಪ್ರಭು ಕ್ಯಾಲಕೊಂಡ* ... ೬೩
ಬಳಲಿದಾಗ ಬಾಳೆಹಣ್ಣು ತಿನ್ನಿ — *ಡಾ॥ ಪಿ. ಶಿವರಾಮ ರೈ* ... ೬೨

ಭಾರತ - ಚೀಣಾ ಸಂಬಂಧಗಳ ವರ್ಧನೆಯ ಮುಖ್ಯತ್ವ — *ಸೀಯಾರ್ಕೆ* ... ೬೧

ಸಂಸ್ಕೃತಿಗಳ ಮುಖಾಮುಖಿ — *ವಿ. ಚಂದ್ರಶೇಖರ ನಂಗಲಿ* ... ೧೫
ಕಲೆ ಮತ್ತು ಸಮಾಜಪ್ರಜ್ಞೆ — *ರಾಜಶೇಖರ ರಾಮಣ್ಣ ಬಿಲ್ವಪತ್ರಿ* ... ೧೮
ಕಯ್ಯಾರರ ಕಾವ್ಯ (ನಾನು ಓದಿದ ಪುಸ್ತಕ) — *ಎ. ಆರ್. ಸಾಲಿಯಾನ್* ... ೪೪
ಉರ್ದು ಸಾಹಿತ್ಯ ಮತ್ತು ಕೃಷ್ಣಚಂದರ — *ಡಾ॥ ಪಂಚಾಕ್ಷರಿ ಹಿರೇಮಠ* ... ೪೧

ಒಳ್ಳೆಯ ಓದು ... ೪೦
ಸಾದರ ಸ್ವೀಕಾರ ... ೫೧

ಶಿವರಾತ್ರಿಯ ಒಳಗುಟ್ಟು (ನಭಾವಲೋಕನ) — *ಡಾ॥ ಬಿ. ಎಸ್. ಶೈಲಜಾ* ... ೪೭
ಯೋಗಪ್ರವೇಶ - ೧೮ — *ಜಿ. ರಾಮಕೃಷ್ಣ* ... ೬೫
ವಿನೋದ ಗಣಿತ ... ೪೯
ತಿಳಿವು — *ಹಾಲಾಡಿ ಮಾರುತಿರಾವ್, ಸಿ.ಪಿ.ಕೆ.* ... ೬೬



*ಚಿತ್ರಗಳು : ಗುಜ್ಜಾರ್, ಮಹಾಳಿ, ರೋಹಿಣಿ ಶೆಟ್ಟಿ, ವಸಂತ ಹೊಸಬೆಟ್ಟು, ರವಿಕುಮಾರ್ ಅಜ್ಜೀಪುರ, ವಿಜಯಾನಂದ*
*ಮುಖಪುಟ ವರ್ಣಪಾರದರ್ಶಿಕೆ : ಕೆ. ಪಿ. ಸ್ವಾಮಿ*
*ರೂಪದರ್ಶಿಗಳು : ಸ್ಮಿತಾ ಮತ್ತು ಹಿತಾ*
*ವಿನ್ಯಾಸ : ನವಕರ್ನಾಟಕ ವಿನ್ಯಾಸ*
*ಕಚೇರಿ ಸಹಕಾರ : ಜಿ. ವಿ. ತೇಜೋವತಿ*


*ಕೆ. ಎಸ್. ನಾರಾಯಣಸ್ವಾಮಿಯವರ ಭಾವಚಿತ್ರ ಮುಖಪುಟದಲ್ಲಿದೆ.*

ಪ್ರಧಾನಿ ವಾಜಪೇಯಿ ಹೊಸ ವರ್ಷದ ಸಂದೇಶ ನೀಡಲು ಎರಡು ಭಾಗಗಳ ಲೇಖನ ಪ್ರಕಟಿಸಿದ್ದಾರೆ. ಕೇರಳಕ್ಕೆ ವಿಶ್ರಾಂತಿಗೆಂದು ತೆರಳುವ ಮೊದಲೇ ದೆಹಲಿಯಲ್ಲಿ ಈ ಲೇಖನ ಸಿದ್ಧವಾಗಿದ್ದುದು ಸ್ಪಷ್ಟವಾಗಿದೆ. ಪ್ರಧಾನಿಗೆ ಭಾಷಣ ಬರೆದುಕೊಡುವ ಸಹಾಯಕರಿದ್ದುದು ತಿಳಿದಿತ್ತು. ಲೇಖನ ಬರೆದುಕೊಡುವವರೂ ಇದ್ದಾರೆಂಬುದು ಈಗ ತಾನೆ ಗೊತ್ತಾಗುತ್ತಿದೆ. ಲೇಖನದ ಹಿಂದೆ ಸ್ವದೇಶಿ ಹಸ್ತವಿದೆ ಮತ್ತು ಸ್ವಲ್ಪಮಟ್ಟಿಗೆ ವಿದೇಶಿ ಪ್ರೇರಣೆಯಿದೆ. ವಿಶ್ರಾಂತಿಗೆಂದು ತೆರಳಿದಾಗೆಲ್ಲಾ ಇನ್ನು ಮುಂದೆ ಪ್ರಧಾನಿಯಿಂದ ಲೇಖನಗಳನ್ನು ನಿರೀಕ್ಷಿಸಬಹುದು. ಸಾರ್ವಜನಿಕ ಸಂಪರ್ಕದ ವಿಶೇಷ ಪ್ರಯತ್ನವಾಗಿ ಇದೆಷ್ಟು ಫಲಕಾರಿಯಾಗುತ್ತದೋ ಕಾದು ನೋಡಬೇಕು.

ವಾಜಪೇಯಿ ಕೇವಲ ಬಹುಮುಖೀ ಪ್ರತಿಭಾ ಸಂಪನ್ನರಲ್ಲ; ಅವರಿಗೆ ನಿಜಕ್ಕೂ ಬಹು ಮುಖಗಳಿವೆ. ಇಂದಿನ ಮಾತಿಗೆ ನಾಳೆ ವ್ಯಾಖ್ಯಾನ ನೀಡುವುದು ಅವರ ಸಂಪ್ರದಾಯವಾಗಿಹೋಗಿದೆ. ''ನಾನು ಎಂದೆಂದಿಗೂ ಸ್ವಯಂ ಸೇವಕನೇ'' ಎಂಬ ಅವರ ಮಾತನ್ನು ಜನ ಒಂದು ರೀತಿಯಲ್ಲಿ ಅರ್ಥ ಮಾಡಿಕೊಂಡು ಕಳವಳಕ್ಕೆ ಸಿಲುಕಿದರೆ ತಕ್ಷಣ ಆ ವಾಕ್ಯದ 'ನಿಜಾರ್ಥ' ಏನೆಂದು ಆಮೇಲೆ ವಿವರಿಸುವ ಜಾಣತನ ನಮ್ಮ ಅತಳ ಬಿಹಾರಿಯವರದು. ಅಯೋಧ್ಯೆಯ ಪ್ರಕರಣವು 'ರಾಷ್ಟ್ರೀಯ ಭಾವನೆ'ಯ ಪ್ರತೀಕವೆಂದು ಒಮ್ಮೆ ಚೀತ್ಕಾರ ಮಾಡಿ ಆಮೇಲೆ ಅದು ಭೂತಕಾಲಕ್ಕೆ ಸಂಬಂಧಿಸಿದ ಹೇಳಿಕೆಯೆಂದು ಸಮಾಧಾನ ಹೇಳುತ್ತಾರೆ. ಅವರ ಇಂದಿನ ಮುಖಕ್ಕೂ ನಾಳೆಯ ಮುಖಕ್ಕೂ ವ್ಯತ್ಯಾಸವಿರುತ್ತದೆ. ನಿನ್ನೆಯ ಮುಖದ ಪ್ರಶ್ನೆಯೇ ಬೇಡ; ಅದರಿಂದ ತಾನೆ ಇಂದಿನ ಹಾಗೂ ನಾಳಿನ ಮುಖಗಳು ಹುಟ್ಟಿಕೊಂಡಿರುವುದು ! ಇವುಗಳಲ್ಲಿ ನಿಜಕ್ಕೂ ಸ್ವಕೀಯವಾದದ್ದು ಯಾವುದು, ಸ್ಥಿರವಾದ್ದು ಯಾವುದು ? ಅದನ್ನು ಪ್ರಧಾನಿಯಾಗಿರುವಾಗ ಅವರು ಹೇಳುವಂತಿಲ್ಲ. ಏಕೆಂದರೆ ಅದು ಬಹಿರಂಗವಾದರೆ ಸಮತಾ, ಮಮತಾ, ಕರುಣಾನಿಧಿ, ನಾಯಿಡು ಮುಂತಾದವರಿಗೆ ಮುಜುಗರ ಉಂಟಾಗಿಬಿಡುತ್ತದೆ. ಅವರು ಭಾಜಪವನ್ನು ಅಪ್ಪಿಕೊಂಡಿದ್ದರೂ ಕಮಲದೆಲೆಯ ಮೇಲಿನ ನೀರಿನಂತೆ ಅದರಿಂದ ಪ್ರತ್ಯೇಕವಾಗಿ, ಶುಭ್ರವಾಗಿ ಉಳಿದಿದ್ದಾರೆಂಬ ಭ್ರಾಂತಿಗೆ ಅವಕಾಶವಿಲ್ಲದೆ ತಮ್ಮ ಇಬ್ಬಂದಿತನವನ್ನು ಪ್ರಕಟಿಸಿಕೊಳ್ಳಬೇಕಾಗುತ್ತದೆ. ಆಗ ಅವರೆಲ್ಲಿ ಹೋಗಬೇಕು ? ವಾಜಪೇಯಿಯವರ ಲೇಖನದ ಸಂದೇಶ ಯಾರನ್ನಾದರೂ ತಟ್ಟಬೇಕಾಗಿದ್ದರೆ ಅದು ತಟ್ಟಬೇಕಾದ್ದು ಇವರನ್ನು ಪ್ರತ್ಯೇಕವಾಗಿ ಅವರಿಗೆ ಸಂದೇಶ ಅರ್ಥ ನೀಡಲಾಗಿರಬಹುದು.

ಜನಸಂಘದ, ಆರೆಸ್ಸೆಸ್‌ನ, ಇಟ್ಟಿಗೆ - ರಥಯಾತ್ರೆಗಳ ವಾಜಪೇಯಿ ಈಗಿಲ್ಲ; ಈಗವರು ತುಂಬಾ ಮೃದು ಹೃದಯಿ, ತರ್ಕಪ್ರಜ್ಞೆಯ ಸಾಕಾರಮೂರ್ತಿ, ಭಾರತದ ಸಂಕೀರ್ಣ ಸಂಸ್ಕೃತಿಯ ತಿಳಿವಳಿಕಸ್ಥ – ಇಂತಹ ಮಾತುಗಳನ್ನು ನಮ್ಮ ಮಾಧ್ಯಮಗಳ ಪ್ರಭೃತಿಗಳು ಪೋಷಿಸುತ್ತಾ ಬಂದಿದ್ದಾರೆ. ವಾಜಪೇಯಿ ಬರೆದ ಲೇಖನವನ್ನು ಇದಕ್ಕೆ ಪೂರಕವೆಂದು ಉದಾಹರಿಸುವುದು ಈಗಿನ ಹೊಸ ಪದ್ಧತಿ. ಈ ತಿಂಗಳು ಇದಕ್ಕೆ ವಿಪುಲ ನಿದರ್ಶನಗಳನ್ನು ಒದಗಿಸಿಕೊಟ್ಟಿತು. ಮಾಧ್ಯಮಗಳ ಅಧಿಪತಿಗಳಿಗೆ ಸುಗ್ಗಿಯ ಕಾಲ ಕೂಡಿಬಂತು.

ಆದರೆ ಲೇಖನ ನಿಜಕ್ಕೂ ಅವರ ಬದಲಾದ ಮನೋವೇದಿಕೆಯನ್ನು ಸೂಚಿಸುತ್ತದೆಯೆ ? ಪುರಾಣ ಮತ್ತು ಇತಿಹಾಸಗಳನ್ನು ಸಮೀಕರಿಸಿ ಶ್ರೀರಾಮನ ಬಗ್ಗೆ ಅವರು ಮತ್ತೆ ಅದೇ ಹಳೆಯ ಪಲ್ಲವಿಯನ್ನು ಹಾಡಿದ್ದಾರೆ : ಅವನು ಇಲ್ಲೇ ಹುಟ್ಟಿದ್ದ, ಮಂದಿರವಿತ್ತು, ಇತ್ಯಾದಿ. ಪ್ರಾಚೀನ ಕಾಲದ ಘಟನೆಗಳನ್ನಾಧರಿಸಿ ಸಮಕಾಲೀನರು ಹೊಸ ಹೊಸ ಸಮಸ್ಯೆಗಳನ್ನು ಹುಟ್ಟುಹಾಕಬಾರದೆಂದು ಲೇಖನದಲ್ಲಿ ಹೇಳುತ್ತಲೇ ಮತ್ತೆ ಅಂತಹ ಸಮಸ್ಯೆಗಳ ಪರಿಸ್ಥಿತಿಯನ್ನು ಸೃಷ್ಟಿಸುತ್ತಾರೆ. ಸರ್ವೋಚ್ಚ ನ್ಯಾಯಾಲಯದ ತೀರ್ಪಿಗೆ ತಲೆಬಾಗುತ್ತೇವೆ ಎನ್ನುವಾಗ ಅದೇ ನ್ಯಾಯಾಲಯಕ್ಕೆ ಅವರ ಪರಿವಾರ ಕೊಟ್ಟಿದ್ದ ಮಾತನ್ನು ಉಳಿಸಿಕೊಳ್ಳದೆ ಮಸೀದಿಯನ್ನು ಧ್ವಂಸ ಮಾಡಿದ್ದ ಪ್ರಕರಣವನ್ನು ಮರೆಮಾಚುತ್ತಾರೆ. ಹೊಸದೊಂದು ವಾಕ್ಯ ಸೇರಿಸುತ್ತಾರೆ, ಅಷ್ಟೆ : ''ಅಥವಾ ಅನ್ಯಧರ್ಮೀಯರು, ಅಂದರೆ ಮುಸಲ್ಮಾನರು, ಪರಸ್ಪರ ಮಾತುಕತೆಗಳಲ್ಲಿ ನಮ್ಮ ಭಾವನೆಗಳಿಗೆ ಬೆಲೆ ಕೊಟ್ಟು ಮಂದಿರ ಕಟ್ಟಲು ಒಪ್ಪಿದರೆ'' ಎಂದು. ಇದರಲ್ಲಿ ವಾಜಪೇಯಿ ಹೊಸ ಶುಭ್ರ ಮುಖ ಎಲ್ಲಿದೆಯೆಂದು ಹುಡುಕಿ ನಿರಾಶರಾಗಬೇಕು, ಅಷ್ಟೆ.

ಸಂವಿಧಾನಕ್ಕೆ ಬದ್ಧವಾಗಿರುವುದು ತಮ್ಮ ಹೆಮ್ಮೆಯೆಂದು ಲೇಖನದಲ್ಲಿ ಬರೆಯುವಾಗ ಅದೇ ಸಂವಿಧಾನದ ಅನೇಕ ಪ್ರಮುಖ ವಿಧಿಗಳನ್ನು ತಿರುಗುಮುರುಗು ಮಾಡಲು ವೆಂಕಟಾಚಲಯ್ಯ ಸಮಿತಿಯನ್ನು ನೇಮಕ ಮಾಡಿರುವುದರ ಬಗ್ಗೆ ಹುಂಬುತನ ಪ್ರಕಟಿಸುತ್ತಾರೆ ನಮ್ಮ ಪ್ರಧಾನಿ. ಈ ನ್ಯಾಯಮೂರ್ತಿಗಳಾದರೋ ನಮ್ಮ ಎಸ್. ಎಂ. ಕೃಷ್ಣ ಅವರಂತೆ ಹೈ-ಟೆಕ್ ಯುಗಕ್ಕೆ ಧಾವಿಸಿದ್ದಾರೆ. ಬೌದ್ಧಿಕವಾಗಿ ಮಧ್ಯಕಾಲೀನ ಪ್ರಭುತ್ವದ ನಂಟನ್ನು ಅವರೇನೂ ಬಿಟ್ಟುಕೊಟ್ಟಿಲ್ಲ. ಅವರು ತಮ್ಮ ಅಧೀನದಲ್ಲಿರುವ ಅನೇಕ ಸಮಿತಿಗಳ ನಿಲುವುಗಳನ್ನು ಪತ್ರಿಕೆಗಳಿಗೆ ತಿಳಿಸಿದ್ದಾರೆ; ಆದರೆ ಆ ಸಮಿತಿಗಳ ಸದಸ್ಯರು ಇದೆಲ್ಲಾ ಮಾನ್ಯ ವೆಂಕಟಾಚಲಯ್ಯನವರ ಅಭಿಪ್ರಾಯ ವಿರಬಹುದು, ಸಮಿತಿಗಳ ಸಭೆ ಒಮ್ಮೆಯೂ ನಡೆದಿಲ್ಲವೆನ್ನುತ್ತಾರೆ. ಹಾಗೆಂದು ಒಬ್ಬರು ಛೀಮಾರಿ

(೯ನೇ ಪುಟದಲ್ಲಿ)




ಸಂಪುಟ-೨ ಸಂಚಿಕೆ - ೭ ಫೆಬ್ರವರಿ ೨೦೦೧

*ಪ್ರಧಾನ ಸಂಪಾದಕ*

ಜಿ. ರಾಮಕೃಷ್ಣ

*ಸಂಪಾದಕ ಮಂಡಲಿ*

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಬಿ. ಜಿ. ಗುಜ್ಜಾರಪ್ಪ
ಎಸ್. ಗುರುದತ್
ಮಲ್ಲೇಪುರಂ ಜಿ. ವೆಂಕಟೇಶ್
ಬಿ. ವಿ. ವೀರಭದ್ರಪ್ಪ
ಕೆ. ಪಿ. ಸ್ವಾಮಿ

*ವ್ಯವಸ್ಥಾಪಕರು*

ಎಸ್. ಸುರೇಂದ್ರ
ಎ. ಆರ್. ಉಡುಪ

*ಮುದ್ರಕ-ಪ್ರಕಾಶಕ*

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

*ಮುದ್ರಣ*

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೧ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೮೩೯೭೪೮೨೬

*ಹೊಸತು ಕಚೇರಿಯ ವಿಳಾಸ*




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ ಅಂ. ಪೆ. ೫೧೯೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ / ಫ್ಯಾಕ್ಸ್ : ೨೨೦೩೫೮೦ / ೮೧ / ೮೨
**e-mail : nkp@bgl.vsnl.net.in**

# ಕರ್ನಾಟಕ ವಿಶ್ವವಿದ್ಯಾನಿಲಯಗಳ ಕಾಯಿದೆ

ನಮ್ಮಲ್ಲಿ ಪ್ರಜಾಪ್ರಭುತ್ವವು ಸ್ವಲ್ಪ ಘೋರವಾಗಿಯೇ ಆಚರಣೆಗೆ ಬರುತ್ತಿದೆಯೇನೋ ಎಂಬ ಆತಂಕ ಹೆಚ್ಚಾಗುತ್ತಿದೆ. ನಾಗರಿಕ ಹಕ್ಕುಗಳ ಸಮಿತಿಯ ಕಾರ್ಯಕರ್ತ ಪುರುಷೋತ್ತಂ ಹೈದರಾಬಾದಿನಲ್ಲಿ ಕೊಲೆಯಾದದ್ದು ಒಂದು ಉದಾಹರಣೆ. ಹಕ್ಕುಗಳ ಪ್ರಶ್ನೆ ಎತ್ತಿದರೆ ಕೆಲವು ರಾಜಕೀಯ ನಾಯಕರಿಗೆ ಮೆಣಸಿನಕಾಯಿ ಇಟ್ಟಂತೆ ಆಗುತ್ತದೆ. ಎಲ್ಲಾ ಶಾಂತಿಯಿಂದಿರಬೇಕು, ಸಮಸ್ಯೆಗಳನ್ನೆತ್ತಿ ವಾತಾವರಣ ಕದಡಬಾರದು; ಏಕೆಂದರೆ, ವಿದೇಶದ ಬಂಡವಾಳ ಹೂಡಿಕೆಗೆ ಅದು ವಿಘ್ನ ಒಡ್ಡುತ್ತದೆ. ಇದು ವಾಜಪೇಯಿ-ಚಂದ್ರಬಾಬು-ಕೃಷ್ಣ ಮುಂತಾದವರ ಅನಿಸಿಕೆ. ಜೊತೆಗೆ, ತಮ್ಮ ಮನಬಂದಂತೆ ನಡೆಯಲು ಅಡ್ಡಿಯುಂಟಾದರೆ ಅವರಿಗೆಲ್ಲಾ ಅಸಹನೆ. ಪ್ರಜಾಪ್ರಭುತ್ವಕ್ಕೆ ಬೇಕಾದ ಮಾನಸಿಕ ಸಿದ್ಧತೆಯ ಕೊರತೆಯಿಂದ ಆಗಿರುವ ಪರಿಣಾಮ ಇದು. ೧೯೯೭ರಲ್ಲಿ ಪಟೇಲ್ ಸರ್ಕಾರ ಕರ್ನಾಟಕದ ವಿಶ್ವವಿದ್ಯಾಲಯಗಳ ಕಾಯಿದೆಯನ್ನು ಮೂಲಭೂತವಾಗಿ ಬದಲಾಯಿಸಲು ಯತ್ನಿಸಿತ್ತು. ಅದು ಫಲಿಸಲಿಲ್ಲ. ಈಗ ಕೃಷ್ಣ ಸರ್ಕಾರ ಮತ್ತೆ ಅದನ್ನೇ ಮಾಡಹೊರಟಿದೆ. ಕಾಯಿದೆಯ ನ್ಯೂನತೆಗಳನ್ನು ತೊಡೆದುಹಾಕುವ ಉದ್ದೇಶವಿದ್ದಿದ್ದರೆ ಬದಲಾವಣೆಯನ್ನು ಸ್ವಾಗತಿಸಬಹುದಿತ್ತು. ಶೈಕ್ಷಣಿಕ ಶಿಸ್ತು ಮತ್ತು ಸನ್ನಿವೇಶವನ್ನು ಉತ್ತಮಗೊಳಿಸುವ ಆಕಾಂಕ್ಷೆ ಈ ಸರ್ಕಾರಗಳಿಗಿಲ್ಲ. ಆದ್ದರಿಂದ ಸೈದ್ಧಾಂತಿಕ ಆಧಾರದ ಮೇಲೆ ಬದಲಾವಣೆಗಳ ಸೂಚನೆಯನ್ನು ಇವರಿಂದ ನಿರೀಕ್ಷಿಸುವಂತಿಲ್ಲ. ಇನ್ನಷ್ಟು ವೈದ್ಯಕೀಯ ಮತ್ತು ತಾಂತ್ರಿಕ ಕಾಲೇಜುಗಳನ್ನು ಖಾಸಗಿಯವರಿಗೆ ಕೊಡುವ ಹುನ್ನಾರ ಇವರದು. ಅದಕ್ಕೆ ವಿಶ್ವವಿದ್ಯಾಲಯಗಳ ಅಂಗಸಂಸ್ಥೆಗಳು ತೊಡಕಾಗಿವೆ. ಅದನ್ನು ನಿವಾರಿಸಲು ಕೃಷ್ಣ - ಪರಮೇಶ್ವರರು ಕಂಡುಕೊಂಡ ಹಾದಿ ಕಾಯಿದೆಯನ್ನು ಬದಲಿಸಿ ವಿಶ್ವವಿದ್ಯಾಲಯಗಳ ಹಕ್ಕನ್ನು ಮೊಟಕುಗೊಳಿಸುವುದು. ಶೈಕ್ಷಣಿಕ ಆಯಾಮಗಳನ್ನು ಹಸನುಗೊಳಿಸುವುದರತ್ತ ಗಮನ ಹರಿಸುವುದರ ಬದಲು ತಮ್ಮ ಅಧಿಕಾರವನ್ನು ಹೆಚ್ಚಿಸಿಕೊಳ್ಳುವುದಷ್ಟೇ ಇವರಿಗೆ ಆದ್ಯತೆಯ ವಿಷಯ.

ನಮ್ಮ ವಿಶ್ವವಿದ್ಯಾಲಯಗಳು ಸರ್ಕಾರವನ್ನು ವಿರೋಧಿಸಿರುವುದು ಬಹಳ ಅಪರೂಪ. ಅವು ಹಾಗೆ ಮಾಡಿದ್ದಿದ್ದರೆ ಶಿಕ್ಷಣದ ವ್ಯಾಪಾರೀಕರಣವು ಇಂದಿನ ಮಟ್ಟವನ್ನು ಮುಟ್ಟುತ್ತಿರಲಿಲ್ಲ. ನಮ್ಮ ಕೆಲವು ವೈದ್ಯಕೀಯ ಮತ್ತು ತಾಂತ್ರಿಕ ವಿದ್ಯಾಲಯಗಳು ಸರ್ಕಾರ ಮತ್ತು ನ್ಯಾಯಾಲಯಗಳ ಆಶೀರ್ವಾದದಿಂದ ತಲೆಯೆತ್ತಿವೆಯೇ ಹೊರತು ಸ್ವತಃ ವಿಶ್ವವಿದ್ಯಾಲಯಗಳ ಮಾನ್ಯತೆಯಿಂದಲ್ಲ. ಬೇಡದ ಕೂಸುಗಳನ್ನು ಸಲಹುವುದು ವಿಶ್ವವಿದ್ಯಾಲಯಗಳಿಗೆ ಅನಿವಾರ್ಯ ಹೊರೆಯಾಗಿದೆ. ಈ ನಿರ್ಬಂಧವನ್ನು ಇನ್ನೂ ವಿಸ್ತರಿಸುವುದು ಈಗಿನ ಉದ್ದೇಶಿತ ಬದಲಾವಣೆಯ ಮೂಲ ಆಶಯ. ಅದಕ್ಕೆ ಶಾಸನಸಭೆಯಲ್ಲಿ ವಿರೋಧಪಕ್ಷಗಳ ಬೆಂಬಲವೂ ಇದೆಯೆಂದರೆ ವ್ಯವಹಾರಗಳ ಕುದುರಿಸುವಿಕೆಯು ಯಾವ ಮಟ್ಟ ಮುಟ್ಟಿದೆಯೆಂಬುದರ ಅರಿವುಂಟಾಗುತ್ತದೆ.

ಮೂಲತಃ ಸ್ವರೂಪಮಾತ್ರದಿಂದ ವಿಶ್ವವಿದ್ಯಾಲಯವು ತನ್ನ ಘನತೆಯನ್ನು ಹೆಚ್ಚಿಸಿಕೊಳ್ಳುವುದಿಲ್ಲ. ಅದರ ಬೌದ್ಧಿಕ ಮತ್ತು ಸಾಂಸ್ಕೃತಿಕ ಕೊಡುಗೆಯೊಂದೇ ಅದರ ಹಿರಿಮೆಗೆ ಕಾರಣವಾಗಬೇಕು. ಸಮಾಜ ಅಥವಾ ಸರ್ಕಾರ ಚಾಟಿ ಹಿಡಿದು ನಿಂತರೆ ಇಂತಹ ಹಿರಿಮೆಯ ಸೃಷ್ಟಿಯಾಗುವುದಿಲ್ಲ. ಅಧಿಕಾರಶಾಹಿಯ ಹಿಡಿತಕ್ಕೆ ಒಪ್ಪಿಸುವುದರಿಂದಲೂ ಅದು ಸಾಧಿತವಾಗುವುದಿಲ್ಲ. ಅರ್ಥವತ್ತಾದ ಶೈಕ್ಷಣಿಕ ಚಟುವಟಿಕೆಗಳಿಗೆ ಸೂಕ್ತ ವಾತಾವರಣದ ನಿರ್ಮಿತಿ ಅತ್ಯಗತ್ಯ. ಸಾಮೂಹಿಕ ಭಾಗವಹಿಸುವಿಕೆ ಹಾಗೂ ನೇತೃತ್ವವಿಲ್ಲದೆ ಇದರ ನಿರ್ಮಾಣ ಕನಸಿನ ಬುತ್ತಿಯೇ ಸರಿ. ದೂರದೃಷ್ಟಿಯಾಗಲಿ, ವ್ಯವಧಾನವಾಗಲಿ ಇಲ್ಲದ ಸರ್ಕಾರಕ್ಕೆ ವಿಶ್ವವಿದ್ಯಾನಿಲಯವೆಂದರೆ ಏನೋ ಒಂದಷ್ಟು ಪಾಠ ಹೇಳಿ ಪರೀಕ್ಷೆ ನಡೆಸುವ ಯಂತ್ರವೆಂದಷ್ಟೇ ಕಾಣುತ್ತದೆ. ಪಠ್ಯಕ್ರಮದ ನಿರೂಪಣೆ, ಬೋಧನೆ, ಪರೀಕ್ಷೆ, ಮೌಲ್ಯಮಾಪನ ಇವೆಲ್ಲಾ ಅಗತ್ಯ; ಆದರೆ ಅವಷ್ಟೇ ವಿಶ್ವವಿದ್ಯಾಲಯದ ವ್ಯಾಪ್ತಿಗೆ ಒಳಪಡಲಾರವು. ಆರೋಗ್ಯಕರವಾದ ಮುಕ್ತ ಮನಸ್ಸಿನ ವ್ಯಕ್ತಿತ್ವವನ್ನು ರೂಪಿಸುವ ಹೊಣೆ ಹಾಗೂ ಶೈಕ್ಷಣಿಕ ಮೌಲ್ಯಗಳಿಗೆ ಬದ್ಧತೆಯನ್ನು ಬೆಳೆಸುವ ಕರ್ತವ್ಯವೂ ಈ ಸಂಸ್ಥೆಗಿದೆ. ವ್ಯಕ್ತಿಯ ಉತ್ಪಾದಕ ಶಕ್ತಿಯನ್ನು ಹೆಚ್ಚಿಸುವುದು ಮಾತ್ರವೇ ವಿಶ್ವವಿದ್ಯಾಲಯದ ಜವಾಬ್ದಾರಿಯಲ್ಲ. ಈ ಲಕ್ಷಣಗಳನ್ನು ಮೈಗೂಡಿಸಿಕೊಳ್ಳಲು ಅವಕಾಶ ಮಾಡಿಕೊಡದ ಯಾವುದೇ ಕಾಯಿದೆಯೂ ಸಮಾಜದ ಮೇಲಿನ ಹೊರೆಯೆಂದೇ ತಿಳಿಯಬೇಕು.

ಈಗ ಚಾಲ್ತಿಯಲ್ಲಿರುವ ಕಾಯಿದೆ ಸರ್ವಾಂಗ ಸುಂದರವಾದದ್ದೆಂದು ಇದರರ್ಥವಲ್ಲ; ಆದರೆ ಈಗಿನ ಉದ್ದೇಶಿತ ತಿದ್ದುಪಡಿಗಳು ಆ ಕಾಯಿದೆಯನ್ನು ಇನ್ನೂ ಹಿಂದಕ್ಕೆ ಎಳೆದೊಯ್ಯುತ್ತವೆ. ಸಾಮಾನ್ಯವಾಗಿ ವಿಶ್ವವಿದ್ಯಾಲಯದ ಲಕ್ಷಣಗಳಲ್ಲಿ ಸ್ವಾಯತ್ತತೆಯನ್ನು ಒಂದು ಪ್ರಮುಖ ಅಂಶವಾಗಿ ಗುರುತಿಸಲಾಗುತ್ತದೆ. ಹಾಗೆಂದರೆ, ಯಾವ ನಿಯಂತ್ರಣವೂ ಇಲ್ಲದ ಘಟಕವೆಂಬ ಗ್ರಹಿಕೆ ಸಲ್ಲದು. ೧೯೭೧ರಷ್ಟು ಹಿಂದೆ ವಿಶ್ವವಿದ್ಯಾಲಯ ಧನಸಹಾಯ ಆಯೋಗವು ಡಾ॥ ಗಜೇಂದ್ರಗಡ್ಕರ್ ನೇತೃತ್ವದಲ್ಲಿ ಒಂದು ಸಮಿತಿಯನ್ನು ರಚಿಸಿ ವಿಶ್ವವಿದ್ಯಾಲಯಗಳ ಮತ್ತು ಕಾಲೇಜುಗಳ ಆಡಳಿತ ನಿರ್ವಹಣೆಯ ಬಗ್ಗೆ ಕರಾರುವಾಕ್ಕಾದ ನಿಯಮಗಳನ್ನು ರೂಪಿಸುವಂತೆ ತಿಳಿಸಿತ್ತು. ೨೬ ಸದಸ್ಯರ ಆ ಸಮಿತಿಯಲ್ಲಿ ಎಸ್. ಎನ್. ಘೋಷಾಲ್, ನೂರುಲ್ ಹಸನ್, ಜೆ. ಪಿ. ನಾಯಕ್, ಎಸ್. ಎನ್. ಸೇನ್, ಎಂ. ಎನ್. ಶ್ರೀನಿವಾಸ್ ಮುಂತಾದವರೆಲ್ಲಾ ಇದ್ದರು. ಆ ಹೆಸರುಗಳು ಇಂದಿನ ನಮ್ಮ ಸರ್ಕಾರದ ಶಿಕ್ಷಣ ಸಚಿವಾಲಯಕ್ಕೆ ಮಹತ್ವದ್ದಾಗಿ ಕಾಣುವುದಿಲ್ಲ. ಏಕೆಂದರೆ ಅಲ್ಲಿ ನವನೀತ ರಾವ್, ಜ್ಞಾನಂ ಇತ್ಯಾದಿಗಳೇ ವಿಶಿಷ್ಟ ಶಿಕ್ಷಣವೇತ್ತರೆಂದು ಖ್ಯಾತಿ ಪಡೆದಿದ್ದಾರೆ. ಇವರ ಧೋರಣೆಗಳು ಪ್ರಜಾಪ್ರಭುತ್ವದ ಮಾದರಿಯ ದೃಷ್ಟಿಯಿಂದ ಪ್ರಶ್ನಾರ್ಹವಾದುವು. ಗಜೇಂದ್ರಗಡ್ಕರ್ ಸಮಿತಿಯು ಸ್ವಾಯತ್ತತೆಯನ್ನು ಎತ್ತಿ ಹಿಡಿಯುವಾಗ ಸಂವಿಧಾನದತ್ತವಾದ ಸರ್ಕಾರದ ಹಕ್ಕುಗಳನ್ನು ಪ್ರಶ್ನಿಸುವುದಿಲ್ಲ. ಶಾಸಕಾಂಗವು ವಿಶ್ವವಿದ್ಯಾಲಯದ ಶೈಕ್ಷಣಿಕ ಹಾಗೂ ಶಿಕ್ಷಣೇತರ ಕಾರ್ಯಕ್ರಮಗಳಲ್ಲಿ ಮೂಗು ತೂರಿಸಬಾರದು ಎಂದಷ್ಟೇ ಆ ಸಮಿತಿ ಹೇಳಿದ್ದು. ವಿಶ್ವವಿದ್ಯಾಲಯಗಳಿಗೆ ಸ್ವಾಯತ್ತತೆಯು ಒಂದು ವಿಶೇಷಾಧಿಕಾರವಲ್ಲ, ಅವುಗಳ ಕಾರ್ಯದಕ್ಷತೆಗೆ ಒಂದು ಸಾಧನ, ಅಷ್ಟೆ. ಮುಂದುವರಿದು ಸಮಿತಿಯು ಇನ್ನೊಂದಂಶವನ್ನು ಪ್ರತಿಪಾದಿಸಿತು: ವಿಶ್ವವಿದ್ಯಾಲಯದ ಅಂಗಸಂಸ್ಥೆಗಳಲ್ಲಿ ಹಿರಿಯರೆನಿಸಿಕೊಂಡವರ ಯಜಮಾನಿಕೆ ಇರಬಾರದು; ಅಲ್ಲಿನ ಎಲ್ಲ ಚರ್ಚೆಗಳೂ ಮುಕ್ತವಾಗಿ, ನಿರ್ಭಯವಾಗಿ, ವಸ್ತುನಿಷ್ಠವಾಗಿ ಇರಬೇಕಾಗುತ್ತದೆ. ಆದ್ದರಿಂದ ಹಿರಿಯರು-ಕಿರಿಯರು ಸಮಾನವಾಗಿ ಭಾಗವಹಿಸುವಂತಿರಬೇಕು. ವಿದ್ಯಾರ್ಥಿಗಳು ಹಾಗೂ ಅಧ್ಯಾಪಕರು ಜಂಟಿಯಾಗಿ ಜ್ಞಾನಾರ್ಜನೆಯಲ್ಲಿ ತೊಡಗಿರುವಾಗ ಸಾರ್ವಜನಿಕ ಹತೋಟಿಯ ಹೆಸರಿನಲ್ಲಿ ಅದಕ್ಕೆ ಕಡಿವಾಣ ಹಾಕುವಂತಿರಬಾರದು.

ಇದಕ್ಕೆ ಅನುಕೂಲವಾಗುವಂತೆ ಅಂಗಸಂಸ್ಥೆಗಳ ರಚನೆ ಹಾಗೂ ಪ್ರಾತಿನಿಧ್ಯವಿರಬೇಕೆಂದು ಸಮಿತಿ ಅಭಿಪ್ರಾಯಪಟ್ಟಿತ್ತು. ಆ ಸೂತ್ರಗಳನ್ನು ಎಲ್ಲ ರಾಜ್ಯಗಳೂ ತಮ್ಮ ವಿಶ್ವವಿದ್ಯಾಲಯಗಳ ಕಾಯಿದೆಗಳಲ್ಲಿ ಅಳವಡಿಸಿಕೊಳ್ಳಬೇಕೆಂದು ಯು. ಜಿ. ಸಿ. ನಿರ್ದೇಶಿಸಿತ್ತು. ಸೆನೆಟ್‌ನಂತಹ ಅಂಗಸಂಸ್ಥೆ, ಚುನಾವಣೆಗಳ ಮೂಲಕ ಶಿಕ್ಷಕರಿಗೆ ಹಾಗೂ ವಿದ್ಯಾರ್ಥಿಗಳಿಗೆ ಪ್ರಾತಿನಿಧ್ಯ, ಉಪಕುಲಪತಿಗಳ

ನೇಮಕಾತಿಯಲ್ಲಿ ಸರ್ಕಾರದ ಹಸ್ತಕ್ಷೇಪವಿಲ್ಲದಂತಹ ಪದ್ಧತಿ, ಕುಲಪತಿಗಳ ಸ್ವತಂತ್ರ ಕಾರ್ಯನಿರ್ವಹಣೆ, ವಿದ್ಯಾಸಂಸ್ಥೆಗಳಿಗೆ ಮಾನ್ಯತೆ ನೀಡುವಲ್ಲಿ ನಿಖರವಾದ ಕೆಲವು ಮಾರ್ಗಸೂಚಿ ಅಂಶಗಳು, ಅಧಿಕಾರಶಾಹಿಗೆ ಸೀಮಿತವಾದ ಭಾಗವಹಿಸುವಿಕೆ, ಇವೆಲ್ಲಾ ಮೂಡಿ ಬಂದಿದ್ದು ಪ್ರಜಾಪ್ರಭುತ್ವವಾದಿ ಶೈಕ್ಷಣಿಕ ಬುನಾದಿಯನ್ನು ಭದ್ರಗೊಳಿಸಬೇಕೆಂಬ ಆಶಯದಿಂದ. ಕೇಂದ್ರ ಸರ್ಕಾರ ಸಹ ಗಜೇಂದ್ರ ಗಡ್ಕರ್ ಸಮಿತಿಯ ಸಲಹೆಗಳಿಗೆ ಮಾನ್ಯತೆ ನೀಡಿದ್ದಿತು. ಸಂಕುಚಿತ ಪ್ರವೃತ್ತಿಯ ಆಡಳಿತಗಾರರಿಂದಾಗಿ ಈಗ ಈ ಸೂತ್ರಗಳನ್ನು ಸಂಪೂರ್ಣವಾಗಿ ತಳ್ಳಿಹಾಕುವ ಶೋಚನೀಯ ಪರಿಸ್ಥಿತಿ ಉಂಟಾಗಿದೆ. ಕೃಷ್ಣರವರ ಸರ್ಕಾರವು ಕಳೆದ ಮೂರು ದಶಕಗಳ ಚರಿತ್ರೆಯನ್ನು ಕಣ್ತೆತ್ತಿ ಸಹ ನೋಡದಿರಲು ಯಾವ ಮಹತ್ತರ ಪ್ರಲೋಭನೆಗಳಿವೆಯೆಂಬ ಸಂಶಯ ಬಾರದಿರುವುದಿಲ್ಲ. ಚುನಾಯಿತ ಅಧ್ಯಾಪಕ ಪ್ರತಿನಿಧಿಗಳು ವಿಶ್ವವಿದ್ಯಾಲಯದ ಪ್ರತಿಯೊಂದು ಅಂಗಸಂಸ್ಥೆಯಲ್ಲೂ ಕನಿಷ್ಠ ಶೇಕಡ ೧೫ ಇರಬೇಕೆಂದೂ, ಚುನಾಯಿತ ವಿದ್ಯಾರ್ಥಿ ಪ್ರತಿನಿಧಿಗಳು ಶೇಕಡ ೧೦ರಿಂದ ೧೫ರಷ್ಟಿರಬೇಕೆಂದೂ ಗಜೇಂದ್ರಗಡ್ಕರ್ ಸಮಿತಿ ಹೇಳಿತ್ತು. ನಮ್ಮ ದೇಶದ ಅನೇಕ ರಾಜ್ಯಗಳಲ್ಲಿ ಈಗಲೂ ಅಂತಹ ಪ್ರಾತಿನಿಧ್ಯವಿದೆ. ಆದರಿಂದಾಗಿ ಅಲ್ಲಿಯ ವಿಶ್ವವಿದ್ಯಾಲಯಗಳು ಹಾಳಾಗಿವೆಯೆಂದು ಭಾವಿಸಿದರೆ ಅದು ತರ್ಕಭ್ರಷ್ಟ ವಾದವಾಗುತ್ತದೆ.

ಚುನಾವಣೆಗಳು ಒಂದು ಪಿಡುಗು ಎಂಬ ಭಾವನೆಯು ಉದ್ದೇಶಿತ ಮಾರ್ಪಾಟಿನಲ್ಲಿ ದಟ್ಟವಾಗಿ ಪ್ರತಿಫಲಿತವಾಗಿದೆ. ಗ್ರಾಮ ಪಂಚಾಯಿತಿ ಮಟ್ಟದಲ್ಲಿ ಸಾಧುವೆಂದು ಪರಿಗಣನೆಗೆ ಬಂದಿರುವ ಚುನಾವಣೆ ವಿಶ್ವವಿದ್ಯಾಲಯಗಳ ಮಟ್ಟದಲ್ಲಿ ನಿಕೃಷ್ಟವೆಂದು ಏಕೆ ತೀರ್ಮಾನಿಸಲಾಯಿತೋ ತಿಳಿಯದು. ನಮ್ಮ ಚುನಾವಣಾ ಪ್ರಕ್ರಿಯೆಯಲ್ಲಿ ಹಲವು ದುಷ್ಟ ಜಾಡ್ಯಗಳು ಹಬ್ಬಿವೆಯೆಂಬುದು ನಿಜ. ಶಾಸನಸಭೆಗೆ ನಡೆಯುವ ಚುನಾವಣೆಯಲ್ಲಿ ಅದು ಇಲ್ಲವೇನು ? ಹಾಗೆಂದ ಮಾತ್ರಕ್ಕೆ ಚುನಾವಣೆಗಳನ್ನೇ ವರ್ಜಿಸಬೇಕೆಂದರೆ ಆದೀತೆ ? ನ್ಯೂನತೆಗಳನ್ನು ತೊಡೆದುಹಾಕಲು ಯತ್ನಿಸುವುದೊಂದೇ ನಮಗಿರುವ ಹಾದಿ. ಚುನಾವಣೆಗಳಲ್ಲಿ ನಮ್ಮ ಯುವಜನತೆಗೆ ಪರಿಶ್ರಮ ದೊರೆಯಬೇಕಾದರೆ ಚುನಾವಣೆಗಳಿರಬೇಕು; ಆದರೆ ಅದರಲ್ಲಿ ಕೂಡಿಬಂದಿರುವ ವಂಚನಾಪದ್ಧತಿಗಳನ್ನು ನಿರ್ಮೂಲ ಮಾಡಬೇಕು. ಅದು ಸಾಧ್ಯವಿಲ್ಲವೆಂದು ಬಗೆಯುವುದಾದರೆ ನಾಳೆ ಲೋಕಸಭೆಗೆ ಚುನಾವಣೆ ಮಾಡುವ ಬದಲು ಕೆಲವು ಶ್ರೀಮಂತ "ವಿದ್ಯಾವಂತರು" ನಾಮಕರಣಗೊಂಡು ದೇಶದ ನಾಯಕತ್ವ ವಹಿಸಿಕೊಳ್ಳುವ ಪರಿಪಾಠ ಬೆಳೆಯಲಿ ಎಂದು ಹೇಳಿದಂತಾಗುತ್ತದೆ. ಅದು ನಮ್ಮ ಸಂವಿಧಾನಕ್ಕೆ ತೀರಾ ವಿರುದ್ಧವಾದ ಪದ್ಧತಿ. ಅದು ಪಾಕಿಸ್ತಾನದಲ್ಲಿ ಪ್ರಸಿದ್ಧವಾಗಿದ್ದ "ನಿರ್ದೇಶಿತ ಪ್ರಜಾಪ್ರಭುತ್ವ" ಎನಿಸಿಕೊಳ್ಳುತ್ತದೆ. ಆದ್ದರಿಂದ ವಿಶ್ವವಿದ್ಯಾಲಯಗಳ ಎಲ್ಲ ಅಂಗಸಂಸ್ಥೆಗಳಲ್ಲೂ ಕೇವಲ ನಾಮಕರಣಗೊಂಡ ಸದಸ್ಯರನ್ನೂ ಸರ್ಕಾರಿ ಅಧಿಕಾರಿಗಳನ್ನೂ ತುಂಬುವುದು ಅಪ್ರಬುದ್ಧ ಮಾರ್ಗವಾಗುತ್ತದೆ, ಜನವಿರೋಧಿ ನೀತಿಯಾಗುತ್ತದೆ. ಮಾನ್ಯ ಶ್ರೀ ಎಸ್. ಎಂ. ಕೃಷ್ಣ ಅವರ ಸರ್ಕಾರ ಮಾಡಹೊರಟಿರುವುದು ಇದನ್ನೇ. ಪ್ರತಿಷ್ಠಿತರ, ವಿಶಿಷ್ಟ ಸವಲತ್ತುಗಳನ್ನು ಹೊಂದಿರುವವರ, ವಿದೇಶಿ ಗಾನಕ್ಕೆ ಕುಣಿಯುವವರ, ಮತ್ತು ಸರ್ವಾಧಿಕಾರಿ ಮನೋಭಾವದವರ ಆಣತಿಗೆ ತಕ್ಕಂತೆ ವಿಶ್ವವಿದ್ಯಾಲಯಗಳು ರೂಪಿತವಾದರೆ ನಮ್ಮ ಜನರ ಆಶೋತ್ತರಗಳು ಈಡೇರುವುದಿಲ್ಲ. ಆದ್ದರಿಂದ ಜನತೆ ಎಚ್ಚರಿಕೆ ವಹಿಸಬೇಕಾಗಿದೆ. ಬುದ್ಧಿವಂತರೆನಿಸಿಕೊಂಡ ಜನ ಈಗಾಗಲೇ ಶತಮಾನಗಳ ಕಾಲ ಜನಸಾಮಾನ್ಯರನ್ನು ಹತಾಶೆಗೆ ಸಿಲುಕಿಸುತ್ತಾ ಬಂದಿದ್ದಾರೆ. ಇಪ್ಪತ್ತೊಂದನೆಯ ಶತಮಾನದಲ್ಲೂ ಅದನ್ನು ನಾವು ಆಗಗೊಡುತ್ತೇವೆಯೇ ?

ಉದ್ದೇಶಿತ ಬದಲಾವಣೆಗಳಲ್ಲಿ ವಿಶ್ವವಿದ್ಯಾಲಯಗಳ ಶಿಕ್ಷಕರ ಹಾಗೂ ವಿದ್ಯಾರ್ಥಿಗಳ ಸಂಘಗಳನ್ನು ಸ್ವತಃ ವಿಶ್ವವಿದ್ಯಾಲಯವೇ ಸಂಘಟಿಸಿ, ಮಾರ್ಗದರ್ಶನ ನೀಡಿ, ತನ್ನ ಹತೋಟಿಯಲ್ಲಿಟ್ಟುಕೊಳ್ಳಬೇಕೆಂದು ಸೂಚಿಸಲಾಗಿದೆ (ನಿಯಮ ೪-xvii). ಇಂತಹ ಮನೋಭಾವವು ಮಧ್ಯಕಾಲೀನ ಮೃಗೀಯ ಪ್ರಭುತ್ವಕ್ಕೆ ತಕ್ಕುದಾದ್ದು. ಅಂಥದನ್ನು ಸೂಚಿಸುವ ಸರ್ಕಾರಕ್ಕೆ ಜನ ಏನೆನ್ನಬೇಕು ! ಇನ್ನೊಂದು ನಿಯಮದ ಪ್ರಕಾರ (ನಿ. ೫) ನಮ್ಮ ರಾಜ್ಯದ ವಿದ್ಯಾಲಯಗಳು ವಿದೇಶಿ ವಿಶ್ವವಿದ್ಯಾಲಯಗಳ ಅಧೀನದಲ್ಲಿದ್ದು ಕೆಲಸ ಮಾಡಬಹುದು. ಜಾಗತೀಕರಣದ ಗಂಡಾಂತರಗಳಲ್ಲಿ ಇದೊಂದು ಹೊಸ ನಮೂನೆ, ಅಪಾಯಕಾರಿ ಬೆಳವಣಿಗೆ. ನಿಯಮ ೧೪ (೨)ರ ಪ್ರಕಾರ ವಿಶ್ವವಿದ್ಯಾಲಯಗಳ ಎಲ್ಲ ಚಟುವಟಿಕೆಗಳನ್ನೂ ಸರ್ಕಾರವು ತಾನೇ ನೇರವಾಗಿ ನಿಯಂತ್ರಿಸುತ್ತದೆ. ಕುಲಪತಿಗಳಿಗಾಗಲಿ ಸ್ವಾಯತ್ತೆಗಾಗಲಿ ಇಲ್ಲಿ ಮಾನ್ಯತೆ ಇಲ್ಲ. ಶಿಕ್ಷಣ ಇಲಾಖೆಯ ಕಾರ್ಯದರ್ಶಿಯು ರಾಜ್ಯದ ಎಲ್ಲ ವಿಶ್ವವಿದ್ಯಾಲಯಗಳ ಅಧಿಪತಿಯೂ ಆಗಿಬಿಡುತ್ತಾನೆ. ನಿಯಮ ೨೫ರಂತೆ ಸೆನೆಟ್ ಇಲ್ಲವಾಗುತ್ತದೆ. ಎಲ್ಲೂ ಚುನಾಯಿತ ಪ್ರತಿನಿಧಿಗಳಿರುವುದಿಲ್ಲ, ನಾಮಕರಣಗೊಳ್ಳುವವರಲ್ಲಿ ಉದ್ಯಮಪತಿಗಳಿರುತ್ತಾರೆ, ಆದರೆ ರೈತ-ಕಾರ್ಮಿಕರ ಪ್ರತಿನಿಧಿಗಳಿರುವುದಿಲ್ಲ. ಶಿಕ್ಷಕರ-ವಿದ್ಯಾರ್ಥಿಗಳ ಪ್ರತಿನಿಧಿಗಳಿರುವುದಿಲ್ಲ. ನಿಯಮ ೨೬ರಂತೆ ಸಿಂಡಿಕೇಟ್ ಭರ್ತಿ ನಾಮಕರಣಗೊಂಡ ಅಧಿಕಾರಿಗಳೇ ಇರುತ್ತಾರೆ. ಶೈಕ್ಷಣಿಕ ವಿಚಾರಗಳನ್ನು ತೀರ್ಮಾನಿಸುವ ಅಕೆಡೆಮಿಕ್ ಕೌನ್ಸಿಲ್‌ನಲ್ಲಿ ಎಲ್ಲ ವಿಭಾಗಗಳಿಗೂ ಪ್ರಾತಿನಿಧ್ಯವಿಲ್ಲ; ಉದಾಹರಣೆಗೆ ಹೇಳುವುದಾದರೆ, ಪರಮಾಣು ಭೌತಶಾಸ್ತ್ರದ ಪಠ್ಯಕ್ರಮದ ಚರ್ಚೆ ನಡೆದು ತೀರ್ಮಾನ ಕೈಗೊಳ್ಳುವಾಗ ಆ ವಿಭಾಗದ ಪರಿಣತರೊಬ್ಬರಾದರೂ ಇರಬೇಕೆಂಬ ನಿರ್ಬಂಧವಿಲ್ಲ !

ಇಂತಹ ಇನ್ನೂ ಎಷ್ಟೋ ಬಾಲಿಶ ಬದಲಾವಣೆಗಳನ್ನು ಹೊಸ ಕಾಯಿದೆಯಲ್ಲಿ ಸೇರ್ಪಡೆ ಮಾಡುವ ಉದ್ದೇಶ ಕರ್ನಾಟಕ ಸರ್ಕಾರಕ್ಕಿದೆ. ಅದೂ ಸುಧಾರಣೆಯ ಹೆಸರಿನಲ್ಲಿ! ಇಡೀ ವಿಧೇಯಕವು ಈಗ ಶಾಸನಸಭೆಯ ಜಂಟಿ ಸಮಿತಿಯ ಮುಂದಿದೆ. ಪ್ರಜಾಪ್ರಭುತ್ವ ವಿರೋಧಿ ತಂತ್ರಗಳನ್ನು ಈ ಸಮಿತಿ ಒಪ್ಪಬಾರದೆಂದು ಸಾರ್ವಜನಿಕರು, ಪೋಷಕರು, ವಿದ್ಯಾರ್ಥಿಗಳು ಹಾಗೂ ಅಧ್ಯಾಪಕ ವೃಂದ ಆಗ್ರಹಪಡಿಸಬೇಕು. ವ್ಯಾಪಾರೀಕರಣ ಮತ್ತು ಸ್ವೇಚ್ಛಾಚಾರಗಳನ್ನು ವಿಶ್ವವಿದ್ಯಾಲಯಗಳಲ್ಲಿ ತಡೆಗಟ್ಟಬೇಕಾದ್ದು ನಮ್ಮ ಶಾಸಕರ ಜವಾಬ್ದಾರಿಯಾಗಿದೆ. ಶೈಕ್ಷಣಿಕ ಶಿಸ್ತನ್ನು ಉನ್ನತ ಮಟ್ಟದಲ್ಲಿ ನೆಲೆಗೊಳಿಸುವಂತೆ ಮಾಡದಿದ್ದರೆ ನಮ್ಮ ವಿಶ್ವವಿದ್ಯಾಲಯಗಳು ಯಾವ ಸಾಮಾಜಿಕ ಆಕಾಂಕ್ಷೆಗಳನ್ನು ತಾನೆ ಪೂರೈಸಬಲ್ಲವು ? ಪ್ರಸ್ತುತ ಶಾಸನಸಭೆಯ ಅಂಗೀಕಾರಕ್ಕೆಂದು ಮಂಡಿಸಲಾಗಿರುವ ತಿದ್ದುಪಡಿಗಳನ್ನು ತಳ್ಳಿಹಾಕಿ ವಿಶ್ವವಿದ್ಯಾಲಯಗಳು ಜನತೆಯ ಅವಶ್ಯಕತೆಗಳಿಗೆ ಸ್ಪಂದಿಸಲು ನೆರವಾಗುವಂತೆ ಬೇರೆ ಅಗತ್ಯ ಬದಲಾವಣೆಗಳನ್ನು ಸೂಚಿಸುವುದು ಶಾಸನಸಭೆಯ ಜವಾಬ್ದಾರಿಯಾಗಿದೆ. ಯಾವ ಹಂತದಲ್ಲೇ ಆಗಲಿ, ಯಾವುದೇ ಸ್ವರೂಪದಲ್ಲೇ ಆಗಲಿ, ಪ್ರಜಾಪ್ರಭುತ್ವದ ಕಾರ್ಯತಂತ್ರವನ್ನು ಗಾಳಿಗೆ ತೂರಲು ಹವಣಿಸಿದರೆ ಕರ್ನಾಟಕದ ಸರ್ಕಾರಕ್ಕೆ ಜನತೆ ತನ್ನ ಪ್ರಬಲವಾದ ವಿರೋಧವನ್ನು ಕ್ರಿಯಾತ್ಮಕವಾಗಿ ತೋರ್ಪಡಿಸಬೇಕಾಗುತ್ತದೆ. ಕೃಷ್ಣ-ಪರಮೇಶ್ವರರು ಸದ್ಯದ ತಿದ್ದುಪಡಿಗಳನ್ನು ರದ್ದುಗೊಳಿಸಿ ಬೇರೆ ಶುಭ್ರವಾದ, ಜನಪರವಾದ, ಸ್ವಾಯತ್ತೆಯ ಪರವಾದ, ಶಿಕ್ಷಣದ ಪರವಾದ ವಿಧೇಯಕಗಳನ್ನು ಮಂಡಿಸಲಿ; ಅವನ್ನು ಸ್ವಾಗತಿಸಲು ನಾವು ಸಿದ್ಧರಾಗೋಣ.

ತಿಂಗಳ ಪತ್ರಿಕೆ
ಹೊಸತು
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ



ಚಂದಾ ವಿವರಗಳು

| | |
|---|---|
| ಬಿಡಿ ಸಂಚಿಕೆ | ರೂ. ೧೦/- |
| ವಾರ್ಷಿಕ ಚಂದಾ | ರೂ. ೧೦೦/- |
| ಎರಡು ವರ್ಷಗಳಿಗೆ | ರೂ. ೧೮೦/- |
| ಮೂರು ವರ್ಷಗಳಿಗೆ | ರೂ. ೨೫೦/- |

ನವಕರ್ನಾಟಕ ಶಾಖೆಗಳು

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು-೫೬೦ ೦೦೯ ✆ : ೨೨೫೧೩೮೨
ಕೆಂಪೇಗೌಡ ವೃತ್ತದ ಬಳಿ
ಬೆಂಗಳೂರು - ೫೬೦ ೦೦೯ ✆ : ೨೮೭೨೩೮೫
ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫೦೦೧ ✆ : ೪೪೧೦೧೬
ರಾಮಸ್ವಾಮಿ ವೃತ್ತ
ಮೈಸೂರು - ೫೭೦೦೨೪ ✆ : ೪೨೪೦೯೪
ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫೧೦೨ ✆ : ೨೪೩೦೨

## ವಿಶೇಷ ಸಂಚಿಕೆಯ ವಿಶೇಷ

A thing of beauty is a joy for ever - ಸುಂದರ ವಸ್ತು ಸದಾ ಸಂತೋಷದಾಯಕ ಎಂದನು ಕೀಟ್ಸ್ ಕವಿ. ಇದೀಗತಾನೇ (೪-೧-೨೦೦೧, ಸಂಜೆ ೪ ಗಂಟೆ) ಬಂದ ನಿಮ್ಮ ವಿಶೇಷ ಸಂಚಿಕೆ ಕೈಗೆತ್ತಿಕೊಂಡಾಗ, ಅದರ ಪುಟಗಳನ್ನು ತಿರುವಿಹಾಕಿದಾಗ, ಈ ಬೃಹತ್ಕಾರ್ಯದ ಹಿನ್ನೆಲೆಯಲ್ಲಿ ಸಂಘಟಿಸಿದ ಚೇತನಗಳನ್ನು ಕಲ್ಪಿಸಿಕೊಂಡಾಗ ಮೂಡಿದ್ದು ಕೃತಾರ್ಥತೆ.

*ಮೈಸೂರು* — *ಜಿ. ಟಿ. ನಾರಾಯಣ ರಾವ್*

ಜನವರಿ ೨೦೦೧ ರ 'ಹೊಸತು' ವಿಶೇಷ ಸಂಚಿಕೆ ಬಂತು. ಇನ್ನೂ ಪೂರ್ತಿ ಓದಿಲ್ಲ. ಸಾವಕಾಶವಾಗಿ ಓದುತ್ತೇನೆ. ಒಮ್ಮೆ ತಿರುವಿಹಾಕಿದೆ. 'ಹೊಸತು'ವಿನ ವಿಶೇಷ ಸಂಚಿಕೆ, ಇನ್ನಿತರ ವಿಶೇಷ ಸಂಚಿಕೆಗಳಂತೆ, ಓದಿ ಪಕ್ಕಕ್ಕಿಡುವ ಪೈಕಿಯದಲ್ಲ. ಸಂಗ್ರಹ ಯೋಗ್ಯವಾಗಿದೆ. ಅದೇ ವಿಶೇಷ.

*ಬೆಂಗಳೂರು* — *ಗುಬ್ಬಿ ರೇವಣಾರಾಧ್ಯ*

ಜನವರಿ ತಿಂಗಳ 'ಹೊಸತು' ಪತ್ರಿಕೆಯ ಮುಖಪುಟ ಹಾಗೂ ಕಥೆ, ಸೈದ್ಧಾಂತಿಕ ವಿಷಯಗಳು ಚೆನ್ನಾಗಿ ಮೂಡಿ ಬಂದಿವೆ. ವಾಸ್ತವ ಕಥೆಯು ಚೆನ್ನಾಗಿಯೇ ಬಂದಿದೆ. ಹೀಗೆ ಪ್ರತಿ ತಿಂಗಳೂ ಇಂತಹ ವಿಷಯಗಳು ಮೂಡಿಬರಲಿ.

*ಮೈಸೂರು* — *ಎ. ಜಗದೀಶ್, ಎಂ. ಸದಾಶಿವ*
*ಎಸ್. ಸಂಗಮೇಶ, ಎಸ್. ಬಾಬು*

ಸೈದ್ಧಾಂತಿಕ, ರಾಜಕೀಯ, ಸಾಮಾಜಿಕ ವಿಚಾರಗಳನ್ನು ಸಮಸ್ಯೆಗಳನ್ನು ತರ್ಕಬದ್ಧವಾಗಿ ವಿಶ್ಲೇಷಿಸಿ, ಜನಪರ ಅಭ್ಯುದಯದ ಚಿಂತನೆಯ ಲೇಖನಗಳ ಸಮೃದ್ಧತೆಯಿಂದ ತುಂಬಿದ ನವವರ್ಷದ ಆರಂಭ ಸಂಚಿಕೆ ಅತ್ಯುತ್ತಮವಾಗಿ ಮೂಡಿಬಂದಿದೆ. 'ನೆಮ್ಮದಿಯ ನಾಳೆ ನಮ್ಮದು' ಎಂಬ ವಾಕ್ಯ ಓದುಗರಿಗೆ ಹೊಸತೊಂದು ಚಿಂತನೆಯ, ಸಮಾಜದ, ಭವಿಷ್ಯದ ದೀಪಸ್ತಂಭವಾಗಿರುವಂತೆ ಅರ್ಥಗರ್ಭಿತವಾಗಿದೆ.

*ಕಾಸರಗೋಡು* — *ಬಿ. ಶ್ರೀಧರಭಟ್, ಪೈವಳಿಕೆ*

'ಹೊಸತು' ತುಂಬ ಆಕರ್ಷಕವಾಗಿ ಬಂದಿದೆ. ಪರಿವಿಡಿ ನೋಡಿದರಂತೂ ಒಂದಕ್ಕಿಂತ ಒಂದು ಕುತೂಹಲ ಕೆರಳಿಸುತ್ತದೆ. ತುಂಬ ಸಂತೋಷ.

*ಹೊನ್ನಾವರ* — *ಆರ್. ವಿ. ಭಂಡಾರಿ*

ಹೊಳಹಿನ ಸವಿಯತ್ತ ತುಡಿಯುವವನಿಗೆ 'ಹೊಸತು' ಹಳತೆನಿಸಲಿಕ್ಕಿಲ್ಲ. ಅಗ್ಗದ ಪ್ರಚಾರ ತಂತ್ರಗಳ ನವೀಕೃತ ರೂಪದ ಕಿರಿಕಿರಿ ಇಲ್ಲದಿರುವುದಕ್ಕೋ ಏನೋ, 'ಹೊಸತು' ಇಷ್ಟವಾಯಿತು.

ಹೊಸತರ ಆಶಯಕ್ಕೆ ಸ್ಪಂದಿಸುವ ಅಗತ್ಯದಲ್ಲೇ ಸಾಮಾಜಿಕ ಚಿಂತನೆಯ ಪುನಾರಚನೆಯ ಗಂಧವಿದೆ ಎಂದು ನನಗನ್ನಿಸುತ್ತದೆ. ಆದ್ದರಿಂದಲೇ, ಅತಿವರ್ಣದ ಬೆಡಗಿನ ಬೇಗಡೆಯಿಲ್ಲದಿದ್ದರೂ 'ಹೊಸತು' ಆಪ್ತವಾಗುತ್ತದೆ.

ಮೌಲ್ಯಯುತ ಬರೆಹಗಳ ಮಾಸಿಕ ಹೊತ್ತಗೆಯೊಂದು ಇಷ್ಟೊಂದು Simple ಆಗಿ, ಸನ್ನಿರೀಕ್ಷೆಗಳ Sample ಆಗಿ ಹೊರಬರುವಂತೆ ರೂಪಿಸುವುದು ಸುಲಭದ ಕೆಲಸವಲ್ಲ. ನಿಮ್ಮ ಧೈರ್ಯ-ಸಾಹಸವನ್ನು ಅಭಿನಂದಿಸುತ್ತೇನೆ.

ಪ್ರಿಂಟಿಂಗ್ ಚೆನ್ನಾಗಿದೆ. Layout ಕೂಡ ಉತ್ತಮವಾಗಿದೆ. ಬರೆಹಗಳ ಆಯ್ಕೆಯಲ್ಲಿ ಪ್ರಸಿದ್ಧಿಗೆ ಪ್ರಾಶಸ್ತ್ಯನೀಡದ ದೃಢತೆ ನಿಮ್ಮದಾಗಲಿ, ಬೌದ್ಧಿಕ ಬದಲಾವಣೆಯ ಇತ್ಯಾತ್ಮಕತೆಯಲ್ಲಿ - 'ಹೊಸತು' ಇನ್ನಷ್ಟು ಹೊಸತಾಗಲಿ.

*ಪುತ್ತೂರು* — ***ಗಂಗಾಧರ್ ಬೆಳ್ಳಾರೆ***




'ಹೊಸತು' ವಿಶೇಷ ಸಂಚಿಕೆ ವಿಷಯ ವೈವಿಧ್ಯತೆಗಳಿಂದ ತುಂಬಿದೆ... ಸಂಚಿಕೆಯೇ ಸಮೃದ್ಧವಾಗಿದೆ. ದೇಶದ ವಿದ್ಯಮಾನಗಳನ್ನು ಬೆರಳ ತುದಿಯಲ್ಲಿ ವ್ಯಾಖ್ಯಾನಿಸುವ ''ಸಂಪಾದಕೀಯ''ದಲ್ಲಿನ ನಿಮ್ಮ ವಿಚಾರ ಸಾಮರ್ಥ್ಯ, ಶ್ಲಾಘನೀಯ... ವಯೋಧರ್ಮವನ್ನು ಮೀರಿಸಿ ದುಡಿಯುವ ನಿಮ್ಮ ಶಕ್ತಿ ಸಂಕಲ್ಪಗಳಿಗೆ ನನ್ನ ನಮಸ್ಕಾರಗಳು ಸಲ್ಲುತ್ತವೆ.

*ಮೈಸೂರು* — **ಪ್ರೊ. ಮ. ನ. ಜವರಯ್ಯ**

## ಅನಾಮಿಕನ ಅಳಲು

'ಈ ಹಾಲು ಮೊಸರು ನನ್ನ ಮೇಲೆ ಸುರಿಯುವುದರ ಬದಲು ಬಡವರಿಗಾದರೂ ದಾನ ಮಾಡಿದ್ದರೆ', ವೇಣೂರ ಬಾಹುಬಲಿಗೆ ಮಸ್ತಕಾಭಿಷೇಕ ಈ ಮೇಲಿನ ಹೇಳಿಕೆಯನ್ನು ನೀವು ನಿಮ್ಮ ಮಾಸಿಕ ಪತ್ರಿಕೆಯ ವ್ಯಂಗ್ಯಚಿತ್ರ ವಿಭಾಗದಲ್ಲಿ ಕೊಟ್ಟಿರುವಿರಿ. ದಾನ ಮಾಡುವುದು ನಮ್ಮ ಸಮಾಜಕ್ಕೆ ಗೊತ್ತಿದೆ, ಅದನ್ನ ನೀವು ಆ ರೀತಿ ಕೊಟ್ಟಿರುವುದರಿಂದ ಕಲಿಯಬೇಕಾದ ಅಗತ್ಯವಿಲ್ಲ. ಅದನ್ನು ಬೇಕಾದರೆ ನೀವು ಕಲಿತುಕೊಳ್ಳಬಹುದು. ಈ ಪತ್ರ ನಿಮಗೆ ಒಂದು ಎಚ್ಚರಿಕೆ. ಹಿಂದೂ ಸಮಾಜದ ಯಾವುದೇ ದೇವತೆಗಳ ಬಗ್ಗೆ ಆ ರೀತಿ ಏನಾದರೂ ಹೇಳಿಕೆ ಬಂದರೆ ಅದಕ್ಕೆ ಯಾವ ರೀತಿ ಸ್ಪಂದಿಸಬೇಕು ಅಂತ ನಮಗೆ ಗೊತ್ತು. ಹಾಗೆಯೇ ನಾವು ಅದಕ್ಕೆ ಸಿದ್ಧವೂ ಇದ್ದೇವೆ.

*(ಈ ಮಹಾಶಯ ವಿಳಾಸ ನೀಡಿಲ್ಲ)* — ***ಅನಾಮಿಕ***

ವಿಶೇಷ ಸಂಚಿಕೆ 'ಹೊಸತು' ಆಹ್ಲಾದನೀಯ ವಿಚಾರಗಳ ಮಂಥನಕ್ಕೆ ಅವಕಾಶ ಮಾಡಿಕೊಟ್ಟಿದೆ. ಅಲ್ಲದೆ ಸನ್ನಡತೆಯ ಮೌಲ್ಯಯುತ ವೈಚಾರಿಕ ಕಟ್ಟುಪಾಡುಗಳನ್ನು ಒಳಗೊಂಡ ಅನುಮೋದನೆಯನ್ನು ಸಂಘಟಿಸಲು ಚಿಂತನೆಗೆ ಒತ್ತುಕೊಟ್ಟಿದೆ. ಚಿಂತಕನಿಗೆ 'ಹೊಸತು' ಹೊಸತಾಗಿ ಸಿಕ್ಕುವ ಕರೆಗಂಟೆಯಾಗಿದೆ. ಕಲ್ಪನೆಗೂ ಅವಕಾಶ ಮಾಡಿಕೊಡದ ಈ ಸಂಚಿಕೆಯು ಓದುಗ ಬಳಗಕ್ಕೂ ಪತ್ರಿಕಾ ಮನದಟ್ಟಿನ ಬೆಳವಣಿಗೆಯಲ್ಲಿಯೂ ಜೀವನ ಪದ್ಧತಿಯನ್ನು ಕಂಡುಕೊಳ್ಳುವಂತೆ ಮಾಡುವ ಅತ್ಯಂತ ಗಟ್ಟಿತನದ ಆತ್ಮೀಯ ಪತ್ರಿಕೆಯಾಗಿದೆ.

*ಬೆಂಗಳೂರು* — ***ಹ. ಚ. ಸತ್ಯನಾರಾಯಣ ಉರಾಳ***

'ಹೊಸತು' ವಿಶೇಷ ಸಂಚಿಕೆ ಅದ್ಭುತವಾಗಿ ಹೊರ ಬಂದಿದೆ. ಅನೇಕ ಪ್ರತಿಭಾವಂತರ ಜನಪರವಾದ ವಿಚಾರಗಳು ಅಲ್ಲಿ ವ್ಯಕ್ತವಾಗಿವೆ. ಅದು ಮತ್ತಷ್ಟು ಓದುಗರನ್ನು ತೆಕ್ಕೆಯಲ್ಲಿ ಬರಮಾಡಿಕೊಳ್ಳುತ್ತದೆ ಎಂದು ನಾನು ಭಾವಿಸುತ್ತೇನೆ.

*ದಾವಣಗೆರೆ* — *ಬಿ. ವಿ. ವೀರಭದ್ರಪ್ಪ*

ಡಿಸೆಂಬರ್ 'ಹೊಸತು'ವಿನ ಸಂಪಾದಕೀಯದಲ್ಲಿ 'ಮಾನವ ಹಕ್ಕುಗಳ' ಬಗ್ಗೆ ಅತಿ ಉತ್ಕೃಷ್ಟ ಮಂಡನೆಯನ್ನು ಮಾಡುತ್ತಾ ತಾವು ಕೆಲವೊಂದು ಕಡೆ ಅವಾಸ್ತವ ನಿಲುವು ತಳೆದಿರುವುದು ಆರೋಗ್ಯಕರವಲ್ಲ. ಭಾರತದ ಮಾನವ ಹಕ್ಕುಗಳ ಜಟಿಲತೆ, ಸರ್ಕಾರ ನಕ್ಸಲೀಯರ ಹಕ್ಕುಗಳನ್ನು ಮೊದಲು ಬಗೆಹರಿಸದೆ ನಂತರ ಅವರನ್ನು ಗಮನಿಸಿ, ಸಾರ್ವಜನಿಕ ಹಕ್ಕುಗಳ ಹಿತರಕ್ಷಣೆಗೆ ದಾರಿಮಾಡಿದ ಕಾರಣ ಕೊಡುತ್ತದೆ ಎಂಬ ನಿಂದೆ ಮಾಡಿದ್ದೀರಿ. ನಕ್ಸಲೀಯ ಉದ್ಯಮ ಆವಿರ್ಭವಿಸಿದಾಗಿನ ಸ್ಥಿತಿಗಳೂ, ಸಿದ್ಧಾಂತಗಳೂ ಈಗ ಲವಲೇಶವೂ ಇಲ್ಲವೆಂಬುದು ಗಮನಾರ್ಹ.

ಆದರೆ ಸೈದ್ಧಾಂತಿಕವಾದಿಗಳ ನಕ್ಸಲೀಯ ದಳಗಳು ಗಿರಿಜನಾಭಿವೃದ್ಧಿಗಾಗಿ ಆಂಧ್ರದ ಭಾಗಗಳಲ್ಲಿ ಶ್ರಮಿಸಿದ, ಶ್ರಮಿಸುತ್ತಿರುವ ಸಾಧನೆಗಳು ಅದ್ಭುತಗಳೇ ಆದರೂ - ಮಾನವ ಹಕ್ಕುಗಳ ಹೆಸರಲ್ಲಿ ನೀವು ಪೂರ್ಣ ಉದ್ಯಮವನ್ನು ಬೆಂಬಲಿಸುವುದು 'ಅಕ್ಷಮ್ಯ'. ಮಿಕ್ಕಂತೆ ಲೇಖನ ಸಂಗ್ರಾಹ್ಯ ಯೋಗ್ಯ, ಧನ್ಯವಾದಗಳು.

*ಪಾವಗಡ* — **ಕೆ. ಪುರುಷೋತ್ತಮ ರೆಡ್ಡಿ**

### ಹನಿಗವನಗಳಿಗೆ ಆಹ್ವಾನ

ಗುರುರಾಜ ಪ್ರಕಾಶನವು "ಪ್ರೇಮ" ಎಂಬ ಹಾಸ್ಯ ಹನಿಗವನ ಸಂಕಲನವನ್ನು ಹೊರತರಲು ಉದ್ದೇಶಿಸಿದೆ. ಆಸಕ್ತಿಯುಳ್ಳವರು ಹತ್ತು ಸಾಲು ಮೀರದ "ಪ್ರೀತಿ, ಪ್ರೇಮ, ಪ್ರಣಯ"ಕ್ಕೆ ಸಂಬಂಧಪಟ್ಟಂತಹ ನಾಲ್ಕು ಹಾಸ್ಯ ಹನಿಗವನಗಳನ್ನು ಕೋ. ಲ. ರಂಗನಾಥರಾವ್, ಸಿ-೨, ಸಿ.ಪಿ.ಡಬ್ಲ್ಯು.ಡಿ. ಕ್ವಾರ್ಟರ್ಸ್, ವಿಜಯನಗರ, ಬೆಂಗಳೂರು - ೫೬೦೦೪೦ ವಿಳಾಸಕ್ಕೆ ೨೮-೨-೨೦೦೧ ಒಳಗೆ ಕಳುಹಿಸಲು ಕೋರಿದೆ.

# ಭೂಪಾಲ್ ಗ್ಯಾಸ್ ದುರಂತ

## ಪಾರ್ಥಸಾರಥಿ

**ಭೂ**ಪಾಲ್ ಗ್ಯಾಸ್ ದುರಂತ ನೆನೆಸಿಕೊಂಡಾಗಲೆಲ್ಲಾ ಈಗಲೂ ನನ್ನ ರಕ್ತ ಕುದಿಯುತ್ತದೆ. ಸ್ನಾಯುಗಳು ಸೆಟೆಯುತ್ತವೆ. ಹಲ್ಲುಗಳು ಕಟಕಟಾಯಿಸುತ್ತವೆ. ದುಃಸ್ವಪ್ನ ಕಾಡಿಸುತ್ತದೆ. ಅಸಹಾಯಕ ಕೋಪ ಉಕ್ಕೇರುತ್ತದೆ. ಒಂದು ಯಃಕಶ್ಚಿತ್ ಬಹುರಾಷ್ಟ್ರೀಯ ಕಂಪೆನಿಯ – ಯೂನಿಯನ್ ಕಾರ್ಬೈಡ್‌ನ – ಮುಂದೆ ನಮ್ಮ ಘನ ಸರ್ಕಾರ ಸೋತು ಹೋಯಿತೆ ಎಂದು ಪರಿತಾಪ, ಅವಮಾನ, ವಿಷಾದ, ಅಪರಾಧ ಪ್ರಜ್ಞೆ ಎಲ್ಲ ಒಟ್ಟಿಗೇ ಘೇರಾಯಿಸುತ್ತವೆ.

ನ್ಯಾಯಾಲಯದಲ್ಲಿ ಅಷ್ಟು ಕಡಿಮೆ ಪರಿಹಾರಧನ ಒಪ್ಪುವಂತೆ ತೀರ್ಮಾನವಿತ್ತ ನ್ಯಾಯಾಧೀಶರನ್ನು ದಿ ಹೇಗ್ ನಗರದಲ್ಲಿರುವ ಅಂತರರಾಷ್ಟ್ರೀಯ ನ್ಯಾಯಾಲಯದಲ್ಲಿ ನ್ಯಾಯಾಧೀಶರನ್ನಾಗಿ ನೇಮಿಸಿಕೊಂಡಿದ್ದು ಆಕಸ್ಮಿಕವೇ ? ಅದೆಂಥ ವಿಚಾರಣೆ ! ಯೂನಿಯನ್ ಕಾರ್ಬೈಡ್ ಹೇಳಿತು : ನಾನು ಇಂತಿಷ್ಟೇ ಹಣ ಆಖೈರಾಗಿ ನೀಡುವುದು, ನನ್ನ ವಿರುದ್ಧ ದಿಲ್ಲಿ ಮೊಕದ್ದಮೆಗಳನ್ನು ಕೈಬಿಟ್ಟರೆ ಮಾತ್ರ. ಎಂಥ ಆದೇಶ ! ದುರಂತದ ಕಾರಣವನ್ನು ಮೊದಲಿಗೆ ಪರಿಶೋಧಿಸಿದ ಆ ವಿಜ್ಞಾನಿ - ಆಡಳಿತಾಧಿಕಾರಿಯನ್ನು ಸೊಲ್ಲಿಲ್ಲದೆ ಬಾಯಿ ಮುಚ್ಚಿಸಿಬಿಟ್ಟರಲ್ಲಾ ! ಅವರು ಸಾಯುವುದಕ್ಕೆ ಮುಂಚೆ ತಮಗೆ ತಿಳಿದಿದ್ದನ್ನು ಬರೆದಿಟ್ಟಾದರೂ ಹೋದಾರು, ಮುಂದಿನ ಪೀಳಿಗೆಗೆ ತಿಳಿಯಲಿ ಅಂತ. ಅಮೆರಿಕದ ಕೋರ್ಟುಗಳಲ್ಲಿ ದಾವೆ ತರದಂತೆ ಹತ್ತಾರು ತಡೆ ಒಡ್ಡಿದರಲ್ಲಾ? ಈ ಎಲ್ಲ ಸಂಗತಿಗಳ ಹಿಂದಿನ ಒಳಸಂಚುಗಳನ್ನು ಬಹಿರಂಗ ಮಾಡದೆ, ಬೋಫರ್ಸ್ ಬಗ್ಗೆ ಪದೇ ಪದೇ ಗುಲ್ಲೆಬ್ಬಿಸುವ ರಾಜಕೀಯ ಪಕ್ಷಗಳೇ, ಈ ಬಗ್ಗೆ ಗಪ್‌ಚಿಪ್ ಆಗಿರುವುದರ ಅಂತರ್ಯವೇನು ? ಬೋಫರ್ಸ್‌ನಲ್ಲಿ ಲಂಚವೆಂಬುದು ಇಷ್ಟಕ್ಕೂ ಕೇವಲ ರೂ. ೬೪ ಕೋಟಿ. ಈಗ ಕಂಡಂತೆಯೇ ಸಾವಿರಾರು ಕೋಟಿಗಳ ಹಗಲು ದರೋಡೆಯ ಪ್ರಸಂಗಗಳು ಸರ್ವೇಸಾಮಾನ್ಯ. ರಾಜೀವ್ ಗಾಂಧಿ ಸತ್ತಾಯ್ತು. ಆದರೆ ಭೂಪಾಲ್‌ನಲ್ಲಿ ಲಕ್ಷಾಂತರ ಜೀವಚ್ಛವಗಳು ಸಾಯಲಾರದೆ ಇನ್ನೂ ಹಲವಾರು ಪೀಳಿಗೆಗಳವರೆಗೆ ನರಳುತ್ತಲೇ ಇರುತ್ತವೆ. ಇದಕ್ಕೆ ಸ್ವಲ್ಪವೂ ಕರಗದ ಮುಂದಾಳುಗಳ ಅಂತಃಕರಣ ಅದೆಂಥ ಪಾಷಾಣ ಸದೃಶವೋ!

ಇವರೆಲ್ಲರನ್ನೂ ಒಳಹಾಕಿಕೊಂಡಿರುವ ಆ ಕ್ರೂರ ಕಂಪೆನಿ ಇನ್ನೂ ಈ ದೇಶದಲ್ಲಿ ವ್ಯಾಪಾರ ಮಾಡುತ್ತಾ ಪ್ರವರ್ಧಮಾನವಾಗುತ್ತಿರುವುದು ವೈಯಕ್ತಿಕವಾಗಿ ದೇಶದ ಪ್ರತಿಯೊಬ್ಬ ಪ್ರಜೆಯೂ ಚಿಂತಿಸಬೇಕಾದ ವಿಷಯ. ಸಂಘಪರಿವಾರದವರು ಹೇಳುವ ಆ ''ರಾಷ್ಟ್ರೀಯ ಸಂವೇದನೆ'' ಅದೆಲ್ಲಿದೆಯೋ! ಅವರಲ್ಲಂತೂ ಇದ್ದಂತಿಲ್ಲ. ಕೊನೆಯ ಪಕ್ಷ ಆ ಕಂಪೆನಿಯ ಒಂದು ಸರಕನ್ನಾದರೂ ಪ್ರಜೆಗಳು ಕೊಳ್ಳದಂತೆ ಬಹಿಷ್ಕಾರ ಹಾಕಲಾಗುತ್ತಿರಲಿಲ್ಲವೆ? ಈಗ ಉತ್ತಮವಾದ ಬ್ಯಾಟರಿಗಳು ಬೇಕಾದಷ್ಟು ಬಂದಿದ್ದು, ಎವರ್‌ರೆಡಿ ಬ್ಯಾಟರಿಯ ಅಗತ್ಯವಾದರೂ ಏನು? ನಮ್ಮ ಕೋಪ ಪ್ರದರ್ಶಿಸಲು ಇಷ್ಟೂ ಮಾಡಲಾರೆವೆ ?

ಬಹುರಾಷ್ಟ್ರೀಯ ಬಂಡವಾಳ ಹೂಡಿಕೆ ಒಪ್ಪಂದ ಆದ ಮೇಲೆ ಹೀಗೆ ಬರೆಯುವುದೂ ಅಪರಾಧವಾಗಬಹುದು. ಅದಕ್ಕೆ ಮುಂಚೆ ಈ ಒಂದು ಕೆಲಸವನ್ನಾದರೂ ಭೂಪಾಲದ ಗ್ಯಾಸ್ ಪೀಡಿತರ ಸಂಘಟನೆ ದೇಶದ ಪ್ರಜೆಗಳ ಮುಂದೆ ಇಡಬಾರದೇ ? ಯೂನಿಯನ್ ಕಾರ್ಬೈಡ್‌ನಿಂದ ತಯಾರಾಗಿ ಮಾರಲ್ಪಡುವ ಇತರೆ ಸಾಮಾನುಗಳ ಪಟ್ಟಿಯನ್ನು ಪ್ರಚಾರ ಮಾಡಿ, ಅವುಗಳ ಬಳಕೆಯನ್ನು ನಿಷೇಧಿಸುವ, ಅಂತಃಸಾಕ್ಷಿಯನ್ನು ಕಲಕುವ ಕರೆ ನೀಡಬಹುದು. ಕಾರ್ಬೈಡ್‌ನ ಆಸ್ತಿಯನ್ನು ಕೊಂಡು ಕೊಳ್ಳಲು ಹವಣಿಸುತ್ತಿರುವ ಸ್ಥಳೀಯ ಕಂಪೆನಿಗಳ ಮಾಲಿಕರ ಹೆಸರುಗಳನ್ನು ಪ್ರಚಾರ ಮಾಡಬೇಕು. ಅವರ ಆಸ್ತಿಯನ್ನು ಯಾರೂ ಕೊಳ್ಳುವವರಿಲ್ಲದೆ, ಅವರ ಸರಕು ಮಾರಾಟವಾಗದೆ, ಹೇಳದೆ ಕೇಳದೆ ದೇಶ ಬಿಟ್ಟು ಅವರು ಓಡಿಹೋಗುವಂಥ ಚಳವಳಿಗೆ ಚಾಲನೆ ನೀಡಲಾರೆವೆ?

ಯೂನಿಯನ್ ಕಾರ್ಬೈಡ್‌ನ ಅಧ್ಯಕ್ಷ ತಲೆ ತಪ್ಪಿಸಿಕೊಂಡ ಅಪರಾಧಿಯೆಂದು ಕಾನೂನು ಹೇಳಿದೆ. ಪ್ರಜಾಪ್ರಭುತ್ವಾತ್ಮಕವಾದ ಅಮೆರಿಕ ಯಾಕೆ ಆತನನ್ನು ದಸ್ತಗಿರಿ ಮಾಡಿ ನಮಗೆ ಒಪ್ಪಿಸುತ್ತಿಲ್ಲ? ತನ್ನ ದೇಶದಲ್ಲೇ ಏಕೆ ಆತನನ್ನು ನ್ಯಾಯದ ಕಟ್ಟೆಗೆ ಹಿಡಿದು ತರಲಿಲ್ಲ? ವಾತಾವರಣ, ಪರಿಸರ, ಪರಿಸರ ಎಂದು ಬೊಬ್ಬೆ ಇಕ್ಕುತ್ತಿರುವ ವಿಶ್ವ ವ್ಯಾಪಾರ ಮಂಡಳಿ, ನಮ್ಮ ಪರಿಸರ ಕೆಡಿಸಿದ ಈ ಧೂರ್ತ ಕಂಪೆನಿಗೆ ಇನ್ನೂ ಬಹುರಾಷ್ಟ್ರೀಯ ಮನ್ನಣೆ ಏಕೆ ನೀಡಬೇಕು? ಪರಿಸರದ ಬಗ್ಗೆ ಅವರ ಪ್ರಾಮಾಣಿಕತೆಗೆ ಯಾವ ಬೆಲೆ? ''ಸ್ವದೇಶಿ ಜಾಗೃತರು'' ಅಧಿಕಾರದಲ್ಲಿದ್ದುಕೊಂಡೂ ತನ್ನ ವಿರೋಧಿ ಪಕ್ಷದವರು ಅಧಿಕಾರದಲ್ಲಿದ್ದಾಗ ಆದ ಈ ಅನ್ಯಾಯದ ಎಲ್ಲ ಆಯಾಮಗಳನ್ನು ಬಹಿರಂಗಪಡಿಸುತ್ತಿಲ್ಲ ಏಕೆ ? ಏಕೆ ?

**ಏಕೆ ?** ದಯವಿಟ್ಟು ಕೇಳಿ : ಇದು ಕೊನೆಯಿಲ್ಲದ ಪ್ರತೀಕಾರದ ಕರೆಯಲ್ಲ. ಪ್ರತೀಕಾರದ ವಾಂಛೆಯೂ ಮಾನವೀಯ ಲಕ್ಷಣವೇ ಆದರೂ ಇದು ನಾಗರಿಕ ಸಮಾಜದಲ್ಲಿ ಹೊಣೆಗಾರಿಕೆಯನ್ನು ಸ್ಥಾಪಿಸುವ ಸಮಸ್ಯೆ; ಪ್ರಜಾಪ್ರಭುತ್ವದ ರಕ್ಷಣೆಯ ವಿಚಾರ ; ನ್ಯಾಯಕ್ಕೆ ಬಲ ನೀಡುವ ವಿಷಯ. ಅನ್ಯಾಯದ ವಿರುದ್ಧ ನಡೆಸುವ ಯಾವ ಕೆಲಸವೂ ಪ್ರತೀಕಾರವೆನಿಸಿಕೊಳ್ಳುವುದಿಲ್ಲ. ನಾವೆಲ್ಲೂ ಹಿಂಸೆಗೆ ಕರೆ ಕೊಟ್ಟಿಲ್ಲ. ಕಾನೂನು ಕ್ರಮ ಮತ್ತು ಪ್ರಜಾಸತ್ತಾತ್ಮಕ ಸಾಮಾಜಿಕ ಬಹಿಷ್ಕಾರ ಚಳವಳಿ, ಗಾಂಧೀ ಮಾರ್ಗದ್ದೇ ಈ ಹಾದಿ. ಊರೂರಿನಲ್ಲೂ ಲಕ್ಷಗಟ್ಟಲೆ ಜನ ಬಹಿಷ್ಕಾರದಲ್ಲಿ ಭಾಗವಹಿಸಿದರೆ ಸಾಕು, ಪರಿಣಾಮ ಮಹತ್ತರವೆನಿಸುವಷ್ಟು ಆಗುತ್ತದೆ. ಈ ಸಮಾಜದಲ್ಲಿ ಜೀವನ ಒಂದಿಷ್ಟು ಹಗುರವಾಗುತ್ತದೆ.

ooo



*ಟ್ಯಾಂಕಿನಿಂದ ಸೋರುತ್ತಿರುವ ಮಾರಕ ವಿಷಾನಿಲವನ್ನು ತಡೆಗಟ್ಟಲು ನಡೆಸುತ್ತಿರುವ ಪ್ರಯತ್ನ.*
*(ಒಳಚಿತ್ರ) ದೃಷ್ಟಿ ಕಳೆದುಕೊಂಡ ನತದೃಷ್ಟೆ*

# ಗಾಂಧಿಭಕ್ತ - ಕೆ. ಎಸ್. ನಾರಾಯಣಸ್ವಾಮಿ

ಗಾಂಧಿ ಭವನದ ಕೆ. ಎಸ್. ನಾರಾಯಣಸ್ವಾಮಿ ಈಗ ಸಶರೀರಿಯಾಗಿ ನಮ್ಮ ಮಧ್ಯೆ ಇಲ್ಲ. ದೀಕ್ಷಾಬದ್ಧ ಜೀವನ ನಡೆಸುತ್ತಾ ಸೇವಾ ಧರ್ಮದ ಕಠೋರತೆ ಮತ್ತು ಕಾವನ್ನು ಸಹಿಸುತ್ತಾ, ಅದರಲ್ಲೇ ಅಂತಃಸಮಾಧಾನವನ್ನೂ ಕಂಡುಕೊಳ್ಳುತ್ತಾ, ಜೀವನದುದ್ದಕ್ಕೂ ಬಹುಮುಖೀ ಸೇವೆಯಲ್ಲಿ ತೊಡಗಿದ್ದು, ಕ್ರಿಯಾಶೀಲರಾಗಿಯೇ ೨೩-೧೨-೨೦೦೦ ನೇ ರಾತ್ರಿ ೯.೩೦ ಗಂಟೆಗೆ ಅವರು ವಿಶ್ವಾತ್ಮನಲ್ಲಿ ಲೀನವಾದರು. ತಮ್ಮ ನಾಮ, ರೂಪ, ಉಪಾಧಿಗಳೊಡನೆ ಲೀನವಾದರು ಎನ್ನುವುದು ಹೆಚ್ಚು ಸಮಂಜಸವೆನಿಸೀತು. ಗಾಂಧೀ ಶಾಂತಿ ಪ್ರತಿಷ್ಠಾನದ ಬೆಂಗಳೂರು ಶಾಖೆಯ ಸಂಸ್ಥಾಪಕ ಕಾಯದರ್ಶಿಯಾಗಿ, ರಾಷ್ಟ್ರೀಯ ಪ್ರತಿಷ್ಠಾನದ ಆಜೀವ ಸದಸ್ಯರಾಗಿ, ಒಂದು ಅವಧಿಗೆ ಕೇಂದ್ರೀಯ ಕಾರ್ಯಕಾರಿಣಿಯ ಸದಸ್ಯರಾಗಿ, ಕರ್ನಾಟಕ ಗಾಂಧೀ ಸ್ಮಾರಕ ನಿಧಿ, ಸರ್ವೋದಯ ಸಾಹಿತ್ಯ ಸಮಿತಿ, ಸರ್ವೋದಯ ಸಂಘ ಮುಂತಾದ ಹಲವಾರು ರಚನಾತ್ಮಕ ಸಂಸ್ಥೆ ಮತ್ತು ಪ್ರವೃತ್ತಿಗಳಲ್ಲಿ ಪ್ರಮುಖ ಸದಸ್ಯ, ಪದಾಧಿಕಾರಿ ಇತ್ಯಾದಿಯಾಗಿ ಒಟ್ಟು ಚಳವಳಿಯ ಮುಂಚೂಣಿಯ ಸೇವಕರೆನಿಸಿ ೬೦ ವರ್ಷಗಳಷ್ಟು ದೀರ್ಘ ಸೇವಾಮಯ ಜೀವನ ನಡೆಸಿ ನಾರಾಯಣಸ್ವಾಮಿ ತಮ್ಮ ಇಹಲೋಕದ ಯಾತ್ರೆ ಮುಕ್ತಾಯಗೊಳಿಸಿದರು.

ಏಕನಿಷ್ಠೆ, ಏಕಾಗ್ರತೆ, ಸಮರ್ಪಣಭಾವ, ಧೃತಿಗೆಡದ ಚೈತನ್ಯಶಕ್ತಿ ಇವು ಯಾವುದೇ ಒಂದು ವಿಚಾರಕ್ಕೆ ಧಾರೆಯೆರೆದುಕೊಂಡ ಒಬ್ಬ ಕೆಲಸಗಾರನಿಗಿರಬೇಕಾದ ಗುಣಗಳು ಎನ್ನುವುದಾದರೆ ಇವೆಲ್ಲ ನಾರಾಯಣಸ್ವಾಮಿಯವರಲ್ಲಿ ಹೇರಳವಾಗಿದ್ದವು. ಆ ಗುಣಗಳ ಬಲದ ಮೇಲೆ ಗಾಂಧಿ ವಿಚಾರಧಾರೆಗೆ ತಮ್ಮನ್ನು ಪೂರ್ಣವಾಗಿ ಸಮರ್ಪಿಸಿಕೊಂಡು ದೀರ್ಘಕಾಲ ಅಖಂಡ ಸೇವೆ ಸಲ್ಲಿಸಲು ಅವರಿಂದ ಸಾಧ್ಯವಾಯಿತು. ಒಂದು ವಿಚಾರ ಧಾರೆಗೆ ಮೀಸಲಾದ ಕೆಲಸಗಾರನ ಪಾಡು ಎಂಥದು ಎಂದು ಊಹಿಸಿಕೊಳ್ಳುವುದು ಸುಲಭವೇನಲ್ಲ. ಆ ಧಾರೆಯ ಏಳು-ಬೀಳು, ಮುನ್ನಡೆ, ಹಿಮ್ಮೆಟ್ಟುವಿಕೆ, ಕಷ್ಟ-ಕಾರ್ಪಣ್ಯ, ಹೊಗಳಿಕೆ-ತೆಗಳಿಕೆ, ಮಾನಾಪಮಾನಗಳಿಂದ ಕೂಡಿದ ದ್ವಂದ್ವಮಯ ಪ್ರವಾಹದೊಡನೆ ಈಸುತ್ತಾ, ತಾನೂ ಅವೆಲ್ಲ ಅನುಭವ ಪಡೆಯುತ್ತಾ ಕರ್ತವ್ಯನಿಷ್ಠ ತಪೋಮಯ ಜೀವನದಲ್ಲೆ ತನ್ನ ಒಳಗಣ ಸಮಾಧಾನ ಸಂತೋಷ ಮತ್ತು ಸಾರ್ಥಕತೆಯನ್ನು ಕಂಡುಕೊಳ್ಳುವುದೇ ಆತನಿಗೆ ದೊರೆಯುವ ಅಂತಿಮ ಫಲ. ಗಾಂಧಿ ವಿಚಾರಧಾರೆಗಷ್ಟೇ ಈ ಮಾತು ಅನ್ವಯಿಸುವುದಿಲ್ಲ. ಇದು ಅನ್ಯ ವಿಚಾರಧಾರೆಗಳಿಗೂ ಸಮಾನವಾಗಿ ಅನ್ವಯಿಸುತ್ತದೆ. ಮುಳ್ಳು-ಕಲ್ಲುಗಳಿಂದ ಹರವಿದ ಈ ಮಾರ್ಗ ತುಳಿಯುವಾಗ ಅನೇಕಾನೇಕ ಪರೀಕ್ಷಾ ವೇಳೆಗಳನ್ನು ಎದುರಿಸಬೇಕಾಗುತ್ತದೆ. ಒಬ್ಬ ವ್ಯಕ್ತಿ ಜೀವನದ ಕೊನೆಯುಸಿರಿನವರೆಗೂ ಏಕನಿಷ್ಠೆಯಿಂದ ದುಡಿದು ತನ್ನದೆಲ್ಲವನ್ನೂ ಆ ವಿಚಾರಧಾರೆಗೆ ಸಮರ್ಪಿಸಿ ಜೀವನಯಾತ್ರೆಯ ಪೂರ್ಣಾಹುತಿಯಾಗುತ್ತದೆಂದರೆ ಆತ ತನ್ನ ಸಂಕಲ್ಪವನ್ನು ಪೂರ್ಣಗೊಳಿಸಿದನೆಂದೂ, ಆ ಸತ್ವ ಪರೀಕ್ಷೆಯಲ್ಲಿ ತೇರ್ಗಡೆಯಾದನೆಂದೂ ತಿಳಿಯಬೇಕು. ಇದರ ನೇರ ಅರ್ಥ ನಾರಾಯಣಸ್ವಾಮಿ ಆಜೀವ ಕಾರ್ಯಕರ್ತನ ಸಂಕಲ್ಪವನ್ನು ಸಫಲಪೂರ್ವಕ ಪೂರೈಸಿದರು.

ನಾರಾಯಣಸ್ವಾಮಿ ಇನ್ನೊಂದು ದೃಷ್ಟಿಯಿಂದಲೂ ಉಚ್ಚದರ್ಜೆಯಲ್ಲಿ ಪಾಸಾದರು. ಅವರು ಯಾವ ಕೀರ್ತಿ, ಮಾನ-ಸನ್ಮಾನ, ಅವಾರ್ಡ್-ಪುರಸ್ಕಾರಗಳ ಕಡೆ ತನ್ನ ದೃಷ್ಟಿಯನ್ನೇ ಹೊರಳಿಸಲಿಲ್ಲ. ಅಂಥ ಎಲ್ಲ ಸೆಳೆತ - ಆಕರ್ಷಣೆಗಳ ಸುಳಿಯಿಂದ ದೂರವಿದ್ದುಬಿಟ್ಟರು. ಅಷ್ಟೇ ಅಲ್ಲ, ಅವರು ಅವಾರ್ಡುಗಳನ್ನೇ ವಿನಯಪೂರ್ವಕವಾಗಿ ವಿರೋಧಿಸಿದರು. ಅವರ ಈ ನಿಲುವನ್ನು ಮನಸಾರೆ ಮೆಚ್ಚಿಕೊಂಡು ಒಳಗೇ ಹಿಗ್ಗಿದವನು ನಾನು. ಅವರು ಒಂದು ತಾತ್ವಿಕ ನೆಲೆಯಲ್ಲಿ ನಿಂತು ಹಾಗೇ ನಡೆದುಕೊಂಡರು. ಸೇವಕಧರ್ಮದಲ್ಲಿದ್ದವರಿಗೇಕೆ ಅವಾರ್ಡ್ ? ಇದು ಗಾಂಧಿ ವಿನೋಬಾ ಪರಂಪರೆಗೆ ಹೊಂದಿಕೊಂಡಿತ್ತು. ಅಷ್ಟೇ ಅಲ್ಲ, ಪಶ್ಚಿಮವಾಹಿನಿಯಲ್ಲಿ ನಡೆಯುವ ವಾರ್ಷಿಕ ಸರ್ವೋದಯ ಮೇಳದ ಅಧ್ಯಕ್ಷತೆಯನ್ನೂ ಇದೇ ಸ್ಥಿರತೆಯಿಂದ ತಿರಸ್ಕರಿಸಿಬಿಟ್ಟರು. ಒಮ್ಮೆಯಾದರೂ ಈ ಅಧ್ಯಕ್ಷ ಸ್ಥಾನ (ಅಧ್ಯಕ್ಷರನ್ನು 'ಆಚಾರ್ಯ'ರೆಂದು ಕರೆಯುವ ವಾಡಿಕೆಯಿದೆ) ವನ್ನು ಸ್ವೀಕರಿಸಲಿಲ್ಲ. ಹೀಗೆ ವ್ಯವಸ್ಥಿತವಾಗಿ ಮಾನ-ಸನ್ಮಾನಗಳಿಂದು ಹಿಗ್ಗದೆ ಆಕರ್ಷಿತರಾಗದೆ ಅದರಿಂದ ದೂರವಿದ್ದು ಅದರಲ್ಲೂ ಉತ್ತೀರ್ಣರಾಗಿ ಸೇವಕಧರ್ಮ ಶ್ರೇಷ್ಠ ದರ್ಜೆಯ ಉದಾಹರಣೆಯನ್ನು ಸಮಾಜದ ಮುಂದಿಟ್ಟರು.

ಗಾಂಧಿ ಶಾಂತಿ ಪ್ರತಿಷ್ಠಾನದ ಆಜೀವ ಸದಸ್ಯರಾಗಿ ನಾರಾಯಣಸ್ವಾಮಿ ಸ್ವಂತ ಇಚ್ಛೆಯಿಂದ ಗಾಂಧಿ ಸಾಹಿತ್ಯ ಸೇವಾಕ್ಷೇತ್ರವನ್ನು ಆರಿಸಿಕೊಂಡರು. ಅದರಲ್ಲೇ ಅಂತಿಮ ಕ್ಷಣದವರೆಗೂ ನಿಂತು ಆ ಕಾರ್ಯವನ್ನು ದಕ್ಷತೆಯಿಂದ ನಿರ್ವಹಿಸಿದರು. ಅವರ ಪ್ರಾಣಪಕ್ಷಿ ಹಾರಿಹೋಗುವ ಕೆಲವು ದಿನ ಮುಂಚೆ 'ಗಾಂಧೀಜಿಯ ಕಡೆ ದಿನಗಳು' ಎಂಬ ಲೇಖನ ಮಾಲೆ 'ಸುಧಾ' ದಲ್ಲಿ ಧಾರಾವಾಹಿಯಾಗಿ ಪ್ರಕಟವಾದದ್ದನ್ನು ಸ್ವಲ್ಪ ಪರಿಷ್ಕರಿಸಿ ಪ್ರಿಸಂ ಬುಕ್ ಹೌಸ್ ಮೂಲಕ ಹೊರತರಲಾಗಿತ್ತು. 'ನನ್ನ ಕನಸಿನ ಭಾರತ' ಎಂಬ ಗಾಂಧೀಜಿ ಕೃತಿಯ ಕನ್ನಡ ಅನುವಾದದ ಹೊಸ ಆವೃತ್ತಿ ಪುನರ್ಮುದ್ರಣಕ್ಕಾಗಿ ಪ್ರೆಸ್‌ನಲ್ಲಿದ್ದಾಗ ಅವರು ನಿಧನರಾದರು. ಹೀಗೆ ಕೊನೆಯ ಗಳಿಗೆಯವರೆಗೆ ತಮ್ಮ ದೀಕ್ಷೆಯಲ್ಲಿ ಸ್ಥಿರವಿದ್ದು ತಮ್ಮ ಸಂಕಲ್ಪವನ್ನು ಪೂರೈಸಿದರು.

ನಾರಾಯಣಸ್ವಾಮಿ ಎಂದರೇನೆ ಪುಸ್ತಕ ಎನ್ನುವಷ್ಟು ಅದರೊಡನೆ ಅವರ ಗಾಢ ಸಂಬಂಧ. ಅವರು ತಮ್ಮ ಜೀವನೋಪಾಯಕ್ಕೆಂದು ಅವಲಂಬಿಸಿದ್ದೂ ಪುಸ್ತಕವನ್ನೇ. ಎಂದರೆ ತಮ್ಮ ಕಾರ್ಯಾರಂಭ ಮಾಡಿದ್ದೆ ಮೈಸೂರಿನಲ್ಲಿ 'ಚೇತನಾ ಪುಸ್ತಕಾಲಯ' ನಡೆಸುವುದರಿಂದ. ಈ ಗಂಟು-ನಂಟು ಕೊನೆಯ ದಿನಗಳವರೆಗೂ ನಡೆದುಬಂತು. ಅವರ ಜೀವನಯಾತ್ರೆಯ ಇನ್ನೊಂದು ಹೆಸರು ಪುಸ್ತಕ ರಚನಾ ಯಾತ್ರೆ. ಗಾಂಧಿ ಗ್ರಂಥಮಾಲೆಯ ೩೦ ಸಂಪುಟಗಳ ಸಂಪಾದನೆ, ಅನುವಾದ, ಮತ್ತು ಪ್ರಕಾಶನದಲ್ಲಿ ಪೂರ್ಣ ಸಮಯದ ಕಾರ್ಯಕರ್ತ; ವಿನೋಬಾ ಗ್ರಂಥಮಾಲೆಯ ೫ ಸಂಪುಟಗಳ ಪ್ರಕಾಶನದಲ್ಲಿ ಪ್ರಧಾನ ಸಂಪಾದಕ; ಮೈಸೂರು ವಿಶ್ವವಿದ್ಯಾಲಯ ಗಾಂಧಿ ಭವನದ ಟೆಂಡುಲ್ಕರರ 'ಮಹಾತ್ಮ' ಸಂಪುಟಗಳ ಸಲಹಾ ಸಮಿತಿಯ ಸದಸ್ಯನಾಗಿದ್ದುಕೊಂಡು ಎರಡು ಸಂಪುಟಗಳ ಭಾಷಾಂತರಕಾರ; ಗಾಂಧಿ ಸ್ಮಾರಕ ನಿಧಿಯ ನನ್ನ ಆದರ್ಶ ಗ್ರಾಮ, ಪಂಚಾಯತಿ ರಾಜ್ಯ, ಸತ್ಯಾನ್ವೇಷಕನ ಚಿತ್ರಯಾತ್ರೆ, ಗಾಂಧಿ ಪ್ರಮಾಣ ವಚನಗಳು, ಜೆ. ಪಿ. ಯವರ ಸೆರೆಮನೆಯ ದಿನಚರಿ, ನನ್ನ ವಿಚಾರಯಾತ್ರೆ, ಲೇಖನ ಮಾಲೆ ಮುಂತಾದ ಅನೂದಿತ ಗ್ರಂಥಕರ್ತ; ಲಿಂಕನ್, ಲೆನಿನ್ - ಗಾಂಧಿ, ಗಾಂಧೀಜಿ-ಜೀವನ ಚರಿತ್ರೆ, ಗಾಂಧಿ ಜೀವನ-ಸಂದೇಶ, ಜೀವನ ಚರಿತ್ರೆಗಳಲ್ಲಿ ಜಯಪ್ರಕಾಶ ನಾರಾಯಣ, ವಿನೋಬಾ, ಮಹದೇವ ದೇಸಾಯಿ, ಡಾ॥ ಜೆ. ಸಿ. ಕುಮಾರಪ್ಪ, ಕಿಶೋರಲಾಲ್ ಮಶ್ರೂವಾಲ, ಮೀರಾ ಬಹೆನ್, ಗಾಂಧೀ ಬಳಗದ ವಿದೇಶೀಯರು, ಖಾನ್ ಅಬ್ದುಲ್ ಗಫಾರ್ ಖಾನ್, ಸ್ವಾತಂತ್ರ್ಯ ಸಂಗ್ರಾಮದ ಮೈಲುಗಲ್ಲುಗಳು ಮುಂತಾದ ಸ್ವತಂತ್ರ ಕೃತಿಗಳ ರಚನಾಕಾರ; ಗಾಂಧಿ ಮತ್ತು ಐನ್‌ಸ್ಟೀನ್, ದೇವರು - ಗಾಂಧೀ ದೃಷ್ಟಿ ಎಂಬೀ ವೈಚಾರಿಕ ಗ್ರಂಥಗಳು; ೯ ಇಂಗ್ಲಿಷ್ ಭಾಷೆಯ ಪುಸ್ತಕಗಳ ಲೇಖಕ. - ಹೀಗೆ ನಾರಾಯಣಸ್ವಾಮಿಯವರ ಗ್ರಂಥ ರಚನಾಯಾತ್ರೆ ನಿಜಕ್ಕೂ ದೀರ್ಘಯಾತ್ರೆಯೇ ಸರಿ.

ವ್ಯಕ್ತಿಶಃ ನಾರಾಯಣಸ್ವಾಮಿ ಸ್ನೇಹಪರರು. ವಿನಯ ಸಂಪನ್ನತೆ, ಮಿತಭಾಷಿ, ಸಂಯಮಶೀಲರು, ಸಮತ್ವ ಬುದ್ಧಿ ಮುಂತಾದ ಗುಣಗಳಿಂದ ಎಲ್ಲರಿಗೂ ಬೇಕಾದವರಾಗಿ ಅಜಾತಶತ್ರುವಿನಂತೆ ಇದ್ದರು. ಅವರು ಮೈದಾನಕ್ಕಿಳಿದ ಹೊರಾಂಗಣ ಕಾರ್ಯಕರ್ತರಾಗಲಿ, ಚಳವಳಿಗಾರರಾಗಲಿ ಆಗಲಿಲ್ಲ. ಉಪವಾಸ, ವನವಾಸ, ಜೈಲುವಾಸ, ದೀರ್ಘ ಪ್ರವಾಸ, ಎಡೆಬಿಡದ ಕಾರ್ಯ ಜವಾಬ್ದಾರಿಗಳ ಸಂಕೋಲೆಗಳಲ್ಲಿ ತೊಡಗಿಕೊಂಡವರಲ್ಲ. ಇಷ್ಟೆಲ್ಲ ಇತಿ-ಮಿತಿ ಇದ್ದೂ ಸಹ ಒಟ್ಟು ಚಳವಳಿಯಲ್ಲಿ ತಮ್ಮದೊಂದು ವೈಚಾರಿಕ ಸ್ಥಾನ ಕಲ್ಪಿಸಿಕೊಂಡಿದ್ದರು. ಹೀಗೆ ಸ್ಥಾನ ಗಳಿಸಲು ಅವರಿಗೆ ಇದ್ದುದು ವೈಚಾರಿಕ ಬಲ ಮತ್ತು ಲೇಖನಿಯ ಶಕ್ತಿ.

ಅವರಿಗೆ ಮೃತ್ಯು ಸಹ 'ಅನಾಯಾಸೇನ ಮರಣಂ' ಎಂಬ ಹೇಳಿಕೆಗೆ ಅನುಗುಣವಾಗಿತ್ತು. ಅವರು ಬಿಟ್ಟು ಹೋದ ಪರಂಪರೆಯನ್ನು ಮುಂದುವರಿಸಿಕೊಂಡು ಹೋಗುವುದೊಂದೇ ಅವರಿಗೊಂದು ನಿಜ ಸ್ಮಾರಕ.

**ಸತ್ಯವ್ರತ**
ಗಾಂಧಿ ಭವನ, ಬೆಂಗಳೂರು - ೧

# ಬೀಡಿ ಕಟ್ಟುವ ಕೈಗಳು

ಬೀಡಿ ಕೈಗಾರಿಕೆ ದೇಶದ ಹನ್ನೊಂದು ರಾಜ್ಯಗಳಲ್ಲಿ ಹರಡಿದೆ. ಸುಮಾರು ೭೫ ಲಕ್ಷ ಜನರು ಬೀಡಿ ಉದ್ಯಮದಲ್ಲಿ ತೊಡಗಿಕೊಂಡಿದ್ದಾರೆ. ನಮ್ಮ ರಾಜ್ಯದಲ್ಲಿಯೇ ಸುಮಾರು ಏಳು ಲಕ್ಷ ಜನರಿದ್ದಾರೆ. ಈ ಪೈಕಿ ಶೇ. ೯೦ರಷ್ಟು ಮಹಿಳೆಯರು.

ಬೀಡಿ ಕಾರ್ಮಿಕರು ತಮ್ಮ ಮಜೂರಿ ಇತ್ಯಾದಿ ಹಕ್ಕುಗಳಿಗಾಗಿ ನಡೆಸಿದ ಹೋರಾಟದ್ದು ದೊಡ್ಡ ಇತಿಹಾಸ. ಅಸಂಘಟಿತ ವಿಭಾಗಕ್ಕೆ ಸೇರಿದ ಬೀಡಿ ಕಾರ್ಮಿಕರನ್ನು 'ಮನುಷ್ಯ'ರೆಂದು ಪರಿಗಣಿಸಲು ಮಾಲಿಕರು ದಶಕಗಳಷ್ಟು ಕಾಲ ತೆಗೆದುಕೊಂಡರೆನ್ನಬಹುದು. ಈ ಹೋರಾಟ ಈಗಲೂ ಮುಂದುವರಿದಿದೆ. ಈ ಮಧ್ಯೆ ಜಾಗತೀಕರಣದ ಬಿಸಿ ಬೀಡಿ ಉದ್ಯಮಕ್ಕೂ ತಟ್ಟದೇ ಇಲ್ಲ. ಬೀಡಿ ಕಟ್ಟುವಲ್ಲಿ ಬಾಲ ಕಾರ್ಮಿಕರನ್ನು ಬಳಸಲಾಗುತ್ತದೆಂದು ಆಪಾದಿಸಿ ಭಾರತದ ಬೀಡಿಗಳನ್ನು ಅಮೆರಿಕ ನಿಷೇಧಿಸಿರುವುದು ಒಂದು ಉದಾಹರಣೆ.

ಕೆಲವು ಕಡೆ ಬೀಡಿಕಟ್ಟುವ ಕಾಯಕ ಕಾರ್ಖಾನೆಗಳಲ್ಲಿ ಸಾಮೂಹಿಕವಾಗಿ ನಡೆಯುತ್ತದೆ. ಆದರೂ, ಬಹುಮಟ್ಟಿಗೆ ಅವರವರ ಮನೆಗಳಲ್ಲೇ ಬೀಡಿ ಕಟ್ಟುವ ಕಾಯಕ ನಡೆಯುತ್ತದೆ. ಸಾಮಾನ್ಯವಾಗಿ ಮನೆಯಲ್ಲಿ ಬಿಡುವಿರುವವರೆಲ್ಲರೂ ಒಂದಲ್ಲ ಒಂದು ರೀತಿಯಲ್ಲಿ ಆ ಕಾರ್ಯದಲ್ಲಿ ತೊಡಗಿಕೊಳ್ಳುತ್ತಾರೆ. ಮಹಿಳೆಯರ ಈ ದುಡಿಮೆಯಿಂದೇ ನಡೆಯುತ್ತಿರುವ ಸಾವಿರಾರು ಕುಟುಂಬಗಳಿವೆ.

ದೂರ ದೂರದ ಹಳ್ಳಿಗಳಲ್ಲಿ, ಗುಡಿಸಿಲುಗಳಲ್ಲಿ ಈ ಕಾಯಕ ಹಗಲು ರಾತ್ರಿ ನಡೆದಿರುತ್ತದೆ. ಕಂಪೆನಿಯವರು ಪ್ರತಿವಾರ ಬೀಡಿಗಳಿಗೆ ಬೇಕಾದ ಎಲೆ ಮತ್ತು ತಂಬಾಕು ಪುಡಿ ಒದಗಿಸುತ್ತಾರೆ. ಎಲೆಗಳನ್ನು ಬೇಕಾದ ಆಕಾರಕ್ಕೆ ಕತ್ತರಿಸಿಟ್ಟುಕೊಳ್ಳುವುದು ಮೊದಲನೇ ಕೆಲಸ. ಮೊರದಲ್ಲಿ ತಂಬಾಕಿನ ಪುಡಿ ಮತ್ತು ಕತ್ತರಿಸಿದ ಎಲೆಗಳನ್ನಿರಿಸಿಕೊಂಡು ಪಳಗಿದ ಕೈಗಳು ಮಿಂಚಿನ ವೇಗದಲ್ಲಿ ಬೀಡಿ ಕಟ್ಟಲು ಪ್ರಾರಂಭಿಸುತ್ತವೆ. ಭರತನಾಟ್ಯದಲ್ಲಿ ಬೆರಳುಗಳ ಮೂಲಕ ಕೆಲವು ಭಂಗಿಗಳನ್ನು ಅಭಿನಯಿಸಿ ತೋರಿಸುವ ನರ್ತಕಿಯರು ಈ ಬೀಡಿ ಕಟ್ಟುವ ಬೆರಳುಗಳನ್ನು ನೋಡಿದ್ದಾರೋ ಇಲ್ಲವೋ ತಿಳಿಯದು !

* * *

ಚೊಕ್ಕಾಡಿಯ ಅಜ್ಜರಗದ್ದೆಯ ಒಂದು ಸಾಧಾರಣ ಮನೆ. ಶ್ರೀಮತಿ ಲತಾ ಎರಡು ಮಕ್ಕಳ ತಾಯಿ. ಮಹೇಶ್ ಕುಮಾರ್ ಮತ್ತು ವಿನುತ. ತಂದೆಯ ಮನೆಯಲ್ಲಿ ವಾಸ. ಆಕೆಯ ಗಂಡನೂ ಮಜೂರ. ಮನೆಯ ಕೆಲಸ ಮುಗಿಸಿ, ಮಕ್ಕಳನ್ನು ಶಾಲೆಗೆ ಕಳಿಸಿ, ತೊಡೆಯ ಮೇಲೆ ಮೊರ ಇರಿಸಿಕೊಂಡು ಬೀಡಿ ಕಟ್ಟಲು ಪ್ರಾರಂಭಿಸಿದರೆ, ಸಾಕಷ್ಟು ಹೆಚ್ಚು ಬೀಡಿ ಕಟ್ಟುವ ಗುರಿ. ಮನೆಯ ಇತರರು ಮಾತಿಗೆಳೆದರೂ ಇವರ ಏಕಾಗ್ರತೆಗೆ ಭಂಗ ಬರುವುದಿಲ್ಲ. ದಿನಕ್ಕೆ ಒಂದು ಸಾವಿರ ಬೀಡಿಯಾದರೂ ಕಟ್ಟಬೇಕು. ಅದಕ್ಕೆ ೪೦ರೂ. ಸಿಗುತ್ತದೆ. ಕಟ್ಟಿದ ಬೀಡಿಯನ್ನು ಕುಕ್ಕಜಡ್ಕದ ಕಚೇರಿಯಲ್ಲಿ ಕೊಟ್ಟು ಪಾಸ್ ಪುಸ್ತಕದಲ್ಲಿ ದಾಖಲು ಮಾಡಿಸಬೇಕು.



''ಮಕ್ಕಳು ಬೀಡಿ ಕಟ್ಟುವಲ್ಲಿ ಸಹಾಯ ಮಾಡುತ್ತಾರೆಯೆ ?''

''ಇಲ್ಲ ಸಾರ್. ಬೀಡಿ ಲೆಕ್ಕ ಮಾಡಲು ಮಕ್ಕಳು ಸಹಾಯ ಮಾಡುತ್ತಾರೆ ಅಷ್ಟೆ.''

''ನಿಮ್ಮ ಪತಿ ?''

ನಗುತ್ತ, ''ಓ..... ಅವರು ಇದರಲ್ಲಿ ಕೈ ಹಾಕುವವರಲ್ಲ !''

ಶ್ರೀಮತಿ ಲತಾ ಬೀಡಿ ಕಟ್ಟುವ ದೃಶ್ಯವನ್ನು ಚಿತ್ರಿಸಿ ಪತ್ರಿಕೆಯಲ್ಲಿ ಪ್ರಕಟಿಸುವ ಬಗ್ಗೆ ಆಕೆಯ ಪತಿಗೆ ಆಕ್ಷೇಪಣೆ ಏನೂ ಇಲ್ಲ. ಈಗ ತೆಂಗು, ಅಡಿಕೆ ಬೆಲೆ ಇಳಿದಿರುವ ಕಾರಣ ತೋಟಗಾರರು ದಿನಕ್ಕೆ ರೂ. ೬೫ರಂತೆ ಕೂಲಿ ನಿಗದಿಗೊಳಿಸಿದ್ದಾರೆ. ಅದೂ ವಾರದಲ್ಲಿ ಒಂದೆರಡು ದಿನ ಕೂಲಿ ಸಿಕ್ಕಿದರೆ ಹೆಚ್ಚು ಎಂದು ಅವರು ವಾಸ್ತವಿಕತೆಯ ಪರಿಚಯ ಮಾಡಿಸುತ್ತಾರೆ. ವೀಳ್ಯ ಮೆಲ್ಲುತ್ತ ಲತಾರ ತಂದೆಯೂ ಮಾತಿಗೆ ದನಿಗೂಡಿಸುತ್ತಾರೆ.

ಸ್ಾಧಾರಣ ಇತರ ಕೂಲಿ ಮಾಡುವ ಹೆಂಗಸರಂತಲ್ಲದೆ ಬೀಡಿ ಕಟ್ಟುವವರು ಒಂದೆರಡಾದರೂ ಆಭರಣ ತೊಟ್ಟಿರುತ್ತಾರೆ. ಇದ್ದದ್ದರಲ್ಲಿ ಸುಮಾರಾಗಿ ಅಲಂಕರಿಸಿಕೊಂಡಿರುತ್ತಾರೆ. ಸ್ವತಃ ದುಡಿಯುವವರಾದ್ದರಿಂದ ಇದು ಸಾಧ್ಯವಾಗಿದೆ. ಮನೆಯಲ್ಲಿ ಗೌರವವೂ ಉಂಟು.

ಕುಟುಂಬದ ಅಂತಸ್ತು ಸ್ವಲ್ಪ ಏರಿದಾಗ, ತಮ್ಮ ಮನೆಯ ಮಹಿಳೆ ಬೀಡಿ ಕಟ್ಟುವ ವಿಷಯವನ್ನು ಹೇಳಿಕೊಳ್ಳಲು ಸಂಕೋಚಪಡುವವರುಂಟು.

**ಕೆ. ಪಿ. ಸ್ವಾಮಿ**
ನಂ. ೧೬೭, ೧೦ನೇ ಮೈನ್, ೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ, ಬೆಂಗಳೂರು- ೫೬೦ ೦೫೮

---

*(೩ನೇ ಪುಟದಿಂದ)*

ಹಾಕಿ ಸದಸ್ಯತ್ವಕ್ಕೆ ರಾಜೀನಾಮೆ ಕೊಟ್ಟಿದ್ದಾರೆ ! ವೆಂಕಟಾಚಲಯ್ಯನವರ ಅಮೋಘ ಪ್ರಜಾಪ್ರಭುತ್ವದ ಕಲ್ಪನೆ ನಮಗೆ ಉಸಿರು ಕಟ್ಟಿಸುತ್ತದೆ: ವಿದ್ಯುನ್ಮಾನ ಮಾಧ್ಯಮಗಳಲ್ಲಿ ನಮ್ಮ ಅಭಿಪ್ರಾಯ ಪ್ರಚಾರ ಮಾಡಿದರೆ ಸಾಕು; ಏಕೀ ಮೆರವಣಿಗೆ, ಸಾರ್ವಜನಿಕ ಸಭೆ, ಇತ್ಯಾದಿಗಳ ಗೊಂದಲ ಎನ್ನುತ್ತಾರೆ ಅವರು. ಅಂದರೆ, ಹಣ ನೀಡಿ ಅರ್ಧ ನಿಮಿಷದ ಜಾಹಿರಾತು ಕೊಂಡು ಸಾರ್ವಜನಿಕರಿಗೆ ನಿಮ್ಮ ವಿಚಾರ ತಿಳಿಸಿ, ಅದೇ ಪ್ರಜಾಪ್ರಭುತ್ವ, ಎಂಬುದು ಅವರ ಮಾತು. ಸಂವಿಧಾನಕ್ಕೆ ಬದ್ಧರಾದ ಪ್ರಧಾನಿ ವಾಜಪೇಯಿ ನಮ್ಮ ಸಂವಿಧಾನದ ಆಶಯಕ್ಕೆ ಮಾಡುತ್ತಿರುವ ಸಂಸ್ಕಾರ ಇದು. ಇನ್ನು ಚುನಾವಣೆಗಳೇಕೆ, ತಂತ್ರಜ್ಞಾನ ಅದನ್ನು ಅನಗತ್ಯಗೊಳಿಸಿದೆ ಎನ್ನುವ ಕಾಲ ದೂರವಿಲ್ಲ !

ಹಿಂದಿಯನ್ನುಳಿದು ಬೇರೆ ಭಾಷೆಗಳನ್ನು ತುಳಿಯುವ ಸಂಪ್ರದಾಯವನ್ನು ಪಾಲಿಸುವ ಪ್ರಧಾನಿ ತಮ್ಮ ಲೇಖನದಲ್ಲಿ ಭಾರತವು ಎಲ್ಲರದೂ ಹೌದು, ನಾವು ಐಕ್ಯತೆ ಸಾಧಿಸೋಣ, ಎಂದು ಕರೆ ನೀಡಿರುವುದೊಂದು ವಿಪರ್ಯಾಸ. ಭಾರತದ ಪ್ರಗತಿಗೆ ಕಂಕಣ ಕಟ್ಟಿಕೊಳ್ಳೋಣ ಎಂದು ನುಡಿಯುವ ಪ್ರಧಾನಿ ತಮ್ಮ ಸರ್ಕಾರದ ಮಾರಕ ಆರ್ಥಿಕ - ಸಾಂಸ್ಕೃತಿಕ ನೀತಿಗಳ ಬಗ್ಗೆ, ಹಲ್ಲೆಗಳ ಬಗ್ಗೆ ಯೋಚಿಸುವುದಿಲ್ಲ. ಮತೀಯ ದುರ್ಭಾವನೆಯ ಪ್ರಶ್ನೆ ನಮಗೆ ಅಪ್ರಸ್ತುತವೆಂದು ಸಾರುವ ಪ್ರಧಾನಿ ತಾವು ಕಟ್ಟಾ ಧರ್ಮನಿರಪೇಕ್ಷತೆಯ ಪಾಲಕರೆಂದು ಘೋಷಿಸಿಕೊಂಡಿದ್ದಾರೆ. ಇಂದಿನ ಆರ್ಥಿಕ ಸುಧಾರಣೆಗಳು ಭಾರತವನ್ನು ಸುಭದ್ರವನ್ನಾಗಿಸುತ್ತವೆ ಎಂಬ ನಿರಾಧಾರ ತರ್ಕ ಬೆಳೆಸುವ ಪ್ರಧಾನಿ ಸರ್ಕಾರೇತರ ವ್ಯಕ್ತಿ - ಸಂಸ್ಥೆಗಳು ನಮಗೆ ಹಾದಿ ತೋರಬೇಕೆಂದು ಉದ್ಗರಿಸಿದ್ದಾರೆ. ಹೂರಣವೇನೋ ಹಳಸಿದ್ದೇ; ಆದ್ದರಿಂದಲೂ ಅದು ಅಪಾಯಕಾರಿ.

ಸಮಾಜದ ಅನಾರೋಗ್ಯಕ್ಕೆ ಇದೊಂದು ಆಹ್ವಾನ. ಪ್ರಧಾನಿಯವರ ಇಂತಹ ವೈರುಧ್ಯಗಳ ಸರಮಾಲೆಯನ್ನು ಕಂಡು ನಮ್ಮ ವಾಜಪೇಯಿಯವರ ಬಹುಮುಖಗಳಲ್ಲಿ ನೈಜವಾದ್ದು ಯಾವುದೆಂಬ ಶಂಕೆ ಉಂಟಾದರೆ ಆಶ್ಚರ್ಯವೆಲ್ಲಿಯದು ? ಹೊಸ ವರ್ಷ ನಮಗೆ ಆರಂಭವಾಗಿರುವುದು ಹೀಗೆ : ಪ್ರಧಾನಿಯವರ ಇಂತಹ **ಮ್ಯೂಸಿಂಗ್ಸ್** ಮುಖಾಂತರ. ಇಂಗ್ಲಿಷ್ ಭಾಷೆಯಲ್ಲಿ 'ಅಮ್ಯೂಸಿಂಗ್ಸ್' ಎಂಬ ಪದಕ್ಕೇನಾದರೂ ಅವಕಾಶವಿದ್ದಿದ್ದರೆ ವಾಜಪೇಯಿಯವರ ಲೇಖನಕ್ಕೆ ಅದು ಅನ್ವರ್ಥವಾಗಿರುತ್ತಿತ್ತು ಎಂಬುದು ನಮ್ಮ ಸ್ಪಷ್ಟ ಅನಿಸಿಕೆ.

— ಜಿ. ರಾಮಕೃಷ್ಣ

# ವಂಶವಾಹಿ ಅಕ್ಷರಮಾಲೆ ಸಿದ್ಧ

**ಕಾಗುಣಿತ ಪದರಚನೆ ವ್ಯಾಕರಣ ಕಲಿತರೆ ಮಾನವ ಪ್ರಗತಿಯಲ್ಲಿ ದಾಪುಗಾಲು**

**ಟಿ. ಎಸ್. ಸಂಜೀವರಾವ್**

ಇತ್ತೀಚೆಗೆ ಕ್ರೈಗ್ ವೆಂಟರ್ ಮತ್ತು ಫ್ರಾನ್ಸಿಸ್ ಕೊಲಿನ್ಸ್ ಎಂಬ ಜೀವವಿಜ್ಞಾನಿಗಳು ಮಾನವನಲ್ಲಿರುವ ಮತ್ತು ಅವನ ಆಕಾರ, ಚಹರೆ, ಚರ್ಯೆ, ಆರೋಗ್ಯ, ಮನೋವ್ಯಾಪಾರಗಳನ್ನು ನಿರ್ದೇಶಿಸುವ ಕೋಟ್ಯಾನುಕೋಟಿ ವಂಶವಾಹಿಗಳ ಸ್ಥಾನಮಾನಗಳನ್ನು ಕಂಪ್ಯೂಟರ್ ಸಹಾಯದಿಂದ ಗುರುತಿಸಿ ಒಂದು ಮಹಾ ವಂಶವಾಹಿ ನಕ್ಷೆಯನ್ನೇ ಸಿದ್ಧಪಡಿಸಿದ್ದಾರೆ. ಇದು ಮಾನವ ಪ್ರಗತಿಯ ಇತಿಹಾಸದಲ್ಲೇ ಒಂದು ಭಾರಿ ಮೈಲಿಗಲ್ಲು ಎಂದು ಕೊಂಡಾಡಲ್ಪಟ್ಟಿದೆ. ''ಜೀವನ ಪಥದ ಏರುಪೇರುಗಳಿಗೆ ನಕ್ಷತ್ರ, ದೈವವೇ ಕಾರಣ ಎಂದು ಇದುವರೆಗೂ ನಂಬಿದ್ದೆವು; ಆದರೆ ಈಗ ಬಹುಮಟ್ಟಿಗೆ ನಮ್ಮ ಜೀವನಗತಿ ವಂಶವಾಹಿಗಳಲ್ಲಿ ಅಂತರ್ಗತವಾಗಿದೆ ಎಂಬ ತಿಳುವಳಿಕೆ ಬೆಳೆಯುತ್ತಿದೆ,'' ಎಂದು ನೊಬೆಲ್ ಪ್ರಶಸ್ತಿ ಸನ್ಮಾನಿತ ಜೀನ್ ವಿಜ್ಞಾನಿ ಜೇಮ್ಸ್ ವ್ಯಾಟ್‌ಸನ್ ಹೇಳಿದ್ದಾರೆ. ಅಮೆರಿಕ ಮಾಜಿ ಅಧ್ಯಕ್ಷ ಕ್ಲಿಂಟನ್ ''ಈ ನಕ್ಷೆ ಮಾನವನ ಸಾಧನೆಗಳಲ್ಲೇ ಅತಿ ಮುಖ್ಯವಾದದ್ದು, ಅತ್ಯದ್ಭುತವಾದದ್ದು'' ಎಂದು ಉದ್ಗಾರ ತೆಗೆದಿದ್ದಾರೆ. ಚಂದ್ರನ ಮೇಲೆ ಪದಾರ್ಪಣೆ ಮಾಡಿದ್ದಕ್ಕಿಂತ ಹಿರಿದಾದ ಸಾಧನೆ ಇದು ಎಂದು ಇನ್ನೂ ಕೆಲವರು ಕೊಂಡಾಡಿದ್ದಾರೆ.

ಮಾನವ ವಂಶವಾಹಿಯ ಅತಿ ಸೂಕ್ಷ್ಮ ಕಣಗಳನ್ನು ಅವುಗಳ ರಾಸಾಯನಿಕ ರಚನೆಯನ್ನನುಸರಿಸಿ ಅಕ್ಷರಗಳಿಂದ ಗುರುತಿಸಿರುತ್ತಾರೆ. ಈ ಅಕ್ಷರಮಾಲೆಯಲ್ಲಿ ೩೧೦ ಕೋಟಿ ''ಅಕ್ಷರ''ಗಳಿವೆಯಂತೆ. ಈಗಿನ ಸಾಧನೆ ಎಂದರೆ ಈ ''ಅಕ್ಷರ''ಗಳನ್ನು ಗುರುತಿಸಿ ಅವು ಮಾನವ ವಂಶವಾಹಿಗಳ ಆವಾಸ ಸ್ಥಾನವಾದ ವರ್ಣತಂತುಗಳಲ್ಲಿ ಎಲ್ಲೆಲ್ಲಿ, ಯಾವ ಪಂಕ್ತಿಗಳಲ್ಲಿವೆ ಎಂಬುದನ್ನು ಖಚಿತವಾಗಿ ನಿರ್ದೇಶಿಸಿರುವುದು. ೩೧೦ ಕೋಟಿ ಎಂದರೆ ಇದು ಎಷ್ಟು ದೊಡ್ಡ ಸಂಖ್ಯೆ ಎಂಬುದು ತಟಕ್ಕನೆ ತಿಳಿಯುವುದಿಲ್ಲ. ದಿನವಿಡೀ ಹಗಲು ರಾತ್ರಿ ಪುರಸೊತ್ತಿಲ್ಲದೆ ಬಾಯಲ್ಲಿ ಎಣಿಸುತ್ತಾ ಹೋದರೆ ೨೫ ವರ್ಷಗಳೇ ಹಿಡಿದೀತು ಎಣಿಕೆ ಮುಗಿಯುವುದಕ್ಕೆ! ಇವಿಷ್ಟು ''ಅಕ್ಷರ''ಗಳ ಸ್ಥಾನಮಾನಗಳನ್ನು ಗುರುತಿಸಲು ಈ ಕೆಲಸಕ್ಕೆಂದೇ ಸೃಷ್ಟಿಮಾಡಿದ ಕಂಪ್ಯೂಟರ್‌ಗಳಿಂದ ಮಾತ್ರ ಸಾಧ್ಯವಾಯಿತು.

ಈಗೇನೋ ಅಕ್ಷರಮಾಲೆ ಸಿದ್ಧವಾಗಿದೆ. ಆದರೆ ಅಕ್ಷರ ಕಲಿತರೆ ಭಾಷೆ ಕಲಿತಹಾಗಲ್ಲ; ಅದೂ ಯಾವುದೋ ವಿದೇಶಿ ಪರಿಚಯವಿಲ್ಲದ ಭಾಷೆ. ಅಲ್ಲಿ ಇಲ್ಲಿ ಕೆಲವೊಂದು ತುಣುಕು ಪದಗಳು ತಿಳಿದಿವೆ. ಆ ಭಾಷೆಯ ಕಾಗುಣಿತ, ಪದವಿನ್ಯಾಸ, ವ್ಯಾಕರಣ, ವಾಕ್ಯರಚನೆಗಳನ್ನು ಸಾಕಷ್ಟು ತಿಳಿದರೇನೇ ಈಗಿನ ಸಾಧನೆಯ ಉಪಯೋಗ ಪೂರ್ತಿಯಾಗುವುದು. ಈ ಭಾಷೆಯನ್ನು ಕಲಿಯಲು ಮಾನವನಿಗೆ ಇನ್ನೂ ಹತ್ತಿಪ್ಪತ್ತು ವರ್ಷಗಳು ಬೇಕಾದೀತು ಎಂದಿದ್ದಾರೆ ವಿಜ್ಞಾನಿಗಳು. ಭಾಷೆ ಮುಖಗತವಾದರೆ ಮಾನವ ಜೀವನದಲ್ಲಿ ಅತ್ಯಾಶ್ಚರ್ಯಕರವಾದ ಅದ್ಭುತ ಕ್ರಾಂತಿಯೇ ಆದೀತು.

ಈ ಅತಿ ಸೂಕ್ಷ್ಮ ವಂಶವಾಹಿಗಳ ಬಗ್ಗೆ ತಿಳುವಳಿಕೆ ಬಂದಿದ್ದು ಕೇವಲ ನೂರೈವತ್ತು ವರ್ಷಗಳ ಹಿಂದೆ. ಅದುವರೆಗೆ ಮಾನವ ಹಾಗೂ ಪ್ರಾಣಿಗಳ ದೇಹರಚನೆ ಹೀಗೆ ಇರಬೇಕು, ಕೈ ಕಾಲುಗಳು ಬೆರಳುಗಳು ಇಂತಿಷ್ಟೇ ಉದ್ದ ಇರಬೇಕು, ಕೂದಲು ಕಣ್ಣು ಇಂಥಾ ಬಣ್ಣದ್ದೇ ಇರಬೇಕು ಎಂಬುದು ಹೇಗೆ ನಿರ್ಧಾರವಾಗುತ್ತದೆ ಎಂಬ ಪ್ರಶ್ನೆ ವಿಜ್ಞಾನಿಗಳನ್ನು ಕಾಡುತ್ತಿತ್ತು. ಸಾಮಾನ್ಯವಾಗಿ ಈ ಪ್ರಶ್ನೆಗೆ ''ದೈವೇಚ್ಛೆ'' ಎಂಬುದೇ ಉತ್ತರವಾಗಿರುತ್ತಿತ್ತು. ಆದರೆ ೧೮೬೬ರಲ್ಲಿ ಯೂರೋಪಿನ ಗ್ರಿಗೋರ್ ಜೋಹಾನ್ ಮೆಂಡೆಲ್ (೧೮೨೨-೮೪) ಎಂಬ ಕ್ರೈಸ್ತ ಸನ್ಯಾಸಿ ಬಟಾಣಿ ಗಿಡಗಳ ಮೇಲೆ ಮಾಡಿದ ಪ್ರಯೋಗಗಳಿಂದ ಜೀವಿಗಳ ದೇಹದಲ್ಲೇ ಅವುಗಳ ಆಕಾರ, ಗುಣಗಳನ್ನು ನಿರ್ದೇಶಿಸುವ ಸೂಕ್ಷ್ಮಾಂಶಗಳಿವೆ ಎಂಬುದು ಖಚಿತವಾಯಿತು. ಈ ಸೂಕ್ಷ್ಮಾಂಶಗಳೇ ಇಂದಿನ ವೈಜ್ಞಾನಿಕ ಭಾಷೆಯಲ್ಲಿನ ''ಜೀನ್'' (ವಂಶವಾಹಿ)ಗಳು.



*ವಂಶವಾಹಿ ಅಕ್ಷರಮಾಲೆಯನ್ನು ಸಿದ್ಧಮಾಡಿರುವ ಕ್ರೈಗ್ ವೆಂಟರ್ ಮತ್ತು ಫ್ರಾನ್ಸಿಸ್ ಕೊಲಿನ್ಸ್*

ಜೀನ್‌ಗಳೇ ಪ್ರಾಣಿ ಸಂಕುಲದಲ್ಲಿನ ಚಹರೆ ಮತ್ತು ಚರ್ಯೆಗಳಲ್ಲಿನ ವಿವಿಧ ವ್ಯತ್ಯಾಸ ಹಾಗೂ ಸಾಮ್ಯಗಳಿಗೆ ಕಾರಣ ಮತ್ತು ಇವು ತಂದೆ ತಾಯಿಗಳಿಂದ ವಂಶ ಪಾರಂಪರ್ಯವಾಗಿ ಮೂಡುತ್ತವೆ ಎಂಬುದು ವಿಶ್ವಾದ್ಯಂತ ನಡೆಸಿದ ಪ್ರಯೋಗಗಳಿಂದ ತಿಳಿದುಬಂತು. ಈ ದಿಶೆಯಲ್ಲಿ ಜೇಮ್ಸ್ ಡಿ. ವ್ಯಾಟ್ಸನ್, ಫ್ರಾನ್ಸಿಸ್ ಕ್ರಿಕ್ ಹಾಗೂ ಭಾರತ ಸಂಜಾತ ಹರಗೋಬಿಂದ ಖೊರಾನ ಅವರ ಕೊಡುಗೆ ಅಪಾರ. ಈ ಮೂವರೂ ನೊಬೆಲ್ ಪಾರಿತೋಷಕಗಳಿಂದ ಸನ್ಮಾನಿಸಲ್ಪಟ್ಟಿದ್ದಾರೆ.

ಇವರೆಲ್ಲರ ಹಾಗೂ ಇನ್ನಿತರರ ಪ್ರಯೋಗ, ಪರೀಕ್ಷೆಗಳಿಂದ ಆನುವಂಶೀಯತೆಯಲ್ಲಿ ಜೀನುಗಳ ಪ್ರಭಾವ ತಿಳಿದುಕೊಳ್ಳಲು ಶಕ್ಯವಾಗಿದೆ. ಈ ಜೀನ್‌ಗಳೇ ಮಾನವನ ಹಾಗೂ ಪ್ರಾಣಿಗಳ ದೇಹರಚನೆ ಮಾತ್ರವಲ್ಲ, ಅವರ ಕಾರ್ಯಕಲಾಪಗಳನ್ನೂ ಅವರನ್ನು ಕಾಡುವ ಅನೇಕಾನೇಕ ರೋಗರುಜಿಗಳನ್ನೂ ನಿಯಂತ್ರಿಸುತ್ತವೆ ಎಂಬುದು ಈಗ ಸ್ಪಷ್ಟವಾಗುತ್ತಿದೆ. ಜೀನುಗಳು ಹೇಗೆ ಕೆಲಸಮಾಡುತ್ತವೆ, ಅವುಗಳ ರಚನೆ, ವಿನ್ಯಾಸ, ಕಾರ್ಯಕಲಾಪಗಳು ಹೇಗಾಗುತ್ತವೆ, ಅವನ್ನು ಮಾನವ ತನಗೆ ಅನುಕೂಲವಾಗುವ ಹಾಗೆ ಹೇಗೆ ಬದಲಾಯಿಸಬಹುದು ಎಂಬುದನ್ನು ತಿಳಿಯಲು ಈಗ ತಯಾರಿಸಿರುವ ಜೀನುಗಳ ಮಹಾನಕ್ಷೆ (genome) ಪೂರಕವಾಗಿದೆ.

ಮಾನವ ತನ್ನ ಜೀವನವನ್ನು ಆರಂಭಿಸುವುದು ತನ್ನ ತಾಯಿಯ ಗರ್ಭಕೋಶದಲ್ಲಿ, ಒಂದೇ ಒಂದು ಅಂಡಾಣುವಿನ ರೂಪದಲ್ಲಿ. ತಾಯಿಯ ಈ ಅಂಡಾಣುವಿನಲ್ಲಿ ತಂದೆಯ ಒಂದು ರೇತಾಣು ಪ್ರವೇಶ ಮಾಡಿದಾಗ ಗರ್ಭ ಮೂಡುತ್ತದೆ. ಈ ಫಲಿತವಾದ ಅಂಡಾಣುವೇ ತಾಯಿಯ ರಕ್ತದಿಂದ ಆಹಾರ ಸೇವಿಸಿ ಬೆಳೆದು ಇನ್ನೊಂದು ಪ್ರತಿರೂಪದ ಜೀವಕೋಶವಾಗಿ ವಿಭಾಗವಾಗುತ್ತದೆ. ಈ ವಿಭಾಗವಾದ ಜೀವಕೋಶ ಅಂಡಾಣುವಿನಂತೆಯೇ ಮತ್ತೆ ಮತ್ತೆ ವಿಭಾಗವಾಗಿ ಕೋಟ್ಯಾನುಕೋಟಿ ಜೀವಕೋಶಗಳ ಮಹಾಜಾಲವೊಂದನ್ನು ನಿರ್ಮಿಸಿಕೊಳ್ಳುತ್ತಾ ಗರ್ಭದಲ್ಲಿ ಶಿಶುವಿನ ರೂಪ ತಳೆದು ಒಂಬತ್ತು ತಿಂಗಳ ನಂತರ ಮಗುವಾಗಿ ಹೊರಗೆಬಂದು ಬೆಳೆದು ಮಾನವನಾಗುತ್ತದೆ. ಹೀಗೆ ಕಣ್ಣಿಗೆ ಕಾಣಿಸದಷ್ಟು ಸೂಕ್ಷ್ಮವಾಗಿರುವ ಒಂದೇ ಒಂದು ಅಂಡಾಣುವಿನಿಂದ ಮಾನವ ದೇಹ

### ಮೊಟ್ಟೆ ತಿನ್ನುವ ಜೀನ್

*ಅಪರೂಪವಾಗಿ ಕೆಲವರು ದಿನವೂ ಮೊಟ್ಟೆಗಳನ್ನು ಧಾರಾಳವಾಗಿ ಕಬಳಿಸುತ್ತಿದ್ದರೂ ೯೦ ವರ್ಷ ಆರೋಗ್ಯವಂತರಾಗಿ ಕೊಲೆಸ್ಟರಾಲ್ ತೊಂದರೆಯಿಲ್ಲದೆ ಬದುಕಿರುವುದು ಸಾಬೀತಾಗಿದೆ. ಇದಕ್ಕೆ ಕಾರಣ ಅವರಲ್ಲಿರುವ ಜೀನ್‌ಗಳೇ ಎಂದು ಅಮೆರಿಕದ ವೇಕ್‌ಫಾರೆಸ್ಟ್ ವಿಶ್ವವಿದ್ಯಾನಿಲಯದ ಡಾ|| ರಿಚರ್ಡ್ ಬಿ. ವೀನ್‌ಬರ್ಗ್ ಎಂಬುವರು ಕಂಡುಹಿಡಿದಿದ್ದಾರೆ. APO-A-IV-2 ಎಂಬ ಸಸಾರಜನಕವನ್ನುಂಟುಮಾಡುವ ಒಂದು ಜೀನ್ ಅಂಥವರಲ್ಲಿರುವುದರಿಂದ ಅವರೆಷ್ಟು ಮೊಟ್ಟೆಗಳನ್ನು ತಿಂದರೂ ಅವರ ರಕ್ತದಲ್ಲಿನ ಕೊಲೆಸ್ಟರಾಲ್ ಹೆಚ್ಚಾಗುವುದಿಲ್ಲ ಎಂದು ವೀನ್‌ಬರ್ಗ್ ಹೇಳುತ್ತಾರೆ. ಆ ಜೀನನ್ನು ಮಾನವನ ಜೀವಕೋಶಗಳಲ್ಲಿ ಸೇರಿಸಬಹುದಾದರೆ ಕೊಲೆಸ್ಟರಾಲಿನ ಭಯವೇ ಇಲ್ಲ, ಏನು ತಿಂದರೂ!*

### ದ್ವಂದ್ವ ವ್ಯಕ್ತಿತ್ವದ ಜೀನ್

*ದ್ವಂದ್ವ ವ್ಯಕ್ತಿತ್ವದ ಕಾಯಿಲೆ ಒಂದು ಜೀನ್‌ನಿಂದ ಉಂಟಾಗುತ್ತದೆ ಎಂದು ನ್ಯೂ ಜೆರ್ಸಿಯ ರೂಟ್‌ಗರ್ಸ್ ವಿಶ್ವವಿದ್ಯಾನಿಲಯದ ವಿಜ್ಞಾನಿಗಳು ಕಂಡುಹಿಡಿದಿದ್ದಾರೆ. ಈ ಜೀನ್ ಮೊದಲನೇ ವರ್ಣತಂತುವಿನ 1Q 21-Q 22 ಎಂದು ನಿರ್ದೇಶಿಸಲ್ಪಟ್ಟ ಸ್ಥಾನದಲ್ಲಿದೆ ಎಂದು ಗುರುತಿಸಿದ್ದಾರೆ. ಇನ್ನೊಂದು ವರ್ಣತಂತು ೧೩ (೧೩ Q ೩೨) ನಲ್ಲಿಯೂ ಇದೇ ತರಹದ ಜೀನ್ ಇದೆ ಎಂಬುದು ಅವರ ಗಮನಕ್ಕೆ ಬಂದಿದೆಯಂತೆ.*

ಹುಟ್ಟಿ ಬೆಳೆಯುತ್ತದೆ. ಆದರೆ ಒಂದೇ ಅಂಡಾಣುವಿನಿಂದ ಭಾಗವಾಗಿ ವೃದ್ಧಿಯಾಗುವ ಜೀವಾಣುಗಳ ಸಮೂಹ ಹೇಗೆ ಕೈ, ಕಾಲು, ಕಣ್ಣು, ಮೂಗುಗಳಾಗಿ ಮಾರ್ಪಾಟಾಗುತ್ತವೆ? ಹೀಗಾಗುವುದಕ್ಕೆ ಅಂಡಾಣುವಿನಲ್ಲಿರುವ ವಂಶವಾಹಿಗಳೇ ಕಾರಣ.

ಅಂಡಾಣುವೂ ಒಂದು ಜೀವಕೋಶ ತಾನೆ. ಈ ಜೀವಕೋಶಗಳೇ ದೇಹದ ಮೂಲ ವಸ್ತು. ಪ್ರಾಣಿಗಳ ಪ್ರತಿಯೊಂದು ಜೀವಕೋಶದಲ್ಲೂ ತಂದೆ ತಾಯಿಯರಿಂದ ಬಂದ ಕೋಟ್ಯಂತರ ವಂಶವಾಹಿಗಳು ಆ ಪ್ರಾಣಿಗಳ ಕೈ, ಕಾಲು, ಮುಖ ಮೊದಲಾದ ಅಂಗಗಳು ಹೇಗೆ ಬೆಳೆಯಬೇಕು, ಎಷ್ಟೆಷ್ಟು ಬೆಳೆಯಬೇಕು ಇತ್ಯಾದಿ ಅನೇಕ ಗುಣಗಳನ್ನು ನಿರ್ದೇಶಿಸುವ ಶಕ್ತಿಯನ್ನು ಪಡೆದುಕೊಂಡು ಬಂದಿರುತ್ತವೆ. ಜೀವಕೋಶಗಳು ಬೇರೆ ಬೇರೆ ಆಕಾರಗಳಲ್ಲಿದ್ದರೂ ಅವು ಮೂಲತಃ ಒಂದು ಪೊರೆಯಿಂದ ಸುತ್ತಲ್ಪಟ್ಟ ಜೀವದ್ರವ್ಯ. ಜೀವದ್ರವ್ಯ ಎಂದರೆ ಜೀರ್ಣಿಸಲ್ಪಟ್ಟ ಅನೇಕ ಆಹಾರ ಪದಾರ್ಥಗಳನ್ನೊಳಗೊಂಡ ದ್ರವ. ಈ ದ್ರವವೇ ಮಾನವನಿಗೆ ಜೀವಿಯಾಗಿ ಕೆಲಸ ಮಾಡಲು ಶಕ್ತಿ ಕೊಡುತ್ತದೆ. ಜೀವಕೋಶದ ಮಧ್ಯೆ ಒಂದು ಸಾಂದ್ರ ಭಾಗವಿದೆ. ಇದೇ ಜೀವ ಕೇಂದ್ರ. ಇದರಲ್ಲೇ ಜೀವ ಎಂಬ ಅಲೌಕಿಕ ಶಕ್ತಿ ಕೇಂದ್ರೀಕೃತವಾಗಿದೆ. ಜೀವಕೋಶದ ಸುತ್ತಲೂ ಒಂದು ತೆಳ್ಳನೆಯ ಪೊರೆ ಇರುತ್ತೆ. ಜೀವಿಕೇಂದ್ರದಲ್ಲಿ ನೀಳವಾಗಿ ಬಣ್ಣದ ದಾರದಂತಿರುವ ವರ್ಣತಂತುಗಳು (Chromosome) ತೇಲಾಡುತ್ತಿರುತ್ತವೆ. ಇವೆಲ್ಲ ಎಷ್ಟು ಸೂಕ್ಷ್ಮ ಎಂದರೆ ಬರೀಕಣ್ಣಿಗಂತೂ ಕಾಣುವುದೇ ಇಲ್ಲ. ಸಾವಿರಾರು ಪಾಲು ಹಿರಿದಾಗಿ ತೋರಿಸುವ ಸೂಕ್ಷ್ಮದರ್ಶಿಗಳು, ಎಲೆಕ್ಟ್ರಾನ್ ಸೂಕ್ಷ್ಮದರ್ಶಿಗಳಿಂದ ಮಾತ್ರ ಕಾಣಲು ಸಾಧ್ಯ. ತಂದೆ - ತಾಯಿಯರಿಂದ ಇಳಿದುಬಂದ ವಂಶವಾಹಿಗಳು ಶೇಖರವಾಗಿರುವುದು ಈ ವರ್ಣತಂತುಗಳಲ್ಲೇ. ವಿವಿಧ ಜಾತಿಯ ಪ್ರಾಣಿಗಳ ಜೀವಕೋಶಗಳಲ್ಲಿ ವರ್ಣತಂತುಗಳು ಬೇರೆ ಬೇರೆ ನಿರ್ದಿಷ್ಟ ಸಂಖ್ಯೆಯಲ್ಲಿರುತ್ತವೆ. ನೊಣದಲ್ಲಿ ಎಂಟೇ ಎಂಟು ವರ್ಣತಂತುಗಳಿದ್ದರೆ, ಕೆಲವು ಜಾತಿಯ ಮಿಡತೆಗಳಲ್ಲಿ ೨೪ ಇರುತ್ತವೆ. ಬೆಕ್ಕಿನಲ್ಲಿ ೩೮, ಇಲಿಯಲ್ಲಿ ೪೦, ಜೇನುನೊಣದಲ್ಲಿ ೧೪ ಹೀಗೆ. ಅದೇ ಮಾನವನಲ್ಲಿ ೪೬. ವರ್ಣತಂತುಗಳೆಲ್ಲ ಜೋಡಿ ಜೋಡಿಯಾಗೇ ಇರುತ್ತವೆ. ಅಂದರೆ ತಾಯಿಯಿಂದ ಬಂದ ೨೩ ವರ್ಣತಂತುಗಳು ತಂದೆಯಿಂದ ಬಂದ ೨೩ ವರ್ಣತಂತುಗಳ ಜೊತೆ ಕೂಡಿ ಇರುತ್ತವೆ. ಜೀವಕೋಶಗಳು ತಮ್ಮನ್ನು ತಾವೇ ವಿಭಾಗಿಸಿಕೊಂಡು ವೃದ್ಧಿಯಾಗುವ ಸಮಯದಲ್ಲಿ, ವರ್ಣತಂತುಗಳೂ ಸಹ ತಮ್ಮಲ್ಲಿರುವ ವಂಶವಾಹಿಗಳ ಪಡಿಯಚ್ಚನ್ನು ಜೊತೆಯೇ ಸೃಷ್ಟಿಸಿಕೊಂಡು ಸಂತಾನವಾದ ಜೀವಕೋಶಗಳಲ್ಲಿರುತ್ತವೆ. ಅಂದರೆ ಪ್ರತಿಯೊಂದು ಜೀವಕೋಶದಲ್ಲೂ ತಂದೆ ತಾಯಿಯರಿಂದ ಬಳುವಳಿಯಾಗಿ ಬಂದ ವಂಶವಾಹಿಗಳನ್ನು ಅಂತರ್ಗತ ಮಾಡಿಕೊಂಡ ವರ್ಣತಂತುಗಳಿರುತ್ತವೆ ಎಂದಾಯ್ತು. ಹೀಗಿರುವುದರಿಂದಲೇ ಒಂದೇ ಒಂದು ಜೀವಕೋಶದಿಂದ ಪ್ರಾಣಿಯ ಪಡಿಯಚ್ಚನ್ನು (Clone) ಬೆಳೆಸಲು ಸಾಧ್ಯವಾಗಿರುವುದು. ಎಲ್ಲ ಜೀವಕೋಶಗಳಲ್ಲೂ ವರ್ಣತಂತುಗಳು ಜೊತೆ ಜೊತೆಯಾಗಿದ್ದರೂ, ಅಂಡಾಣು ಮತ್ತು ರೇತಾಣುಗಳಲ್ಲಿ ಮಾತ್ರ ಜೋಡಿ ತಂತುಗಳ ಒಂದು ಬಾಹು ಮಾತ್ರ ಇರುತ್ತದೆ. ಅಂಡಾಣುವಿನಲ್ಲಿ ತಾಯಿಯ ವರ್ಣತಂತುವಿನ ಒಂದು ಬಾಹು, ರೇತಾಣುವಿನಲ್ಲಿ ತಂದೆಯ ವರ್ಣತಂತುವಿನ ಒಂದು ಬಾಹು ಗರ್ಭಾಧಾನ ಸಮಯದಲ್ಲಿ ಕೂಡಿಕೊಳ್ಳುತ್ತವೆ. ಈ ಎರಡು ಬಾಹುಗಳೂ ಜೋಡಿಯಾಗಿದ್ದು ತಂದೆ ತಾಯಿಯರ ಎಲ್ಲ ವಂಶವಾಹಿಗಳ ಸಮೇತ ಇರುತ್ತವೆ. ಆನುವಂಶಿಕವಾಗಿ ಬರುವ ಎಲ್ಲ ಲಕ್ಷಣಗಳ ಅರಿವೂ ಈ ವಂಶವಾಹಿ ಜೀನುಗಳಲ್ಲಿ ಕ್ರೋಡೀಕೃತವಾಗಿರುತ್ತವೆ. ಜೀವಕೋಶ ಬೆಳೆದು ಇನ್ನೊಂದು ಜೀವಕೋಶವನ್ನು ಉತ್ಪತ್ತಿ ಮಾಡುವ ಸಮಯದಲ್ಲಿ ವಂಶವಾಹಿ ಜೀನುಗಳ ಪಡಿಯಚ್ಚುಗಳೂ ಉತ್ಪತ್ತಿಯಾಗಿ ಸಂತಾನವಾದ ಜೀವಕೋಶಕ್ಕೆ ವರ್ಗಾಯಿಸಲ್ಪಡುತ್ತವೆ. ಜೀನುಗಳು ವರ್ಣತಂತುಗಳ ಒಂದು ನಿರ್ದಿಷ್ಟ ಭಾಗದಲ್ಲಿ ಇರುವುದು ಖಚಿತವಾಗಿದೆ. ಜೀನಿನ ಮುಖ್ಯ ವಸ್ತು ಎಂದರೆ ಡಿಯಾಕ್ಸಿ ರೈಬೋ ನ್ಯೂಕ್ಲಿಯಿಕ್ ಆಮ್ಲ. ಇದನ್ನೇ ಸಾಮಾನ್ಯವಾಗಿ ಡಿ. ಎನ್. ಎ. (DNA) ಎಂದು ಕರೆಯುತ್ತಾರೆ.





(ಚಿತ್ರ ೧) : ಡಿ.ಎನ್.ಎ. ಎಡ ತಿರುಚಿದ ಏಣಿ ಆಕಾರದ ಮಾದರಿ. ಅದರ ಎರಡು ಬಾಹುಗಳಲ್ಲೂ ವಂಶವಾಹಿ ಮಾಹಿತಿಗಳು ತುಂಬಿರುತ್ತವೆ.

(ಚಿತ್ರ ೨) ಒಂದಕ್ಕೊಂದು ಬಿಗಿಯಾಗಿ ಹೆಣೆದುಕೊಂಡಿರುವ ಡಿ.ಎನ್.ಎ. ಏಣಿಗಳು (ಮಾದರಿ)

ಜೀನ್‌ಗಳಲ್ಲಿರುವ ಈ ಡಿ. ಎನ್. ಎ. ನೇ ವಂಶವಾಹಿಗಳ ಜೈವಿಕ ಭಂಡಾರ. ಅದರ ಆಕಾರ ವಿನ್ಯಾಸಗಳನ್ನು ಮೊಟ್ಟಮೊದಲಿಗೆ ಕಂಡುಹಿಡಿದವರು ಜೇಮ್ಸ್ ವ್ಯಾಟ್ಸನ್ ಮತ್ತು ಫ್ರಾನ್ಸಿಸ್ ಕ್ರಿಕ್. ಡಿ. ಎನ್. ಎ. ಒಂದು ಜೋಡಿ ಸುರುಳಿಯ ಹಾಗಿರುತ್ತದೆ; ಈ ಜೋಡಿ ಸುರುಳಿಗಳು ತಿರುಚಿದ ಏಣಿಯ ಆಕಾರದಲ್ಲಿದ್ದು, ಅದರ ಎರಡು ಬಾಹುಗಳೂ ಮೆಟ್ಟಿಲುಗಳಿಂದ ಕೂಡಿಸಲ್ಪಟ್ಟಿವೆ ಎಂದು ಅವರಿಬ್ಬರು ಪ್ರಯೋಗಗಳಿಂದ ತೋರಿಸಿಕೊಟ್ಟರು (ಚಿತ್ರ ೧ ನೋಡಿ). ಅತಿಸೂಕ್ಷ್ಮವಾಗಿರುವ ಈ ಸುರುಳಿಗಳು ಒಂದಕ್ಕೊಂದು ಬಿಗಿದುಕೊಂಡಿರುತ್ತವೆ (ಚಿತ್ರ ೨ ನೋಡಿ). ಜೀವಕೋಶದ ಡಿ. ಎನ್. ಎ. ನಲ್ಲಿ ನೂರಾರು ಕೋಟಿ ಸುರುಳಿಗಳಿರುತ್ತವೆ. ಈ ಸುರುಳಿಗಳಲ್ಲೇ ಊಹೆಗೆ ನಿಲುಕದಷ್ಟು ವಂಶವಾಹಿ ಮಾಹಿತಿಗಳು ತುಂಬಿಕೊಂಡಿರುವುದು. ಮಾನವಕೃತ ಕಂಪ್ಯೂಟರ್‌ನಲ್ಲೂ ಇಷ್ಟೊಂದು ಮಾಹಿತಿಗಳನ್ನು ಶೇಖರಿಸಿಡಲು ಸಾಧ್ಯವಿಲ್ಲ. ಈ ಮಾಹಿತಿಗಳು ಜೀವಿಯ ಪ್ರತಿಯೊಂದು ಕಣಕಣವನ್ನೂ ನಿರ್ದೇಶಿಸುವ ಶಕ್ತಿಯನ್ನು ಪಡೆದುಕೊಂಡಿರುತ್ತವೆ. ಅಷ್ಟೊಂದು ಮಾಹಿತಿ ಅದರಲ್ಲಿ ಶೇಖರವಾಗಿರುವುದು ಕಂಪ್ಯೂಟರ್‌ನಲ್ಲಿ ಶೇಖರವಾಗುವಂತೆಯೇ ಸಂಕೇತಗಳ ಮೂಲಕ. ಒಂದೇ ಒಂದು ಮುಖ್ಯ ವ್ಯತ್ಯಾಸವೆಂದರೆ ಕಂಪ್ಯೂಟರ್ ಕೇವಲ ಮಾನವ ನಿರ್ಮಿತ ಅಚೇತನ ವಸ್ತು. ಅದೇ ಜೀನ್‌ಗಳಾದರೋ ಜೈವಿಕ ವಸ್ತು; ತನ್ನ ಪ್ರತಿರೂಪವನ್ನು ತಾನೇ ಸೃಷ್ಟಿಸಿಕೊಳ್ಳುವ ಶಕ್ತಿಯುಳ್ಳದ್ದು. ಕಂಪ್ಯೂಟರ್ ಕೇವಲ ಎರಡೇ – ೦ ಮತ್ತು ೧ – ಸಂಖ್ಯೆಗಳ ಉಪಯೋಗದ ಮೂಲಕ ತನ್ನೆಲ್ಲ ಕೆಲಸ ಕಾರ್ಯಗಳನ್ನು ನಿರ್ವಹಿಸುತ್ತದೆ; ಹಾಗೆಯೇ ಡಿ. ಎನ್. ಎ. ನಾಲ್ಕೇ ನಾಲ್ಕು ಜೈವಿಕ ಸಂಕೇತಗಳಿಂದ ವಂಶವಾಹಿಯನ್ನು ನಿರ್ದೇಶಿಸುವ ಕಾರ್ಯ ಮಾಡುತ್ತದೆ. ಈ ನಾಲ್ಕು ಸಂಕೇತಗಳೆಂದರೆ ನಾಲ್ಕು ರಾಸಾಯನಿಕ ಸಂಯುಕ್ತ ವಸ್ತುಗಳು - ಅಡಿನೈನ್, ಥೈಮೈನ್, ಗ್ವಾನೈನ್ ಮತ್ತು ಸೈಟೋಸೈನ್. ಈ ನಾಲ್ಕು ರಾಸಾಯನಿಕ ವಸ್ತುಗಳು ಜೈವಿಕ ಭಾಷೆಯ ಅಕ್ಷರಗಳಿದ್ದ ಹಾಗೆ. ವಿಜ್ಞಾನಿಗಳು ಅನುಕೂಲಕ್ಕೋಸ್ಕರ ಇವನ್ನು A.T.G.C. ಎಂಬ ಅಕ್ಷರಗಳಿಂದ ಗುರುತಿಸುತ್ತಾರೆ. ಡಿ. ಎನ್. ಎ.ಗಳು ಜೀವಕೋಶದ ಸಾಂದ್ರಕೇಂದ್ರವನ್ನು ಬಿಟ್ಟು ಹೊರಗೆ ಹೋಗುವುದೇ ಇಲ್ಲ. ಅವು ದೇಹದ ವಿವಿಧ ಭಾಗಗಳಿಗೆ ಅಂದರೆ ಬೇರೆ ಜೀವಕೋಶಗಳಿಗೆ ತನ್ನ ಆಜ್ಞೆಗಳನ್ನು ತಿಳಿಸಲು ರೈಬೋ

### ಮಲೇರಿಯ ನಿರ್ಮೂಲ ಮಾಡಲು ಜೀನ್

*ಸೊಳ್ಳೆಯ ರಕ್ತದಲ್ಲಿ ಮಲೇರಿಯ ತರುವ ಪರೋಪಜೀವಿಗಳನ್ನು ಪ್ರತಿರೋಧಿಸುವ ವ್ಯವಸ್ಥೆ ಇಲ್ಲ. ಆದ್ದರಿಂದಲೇ ಸೊಳ್ಳೆ ಮನುಷ್ಯನನ್ನು ಕಡಿದಾಗ ಆ ಪರೋಪಜೀವಿಗಳು ಅವನ ರಕ್ತಕ್ಕೂ ಬಂದು ಮಲೇರಿಯ ಕಾಯಿಲೆ ತರುತ್ತವೆ. ಆ ಪರೋಪಜೀವಿಗಳನ್ನು ಸೊಳ್ಳೆಯಲ್ಲಿಯೇ ನಾಶ ಮಾಡಲು ಪ್ರತಿರೋಧಕ ವ್ಯವಸ್ಥೆಗೆ ಕಾರಣವಾದ ಜೀನನ್ನು ಬೇರೊಂದು ಕೀಟದಿಂದ ಬೇರ್ಪಡಿಸಿ ತಂದು ಸೊಳ್ಳೆಗಳ ಜೀನ್ ಸ್ಥಾನದಲ್ಲಿಟ್ಟರೆ ಸಾಧ್ಯವಾದೀತು. ಈ ತರಹದ ಜೀನ್ ವರ್ಗಾಯಿಸುವ ಪ್ರಯೋಗಗಳನ್ನು ಛಗಾಸ್ ಎಂಬ ಕಾಯಿಲೆಯನ್ನುಂಟುಮಾಡುವ ಕೀಟಗಳ ಮೇಲೆ ಈಗಾಗಲೇ ಮಾಡಿಯಾಗಿದೆ. ಹೀಗೆಯೇ ಸೊಳ್ಳೆಗಳ ಮೇಲೂ ಪ್ರಯೋಗ ಮಾಡಿ ಮಲೇರಿಯವನ್ನು ನಿರ್ಮೂಲ ಮಾಡಬಹುದು ಎಂದಿದ್ದಾರೆ ಲಂಡನ್ನಿನ ರಾಯಲ್ ಫ್ರೀ ಹಾಸ್ಪಿಟಲ್‌ನ ವೈದ್ಯ ವಿಜ್ಞಾನಿ ಡಾ॥ ಸ್ಟೀವ್ ಗಿಲ್ಲಿಸ್‌ಪೀ ಯವರು.*

ನ್ಯೂಕ್ಲಿಯಿಕ್ ಆಮ್ಲ (ಆರ್. ಎನ್. ಎ.) ವನ್ನುಪಯೋಗಿಸುತ್ತದೆ.

ಮೇಲೆ ಹೇಳಿದ A. T. G. C. ರಾಸಾಯನಿಕ ವಸ್ತುಗಳು ಪ್ರತಿಯೊಂದು ಡಿ.ಎನ್.ಎ. ನಲ್ಲಿಯೂ ಅದರ ಮೂತಿಯಿಂದ ಬಾಲದವರೆಗೆ ಒಂದು ವಿಶೇಷ ಅರ್ಥಪೂರ್ಣ ಸರಣಿ ರೂಪದಲ್ಲಿ ಯೋಜಿಸಲ್ಪಟ್ಟಿರುತ್ತವೆ. ಈ ಸರಣಿಯನ್ನು ಗುರುತಿಸಿ ವಿಶ್ಲೇಷಿಸಿದರೆ ಜೀನಿನ ರಚನೆ, ಸ್ವರೂಪ, ಕಾರ್ಯಗಳನ್ನು ತಿಳಿದುಕೊಳ್ಳಬಹುದು. ಅಂದರೆ ಡಿ. ಎನ್. ಎ. ಯ ಜೋಡಿ ಸುರುಳಿಯಲ್ಲಿ ಜೀವಿಯ ದೇಹವಿನ್ಯಾಸದ ಪೂರ್ಣನಕ್ಷೆ ಇರುತ್ತದೆ. ಮಾನವನ ಡಿ. ಎನ್. ಎ. ಸುರುಳಿಯಲ್ಲಿ ಸುಮಾರು ೬೦೦ ಕೋಟಿ ರಾಸಾಯನಿಕ ಮೂಲಕಣಗಳಿರುತ್ತವೆ. ಅವುಗಳಲ್ಲೇ ದೇಹವಿನ್ಯಾಸದ ಅರಿವು ಅಡಗಿರುವುದು. ಜೀವಿಯು ಪ್ರಪ್ರಥಮವಾಗಿ ಭೂಮಿಯ ಮೇಲೆ ಬಂದಾಗಿನಿಂದ, ಅಂದರೆ ಸುಮಾರು ೪೦೦ ಕೋಟಿ ವರ್ಷಗಳಿಂದ, ಜೀವಿಯಲ್ಲಿ ಯಾವ ಯಾವ ಗುಣಗಳು ಕಂಡುಬಂದಿವೆಯೋ ಅವೆಲ್ಲ ಡಿ. ಎನ್. ಎ. ಸುರುಳಿಯಲ್ಲಿ ಅನೇಕಾನೇಕ ಸೂತ್ರಗಳ ರೂಪದಲ್ಲಿ ಅಡಕವಾಗಿದೆ. ಎಲ್ಲವೂ ಮಾನವನಿಗೆ ಪ್ರಯೋಜನಕ್ಕೆ ಬರುತ್ತವೆ ಎಂದೇನಲ್ಲ. ಎಷ್ಟೋ ಆನುವಂಶಿಕ ಗುಣಗಳು ಪ್ರಕಟವಾಗುವುದೇ ಇಲ್ಲ. ಆದರೂ ಆ ಜೀನುಗಳು ನಷ್ಟವಾಗದಂತೆ ಪ್ರಕೃತಿ ಡಿ. ಎನ್. ಎ. ಎಂಬ ಭಂಡಾರದಲ್ಲಿ ಅವನ್ನು ಭದ್ರವಾಗಿ ಕೂಡಿಟ್ಟಿದೆ.

ಡಿ. ಎನ್. ಎ. ತಿರುಚಿದ ಏಣಿಯ ಆಕಾರದಲ್ಲಿದೆಯಷ್ಟೆ. ಏಣಿಯ ಎರಡು ಬಾಹುಗಳುದ್ದಕ್ಕೂ A.T.G.C. ಎಂಬ ರಾಸಾಯನಿಕ ಅಣುಗಳು ಪುನಃ ಪುನಃ ಒಂದನ್ನೊಂದು ಅನುಸರಿಸಿರುವುದು ಕಾಣುತ್ತದೆ (ಚಿತ್ರ ೩ ನೋಡಿ). ಎಲ್ಲ ಡಿ. ಎನ್. ಎ. ಗಳೂ ಹೀಗೇ ಇರುತ್ತವೆ. ಒಂದು ಬಾಹುವಿನಲ್ಲಿ ತಾಯಿಯಿಂದ ಬಂದ ಜೈವಿಕ ಮಾಹಿತಿ, ಇನ್ನೊಂದು ಬಾಹುವಿನಲ್ಲಿ ತಂದೆಯಿಂದ ಬಂದ ಜೈವಿಕ ಮಾಹಿತಿ ಇರುತ್ತವೆ. ಈ ಎರಡು ಬಾಹುಗಳೂ ಮೆಟ್ಟಿಲುಗಳಿಂದ ಸೇರಿಸಲ್ಪಟ್ಟಿವೆ. ಈ ಮೆಟ್ಟಿಲಿನಲ್ಲಿ ಅರ್ಧಭಾಗ ತಾಯಿಯ ಜೀನ್ ಕಡೆಯಿಂದ, ಇನ್ನರ್ಧ ಭಾಗ ತಂದೆಯ ಜೀನ್ ಕಡೆಯಿಂದ ಹೊರಟುಬಂದಿರುತ್ತದೆ.

ಡಿ. ಎನ್. ಎ. ಏಣಿಯಲ್ಲಿ A.T.G.C. ರಾಸಾಯನಿಕ ವಸ್ತುಗಳು ಅನೇಕಾನೇಕ ರೀತಿಯ ಸರಣಿಗಳಲ್ಲಿ ಯೋಜಿಸಲ್ಪಟ್ಟಿವೆ. ಉದಾಹರಣೆಗೆ : ಒಂದು ಜೋಡಣೆ AC, AC, CA, CT, CG, GC, GA....... ಆದರೆ, ಇನ್ನೊಂದು ಜೋಡಣೆ AG, GC, CT, AA, GC, CC, T-A, GA, GC, CC ಹೀಗೇ ಮುಂದುವರೆದು ಆರೇಳು ಸಾವಿರ ಅಕ್ಷರಗಳವರೆಗೂ ಹೋಗಬಹುದು. ಈ ಎಲ್ಲ ಸರಣಿಗಳನ್ನೂ ಗುರುತಿಸಿರುವ ವರ್ಣಮಾಲೆಯೇ ಜೀವವಾಹಿನಿ ಸೂತ್ರ (genetic code) ಎಂದು ಪ್ರಸಿದ್ಧವಾಗಿದೆ. ಒಂದು ಲೆಕ್ಕದ ಪ್ರಕಾರ ಮಾನವನ ೪೬ ವರ್ಣತಂತುಗಳಲ್ಲಿರುವ ಜೀನ್‌ಗಳ A.C.T.G. ಗಳನ್ನು ಮೇಲಿನ ರೀತಿಯಲ್ಲಿ ಸುಮಾರು ೩,೦೦,೦೦೦......ಒಟ್ಟು ೨೪೦ ಕೋಟಿ ಸೊನ್ನೆಗಳು......ರೀತಿಯಲ್ಲಿ ಕೂಡಿಸಬಹುದಂತೆ! ಈ ವರ್ಣಮಾಲೆಯನ್ನು ಅದಕ್ಕೋಸ್ಕರವೇ ತಯಾರುಮಾಡಿದ ಕಂಪ್ಯೂಟರ್‌ಗಳ ಸಹಾಯದಿಂದ ಸಿದ್ಧಮಾಡಿರುವುದೇ ವೆಂಟರ್ ಮತ್ತು ಕೊಲಿನ್ಸ್ ಅವರ ಇತ್ತೀಚಿನ ಸಾಧನೆ.

ಈ ನಕ್ಷೆಯಿಂದ ಏನು ಪ್ರಯೋಜನ? ನಕ್ಷೆಯಲ್ಲಿನ ಜೀನುಗಳು ಇಂತಿಂಥವೇ, ಇವುಗಳು ಪ್ರಚೋದಿಸುವ ಗುಣಗಳು ಹೀಗೆ ಎಂದು ತಿಳಿದ ಮೇಲೆ ವಿಜ್ಞಾನಿಗಳು ಮಾನವನನ್ನು ಕಾಡುವ ಅನೇಕ ಕಾಯಿಲೆಗಳು ವಿಪರೀತಕ್ಕೆ ಹೋಗದಂತೆ ತಡೆಯಬಹುದು, ವಾಸಿಯೂ ಮಾಡಬಹುದು, ವಯೋಮಾನವನ್ನು ದೀರ್ಘಗೊಳಿಸಬಹುದು, ವ್ಯಕ್ತಿಯ ಹಾನಿಕಾರಕ ಪ್ರವೃತ್ತಿಗಳನ್ನು ನಿವಾರಿಸಬಹುದು, ಹಿತಕಾರಿ ಪ್ರವೃತ್ತಿಗಳನ್ನು ವೃದ್ಧಿಗೊಳಿಸಬಹುದು. ಒಟ್ಟಾರೆ ಮಾನವ ಜೀವನವನ್ನು ಉತ್ತಮೋತ್ತಮವಾಗಿ ಅಭಿವೃದ್ಧಿಗೊಳಿಸಬಹುದು, ಎನ್ನುತ್ತಾರೆ ವಿಜ್ಞಾನಿಗಳು. ಈಗಾಗಲೆ ಅನೇಕ ಜೀನ್ ಸೂತ್ರಗಳ ಒಳಗುಟ್ಟು ತಿಳಿದಿರುವುದರಿಂದ, ಮಾನವನನ್ನು ಸಾಮಾನ್ಯವಾಗಿ ಕಾಡುವ ೩೦೦೦ ರೋಗರುಜಿನಗಳಲ್ಲಿ ೨೦೦ ರೋಗಗಳ ತಪಾಸಣೆ ಸಾಧ್ಯವಾಗಿದೆ. ಅನೇಕ ಪಿಡುಗುಗಳಿಗೆ ಜೀನುಗಳಲ್ಲಿನ ದೋಷವೇ ಕಾರಣ ಎಂದು ಈಗ ಗೊತ್ತಾಗಿದೆ. ಜೀನುಗಳು ಅನೇಕ ಕಾರಣಗಳಿಂದ ದೋಷಯುಕ್ತವಾಗಬಹುದು. ಅತಿ ಶಾಖ, ಎಕ್ಸ್-ರೇ, ಅಣು ವಿಕಿರಣ, ರಾಸಾಯನಿಕ ಮಾರ್ಪಾಟು, ಇತ್ಯಾದಿ. ನಿರಾಳ ರಕ್ತ ಸ್ರಾವ (haemophelia) ಮತ್ತು ಕೆಲವೊಂದು ಮಾಂಸಖಂಡಗಳ ಕಾಯಿಲೆಗಳಿಗೆ ಕಾರಣವಾದ ಜೀನ್‌ಗಳನ್ನು ಗುರುತಿಸಿ ಅವುಗಳ ದೋಷಗಳನ್ನು ನಿವಾರಿಸಲು ಈಗ ಸಾಧ್ಯವಾಗಿದೆ. ದೋಷಯುಕ್ತ ಜೀನ್‌ಗಳನ್ನು ಸರಿಪಡಿಸಿ, ಅಥವಾ ಅವುಗಳನ್ನು ವರ್ಣತಂತುವಿನಿಂದ ತೆಗೆದುಹಾಕಿ, ಆರೋಗ್ಯವಂತ ಜೀನುಗಳನ್ನು ಅವುಗಳ ಸ್ಥಾನದಲ್ಲಿರಿಸಿ ಕಾಯಿಲೆಗಳನ್ನು ಗುಣಪಡಿಸುವ ಪ್ರಯತ್ನದಲ್ಲಿ ವಿಜ್ಞಾನಿಗಳು, ವೈದ್ಯರು ಪ್ರಗತಿಯನ್ನು ಸಾಧಿಸುತ್ತಿದ್ದಾರೆ. ಹರಗೋಬಿಂದ ಖೊರಾನ ಅವರು ತಮ್ಮ ಸಹೋದ್ಯೋಗಿಗಳೊಂದಿಗೆ ಸಾಧನೆ ಮಾಡಿದ ಕಾರ್ಯ ಈ ದಿಶೆಯಲ್ಲಿದೆ. ಅವರು ವೈರಸನ್ನುಪಯೋಗಿಸಿ ಪ್ರಯೋಗಶಾಲೆಯಲ್ಲಿ ರಾಸಾಯನಿಕವಾಗಿ ಒಂದು ಜೀನನ್ನು ತಯಾರುಮಾಡಿ, ಇನ್ನೊಂದು ಜೀವಕೋಶದಲ್ಲಿನ ಜೀನ್ ಸ್ಥಾನದಲ್ಲಿರಿಸಿ, ಅದು ಕಾರ್ಯೋನ್ಮುಖವಾಗುವುದನ್ನು ತೋರಿಸಿದ್ದಾರೆ. ಈ ಸಾಧನೆಯಿಂದಾಗಿ ಜೀನ್ ಚಿಕಿತ್ಸೆ (gene therapy) ಎಂಬ ಹೊಸ ಚಿಕಿತ್ಸಾಕ್ರಮ ಬೆಳೆಯಲು ಸಾಧ್ಯವಾಗಿದೆ. ಈಗಾಗಲೇ ಅನೇಕ ಕಾಯಿಲೆಗಳನ್ನು ಜೀನ್ ಚಿಕಿತ್ಸೆಯಿಂದ ಗುಣಪಡಿಸಲಾಗುತ್ತಿದೆ. ಎಳೇ ಮಕ್ಕಳು ಅಡಿನೋಸೈನ್ ಡಿ ಅಮಿನೇಸ್ ಕೊರತೆ (adenosine deaminase deficiency) ಎಂಬ ರೋಗಕ್ಕೆ ತುತ್ತಾಗಿ ಪ್ರಾಣ ಕಳೆದುಕೊಳ್ಳುತ್ತಾರೆ. ಜೀನ್ ಚಿಕಿತ್ಸೆಯೇ ಇದಕ್ಕೆ ಔಷಧ. ಅಂಥ ಮಕ್ಕಳ ದೇಹದಿಂದ ಅವರ ಎಲುಬಿನ ನೆಣದಲ್ಲಿರುವ ೧೦೦೦ ಕೋಟಿ ಜೀವಕೋಶಗಳನ್ನು ತೆಗೆದು ಅವುಗಳಲ್ಲಿರುವ ದೋಷಯುಕ್ತ ಜೀನುಗಳ ಬದಲಾಗಿ



ಡಾ || ಜೇಮ್ಸ್ ಡಿ. ವ್ಯಾಟ್‌ಸನ್ ಮತ್ತು ಡಾ || ಫ್ರಾನ್ಸಿಸ್ ಕ್ರಿಕ್ (ಬಲಕ್ಕೆ) ಜೊತೆ ಜೊತೆಯಾಗಿ ಕೆಲಸ ಮಾಡಿ ಡಿ. ಎನ್. ಎ. ದ ಒಳಗುಟ್ಟು ರಟ್ಟುಮಾಡಿದ ವಂಶವಾಹಿ ತಜ್ಞರು. ಇಬ್ಬರಿಗೂ ನೊಬೆಲ್ ಪಾರಿತೋಷಕ ಸಂದಿದೆ.



▲ (ಚಿತ್ರ. ೪): ಡ್ರೋಸೋಫೈಲ ಎಂಬ ಸೊಣದ ಲಾಲಾರಸದಲ್ಲಿನ ವರ್ಣತಂತುಗಳು. ದೇಹದ ಬಣ್ಣ, ಕಣ್ಣಿನ ಬಣ್ಣ, ಒಣಗಿಹೋದ ರೆಕ್ಕೆಗಳ ಡಿ.ಎನ್.ಎ. ಇರುವ ಸ್ಥಾನಗಳನ್ನು ಗುರುತಿಸಿದ್ದಾರೆ.



▲ (ಚಿತ್ರ. ೩) ಡಿ.ಎನ್.ಎ.ನಲ್ಲಿರುವ ನಾಲ್ಕು ರಾಸಾಯನಿಕ ದ್ರವ್ಯಗಳು (A.T.G.C.)

### ಬೊಕ್ಕತಲೆಯವರಿಗೆ ಶುಭ ಸಮಾಚಾರ

*ಸೌತ್ ಕೆರೊಲೈನಾದ ಗ್ರೀನ್‌ವುಡ್ ಜೆನೆಟಿಕ್ ಸೆಂಟರ್‌ನಲ್ಲಿ ವಿಜ್ಞಾನಿಯಾಗಿ ಕೆಲಸ ಮಾಡುತ್ತಿರುವ ಭಾರತ ಸಂಜಾತ ಆನಂದ ಕೆ. ಶ್ರೀವಾತ್ಸವ ಅವರು ಕೂದಲು, ಹಲ್ಲು, ಬೆವರಿನ ಗ್ರಂಥಿಗಳನ್ನು ದುರ್ಬಲ ಮಾಡುವ ಜೀನ್ ಒಂದನ್ನು ಗುರುತಿಸಿ ಅದರ ವರ್ಣತಂತುವಿನಿಂದ ಬೇರ್ಪಡಿಸಿದ್ದಾರೆ. ಈ ಕಾಯಿಲೆಗೆ EDA ಅವ್ಯವಸ್ಥೆ ಎನ್ನುತ್ತಾರೆ. ಅದು ತಾಯಿಯಿಂದ ಮಕ್ಕಳಿಗೆ ವಂಶವಾಹಿಯ ಮೂಲಕ ಬರುತ್ತದೆ. ಇದು X-ವರ್ಣತಂತುವಿನಲ್ಲಿರುವ ಜೀನ್‌ನಿಂದಾಗುತ್ತದೆ ಎಂದು ಶ್ರೀವಾತ್ಸವ ಅಭಿಪ್ರಾಯಪಟ್ಟಿದ್ದಾರೆ.*

ಆರೋಗ್ಯವಂತ ಜೀನುಗಳನ್ನು ಇಟ್ಟು ಮತ್ತೆ ಆ ಜೀವಕೋಶಗಳನ್ನು ಮಗುವಿನ ದೇಹದೊಳಗೆ ಸೂಜಿಮದ್ದಿನಿಂದ ಇರಿಸಿ ಆ ಮಾರಕ ರೋಗವನ್ನು ಗುಣ ಪಡಿಸಿದ್ದಾರೆ. ಹಾಗೆಯೇ ಕೆನಡಾದಲ್ಲಿ ಸಿಸ್ಟಿಕ್ ಫೈಬ್ರಾಸಿಸ್ (cystic fibrosis) ಎಂಬ ರೋಗಕ್ಕೆ ಕಾರಣವಾದ ದೋಷಯುಕ್ತ ಜೀನನ್ನು ಗುರುತಿಸಿದ್ದಾರಂತೆ. ಮೂತ್ರ ಪಿಂಡದ ರೋಗವಾದ ಪಾಲಿಸ್ಟಿಕ್ ಕಾಯಿಲೆಗೂ ಸಹ ಇದೇ ರೀತಿ ಜೀನ್ ಚಿಕಿತ್ಸೆ ಮಾಡುವ ಸಾಧ್ಯತೆಯನ್ನು ಹುಡುಕುತ್ತಿದ್ದಾರೆ. ಆನುವಂಶಿಕ ಹೃದಯರೋಗಕ್ಕೂ ಒಂದು ದೋಷಯುಕ್ತ ಜೀನೇ ಕಾರಣ ಎಂದು ತಿಳಿದಿದೆ. ಅದನ್ನೀಗ ವಿಜ್ಞಾನಿಗಳು ಗುರುತಿಸಿದ್ದಾರೆ. ಆ ರೋಗವನ್ನು ಜೀನ್ ಚಿಕಿತ್ಸೆಯಿಂದ ಗುಣಪಡಿಸಬಹುದಾದರೆ ಲಕ್ಷಾಂತರ ರೋಗಿಗಳ ಪ್ರಾಣ ಉಳಿಸಿದಂತಾಗುತ್ತದೆ. ಗರ್ಭದಲ್ಲಿರುವ ಶಿಶುವಿನ ಅನೇಕ ದೈಹಿಕ ದೋಷಗಳನ್ನು ಈಗ ಕೋರಿಯನ್ ವಿಲ್ಲಸ್ ಬಯಾಪ್ಸಿ (chorion villus biopsy) ಎಂಬ ಜೀನ್ ತಪಾಸಣೆಯಿಂದ ಕಂಡುಹಿಡಿಯಲು ಸಾಧ್ಯವಾಗಿದೆ. ಅದೂ ಕೂಸು ಗರ್ಭದಲ್ಲಿ ಕೇವಲ ಎಂಟು ವಾರ ಬೆಳೆದಿರುವಾಗಲೇ. ಜೀನ್ ಚಿಕಿತ್ಸೆಯಿಂದ ಅರ್ಬುದ, ದ್ವಂದ್ವ ವ್ಯಕ್ತಿತ್ವ (schizophrenia) ಮೊದಲಾದ ರೋಗಗಳನ್ನು ಗುಣಪಡಿಸಬಹುದೆಂಬ ನಂಬಿಕೆ ಈಗ ಬಲವಾಗುತ್ತಿದೆ. ಅಲ್ಲದೆ ಇದರಿಂದ ಮಲೇರಿಯ ಹಾವಳಿಯನ್ನು ತಡೆಗಟ್ಟಬಹುದಂತೆ (ಚೌಕಗಳನ್ನು ನೋಡಿ).



*ಡಾ॥ ಹರಗೋಬಿಂದ ಖೊರಾನ ಹುಟ್ಟಿದ್ದು ಪಂಜಾಬಿನ ರಾಯಪುರದಲ್ಲಿ ೧೯೨೨ರಲ್ಲಿ. ಇಬ್ಬರು ಸಹೋದ್ಯೋಗಿಗಳೊಡನೆ ಕೆಲಸ ಮಾಡಿ ಪ್ರಪ್ರಥಮವಾಗಿ ಕೃತಕ ಜೀನನ್ನು ತಯಾರು ಮಾಡಿದ ಕೀರ್ತಿ ಇವರದು. ಇವರಿಗೆ ನೊಬೆಲ್ ಪಾರಿತೋಷಕವೂ, ಭಾರತ ಸರಕಾರದ ಪದ್ಮವಿಭೂಷಣ ಸನ್ಮಾನವೂ ದೊರಕಿವೆ.*

ಜೀನ್ ಜ್ಞಾನದಿಂದ ಕೆಟ್ಟದ್ದೂ ಆಗಬಹುದೆಂಬ ಹೆದರಿಕೆಯೂ ಇದೆ. ಈ ಜ್ಞಾನ ಖಾಸಗಿ ಕಂಪೆನಿಗಳ ಸ್ವತ್ತಾದರೆ, ಆ ಜ್ಞಾನದ ಸ್ವಾಮ್ಯ (patent) ವನ್ನು ಅವರು ಪಡೆದು, ಅತಿ ದುಬಾರಿ ಬೆಲೆಗೆ ಅದರ ಉಪಯೋಗ/ಔಷಧವನ್ನು ಮಾರುವುದು ಸಾಮಾನ್ಯವಾಗಬಹುದು. ಆಗ ಅದರಿಂದ ಕೇವಲ ಶ್ರೀಮಂತರಿಗೆ ಅನುಕೂಲವಾಗುತ್ತದೆಯೇ ಹೊರತು ಜನಸಾಮಾನ್ಯರಿಗಲ್ಲ. ಇದಕ್ಕಿಂತಲೂ ಹೆಚ್ಚಾಗಿ, ಜೀನ್ ಜ್ಞಾನದಿಂದ ಉದ್ಭವಿಸಬಹುದಾದ ಅನೇಕ ನೈತಿಕ, ಧಾರ್ಮಿಕ ಪ್ರಶ್ನೆಗಳೂ ಇವೆ. ಅವನ್ನು ಸಮಾಜ ಹೇಗೆ ಎದುರಿಸಬಲ್ಲದು ಎಂಬುದು ಅನೇಕ ವಿಜ್ಞಾನಿಗಳ ತಲೆನೋವಾಗಿದೆ.

ಎಲ್ಲ ರೀತಿಯ ಜ್ಞಾನವೂ ಒಳ್ಳೆಯದು ಕೆಟ್ಟದ್ದು ಎರಡನ್ನೂ ಪ್ರಚೋದಿಸುತ್ತದೆ. ಪರಮಾಣುಶಕ್ತಿಯ ಜ್ಞಾನದ ಹಾಗೆ. ಮಾನವ ಬುದ್ಧಿಗೇಡಿಯಾದರೆ ಅಂಥ ಜ್ಞಾನವನ್ನು ಸಮಾಜವನ್ನು ಹಾಳುಮಾಡುವುದಕ್ಕೆ ಉಪಯೋಗಿಸುತ್ತಾನೆ. ಬುದ್ಧಿವಂತನೂ ನೀತಿವಂತನೂ ಆದರೆ ಎಲ್ಲರ ಕ್ಷೇಮಕ್ಕೆ ಆ ಜ್ಞಾನ ಲಭ್ಯ. ನೊಬೆಲ್ ವಿಜೇತ ಜೇಮ್ಸ್ ವ್ಯಾಟ್ಸನ್ ಅವರು ಈಚೆಗೆ ಭಾರತಕ್ಕೆ ಬಂದಿದ್ದಾಗ ಹೇಳಿದ ಈ ಮಾತು ಗಮನಾರ್ಹ. ಚೆನ್ನೈನಲ್ಲಿ ಅವರು, "ಜೀನ್‌ಗಳು ಅದ್ಭುತ ವಸ್ತುಗಳು. ಅವು ನಮ್ಮ ಹಿತಕ್ಕೋಸ್ಕರವೇ ಕೆಲಸ ಮಾಡುವಂತೆ ನೋಡಿಕೊಳ್ಳೋಣ," ಎಂದು ಹೇಳಿದ ಮಾತುಗಳನ್ನು ಈಗ ಉದ್ಭವಿಸಿರುವ ಪ್ರಶ್ನೆಗೆ ಕೊನೆಯ ಉತ್ತರವಾಗಿ ಮಾಡಿಕೊಳ್ಳೋಣ.

**ಟಿ. ಎಸ್. ಸಂಜೀವರಾವ್**
EWS ೪೩೪, ಕೆ. ಎಚ್. ಬಿ. ಕಾಲೊನಿ, ೨ನೇ ಹಂತ,
೪ನೇ ಮುಖ್ಯರಸ್ತೆ, ಬಸವೇಶ್ವರನಗರ, ಬೆಂಗಳೂರು - ೫೬೦ ೦೭೯

# ಸಂಸ್ಕೃತಿಗಳ ಮುಖಾಮುಖಿ

> *"ಬರೀ ಬಂದೂಕಿನ ಮೂಲಕ ಜನತೆಯನ್ನು ಹತ್ತಿಕ್ಕುವುದಕ್ಕಿಂತ, ಸುಲಭವಾಗಿ ಅರ್ಥವಾಗದ ಭಾಷೆಯ ಮೂಲಕ ಜನಸಾಮಾನ್ಯರ ಜಂಘಾಬಲವನ್ನೇ ಉಡುಗಿಸಲಾಗುತ್ತಿದೆ. ಜನಭಾಷೆಯ ವಿನಾ ಜನತಾ ಸ್ವರಾಜ್ಯ ಸಾಧ್ಯವೇ ಇಲ್ಲ." – ಲೋಹಿಯಾ (ಸಂಪುಟ ೧, ಪು. ೧೭೬)*

ಜನಸಮುದಾಯಗಳು ಬದುಕುತ್ತಿರುವ ಬಗೆಯೇ ಸಂಸ್ಕೃತಿ; ಕಾಲ-ದೇಶಗಳ ಅನಂತಯಾನದಲ್ಲಿ ಕಣ್ಣು ಮುಚ್ಚಿದ ಅಥವಾ ಮುಚ್ಚಲಿರುವ ಜೀವನವೇ ನಾಗರಿಕತೆ. ಉದಾ: ನದಿ ದಂಡೆಯ ನಾಗರಿಕತೆಗಳು, ನಗರ ನಾಗರಿಕತೆಗಳು. ಸಂಸ್ಕೃತಿ ಸರ್ಪವು ಬೇರೆ ಬೇರೆ ಕಾಲ - ದೇಶದ ಆಯಾಮಗಳಲ್ಲಿ ಕಳಚಿದ - ಕಳಚುತ್ತಿರುವ - ಕಳಚಲಿರುವ ಪೊರೆಗಳೇ 'ನಾಗರಿಕತೆ'ಗಳೆಂದು ತಿಳಿಯುವುದು ಸರಿಯಾದೀತು. ಈ ದೃಷ್ಟಿಯಿಂದ 'ಸಂಸ್ಕೃತಿ' ಮತ್ತು 'ನಾಗರಿಕತೆ' ವಿಭಿನ್ನ ಪರಿಭಾಷೆಗಳು.

ಮೂರು ಹುರಿಗಳು ಒಗ್ಗೂಡಿ ಬಲವಾದ ಹಗ್ಗವಾಗುವಂತೆ ಬದುಕು : ಭಾಷೆ : ಸಾಹಿತ್ಯಗಳ ನಡುವೆ ಬೇರ್ಪಡಿಸಲಾಗದ ಮುಪ್ಪುರಿ ಬಂಧವಿದೆ. ಈ ಮೂರನ್ನು ಪ್ರತ್ಯೇಕಿಸಿ, ಬಿಡಿ ಬಿಡಿಯನ್ನಾಗಿ ಮಾಡುವ ಅಧ್ಯಯನಗಳು ದುರ್ಬಲ ಮಾತ್ರವಲ್ಲ, ಸತ್ಯದಿಂದ ದೂರ ಸಿಡಿದ ಸುಳ್ಳು ಸೃಷ್ಟಿಗಳಾಗಿವೆ. ಬದುಕು : ಭಾಷೆ : ಸಾಹಿತ್ಯಗಳ ಮುಪ್ಪುರಿ ಬಂಧದಲ್ಲೆ 'ಸಂಸ್ಕೃತಿಗಳ ಮುಖಾಮುಖಿ'ಯನ್ನು ಗ್ರಹಿಸಬೇಕಾಗಿದೆ. ಕಳೆದ ಶತಮಾನದ ಆರಂಭದಲ್ಲಿ ಬದುಕು : ಭಾಷೆ : ಸಾಹಿತ್ಯಗಳನ್ನು 'ಲಿಖಿತ ಪರಂಪರೆ'ಯಲ್ಲಿ (Written Tradition) ವಿಶೇಷವಾಗಿ ಗುರುತಿಸಲಾಗಿದೆ. ಆದರೆ ಈ ತ್ರಿವಳಿಯನ್ನು 'ಅಲಿಖಿತ ಪರಂಪರೆ'ಯಲ್ಲಿಯೂ (Oral tradition) ಗುರುತಿಸಬೇಕೆಂಬ ದೃಷ್ಟಿ ಮುನ್ನೆಲೆಗೆ ಬಾರದೆ ಹಿನ್ನೆಲೆಯಲ್ಲೇ ಉಳಿದುಬಿಟ್ಟಿದೆ. ವಿದ್ವಾಂಸರೆನಿಸಿಕೊಂಡವರು 'ಗ್ರಂಥ'ದಿಂದ 'ನಿರ್‌ಗ್ರಂಥ'ದೆಡೆಗೆ ಸ್ಥಿತ್ಯಂತರಗೊಳ್ಳುವ ಪ್ರಕ್ರಿಯೆ ಬದುಕು : ಭಾಷೆ : ಸಾಹಿತ್ಯಗಳಲ್ಲಿ ಒಟ್ಟೊಟ್ಟಿಗೆ ಸಂಭವಿಸಬೇಕಾಗಿದೆ. ಮೇಲುಮೇಲಕ್ಕೇರುತ್ತಾ ನೆಲದ ನನ್ನಿಗಳಿಂದ ದೂರ ಸರಿಯುವ 'ಗ್ರಾಂಥಿಕ' ಸಂಸ್ಕೃತಿಯ ಪರಿಮಿತಿಗಳನ್ನು ಮೀರಲು, 'ನಿರ್ ಗ್ರಾಂಥಿಕ'ವೆನ್ನಬಹುದಾದ ತಳ ಸಂಸ್ಕೃತಿಗಳ ಧಾತು ಮತ್ತು ಧೋರಣೆಗಳನ್ನು ಒಳಗೊಳ್ಳಲು – ಇಂಥ ಅನುಸಂಧಾನಗಳು ಆರೋಪಿತವಾಗದೆ ಸಹಜವಾಗಿರಬೇಕಾಗುತ್ತದೆ.

ಭಾಷೆಗಿರುವ 'ಸ್ಥಾನಬಲ' ಬದುಕು ಮತ್ತು ಸಾಹಿತ್ಯಗಳನ್ನು ಕೂಡ ಮೇಲೆತ್ತಿಬಿಡುತ್ತದೆ. ಇದಕ್ಕೆ ಇಂಗ್ಲಿಷ್ ಉತ್ತಮ ನಿದರ್ಶನ. ಇಂಗ್ಲಿಷ್‌ಗಿರುವ ಸ್ಥಾನಬಲ ಕನ್ನಡಕ್ಕಿಲ್ಲ. 'ರವಿ ಮುಳಗದ ಸಾಮ್ರಾಜ್ಯ'ವನ್ನು ಸೃಷ್ಟಿ ಮಾಡಿದ ಬ್ರಿಟಿಷರಿಂದಾಗಿಯೇ ಇಂಗ್ಲಿಷ್‌ಗೆ ಇಂಥ 'ಸ್ಥಾನಬಲ' ಪ್ರಾಪ್ತಿಯಾಗಿದೆ. ಒಂದು ವೇಳೆ ಕನ್ನಡಿಗರೇನಾದರೂ 'ರವಿ ಮುಳುಗದ ಸಾಮ್ರಾಜ್ಯ'ವನ್ನು ಸೃಷ್ಟಿ ಮಾಡಿದ್ದಿದ್ದರೆ, ಇಂದು ಇಂಗ್ಲಿಷ್‌ಗಿರುವ ಸ್ಥಾನಬಲ ಕನ್ನಡಕ್ಕೆ ಲಭ್ಯವಿರುತ್ತಿತ್ತೆಂಬ ಊಹೆ ಚರಿತ್ರೆಯ ಶಕ್ತಿಗಳಿಗಿರುವ ನೈಜತೆಯನ್ನು ಗ್ರಹಿಸಲು ನೆರವಾಗಬಹುದು. ಆದ್ದರಿಂದಲೇ ವಿಜ್ಞಾನ - ವೈದ್ಯಕೀಯ - ಇಂಜಿನಿಯರಿಂಗ್ - ತಂತ್ರಜ್ಞಾನ - ಕಾನೂನು - ಆಡಳಿತ - ವಿದ್ಯುನ್ಮಾನ - ಬಾಹ್ಯಾಕಾಶ ಮುಂತಾದ ಕ್ಷೇತ್ರಗಳಲ್ಲಿ ಕನ್ನಡಕ್ಕೆ ಮಾತನಾಡುವ 'ಸಾಮರ್ಥ್ಯ' ಇಲ್ಲವೆನ್ನಲಾಗದು. ಈ ದೃಷ್ಟಿಯಿಂದ ಯೋಗಿ ವೇಮನ ಪದ್ಯವೊಂದನ್ನಿಲ್ಲಿ ಉದಾಹರಿಸಬಹುದು :

ನೀರಲ್ಲಿರುವಾಗ ಮೊಸಳೆ, ನಿಮಿರಿ ಆನೆಯನ್ನೆ
ಹಿಡಿವುದು.
ಅದೇ ದಡದಲ್ಲಿರಲು, ನಾಯಿಗೆ ಹೆದರಿ ಓಡುವುದು.
ಸ್ಥಾನಬಲವೇ ಹೊರತು, ಇದರಲ್ಲಿ ತನ್ನ
ಬಲವೇನೂ ಇಲ್ಲ,
ವಿಶ್ವದಾಭಿರಾಮ, ಕೇಳಯ್ಯ ವೇಮ.

ಪ್ರಪಂಚ ಭೂಪಟದಲ್ಲಿ ಪುಟ್ಟದಾದ ಇಂಗ್ಲೆಂಡ್ ಮೊಸಳೆಯಂತಿದ್ದರೆ, ಉಪಖಂಡವೆಂದು ಹೆಸರಾದ ಭಾರತವು ಗಜೇಂದ್ರನೇ ಸರಿ ! ಮೊಸಳೆಯು ಜಲಮಾರ್ಗದಿಂದಾಗಿ ಗಜೇಂದ್ರನನ್ನು ಹಿಡಿದು ಹಾಕಿದ್ದು; ಸ್ವಾತಂತ್ರ್ಯ ಚಕ್ರ ಪ್ರಯೋಗದಿಂದ 'ಗಜೇಂದ್ರಮೋಕ್ಷ'ವಾದದ್ದು ಇಂದಿಗೆ ಇತಿಹಾಸ. ಆದರೆ ಮೊಸಳೆಯ ಹಲ್ಲುಗಳ ನಂಜು-ಗಾಯ ಇನ್ನೂ ವಾಸಿಯಾಗಿಲ್ಲ. ಆದ್ದರಿಂದಲೇ ನಾವಿಂದು (ಕರ್ನಾಟಕದ ಮಟ್ಟಿಗೆ) ಕನ್ನಡ ಸಂಸ್ಕೃತಿಯ ಶಿಬಿರ, ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಕನ್ನಡ ಚಳವಳಿಗಳು ಇತ್ಯಾದಿ ಚಿಕಿತ್ಸೆಯ ದಾರಿಯನ್ನು ಹಿಡಿಯಬೇಕಾಗಿದೆ. ದಿನೇ ದಿನೇ ಹೆಚ್ಚುತ್ತಿರುವ ಇಂಗ್ಲಿಷ್ ವ್ಯಾಮೋಹ ಕನ್ನಡ ಸಂಸ್ಕೃತಿಗೆ ಅಪಾಯಕಾರಿಯಾಗಿದೆ. ಕರ್ನಾಟಕದ ಸಚಿವಾಲಯ ಮತ್ತು ನ್ಯಾಯಾಲಯಗಳಲ್ಲಿ ಕನ್ನಡವು ಸಂಪೂರ್ಣವಾಗಿ ಅನುಷ್ಠಾನಗೊಳ್ಳಬೇಕು. ಭಾಷಾ ಪ್ರತಿಷ್ಠಾಪನೆ ಮೊದಲು ; ಭಾಷಾ ಪರಿಪಕ್ವತೆ ನಂತರದ್ದು – ಈ ಸಹಜ ಪ್ರಕ್ರಿಯೆಯನ್ನು ನಮ್ಮ ದೇಶದಲ್ಲಿ ತಿರುವು ಮುರುವು ಮಾಡಲಾಗಿದೆಯೆಂಬ ಲೋಹಿಯಾ ಅಭಿಪ್ರಾಯವನ್ನಿಲ್ಲಿ ಸ್ಮರಿಸಿಕೊಳ್ಳಬೇಕಾಗಿದೆ. ಸೂರ್ಯೋದಯದ ಅನುಷ್ಠಾನದಿಂದ ಕತ್ತಲೆ ಕಳೆದು ಬೆಳಗಾಗುವಂತೆಯೇ ಪ್ರಭುತ್ವದ ಎಲ್ಲ ನೆಲೆಗಳಲ್ಲಿ ಕನ್ನಡವು ಮೊದಲಿಗೆ ಅನುಷ್ಠಾನಗೊಳ್ಳಬೇಕು. ಆಗ ತಾನೇ ತಾನಾಗಿ ಪರಭಾಷಾ ಮೋಹವೆಂಬ ಅಂಧಕಾರವು ತೊಲಗಿ ಎಲ್ಲರ ಮನೆ - ಮನಗಳಲ್ಲಿ ಕನ್ನಡವು ಬೆಳಗಲಾರಂಭಿಸುತ್ತದೆ. ಹೀಗೆ ಕನ್ನಡವನ್ನು ಅನುಷ್ಠಾನಗೊಳಿಸದೆ ಎಲ್ಲರ ಮನೆ - ಮನಗಳಲ್ಲಿ ಕನ್ನಡವನ್ನು ಬಯಸುವುದು ನಡುರಾತ್ರಿಯಲ್ಲಿ ಸೂರ್ಯನನ್ನು ಬಯಸುವಷ್ಟೆ ಹುಂಬತನವಾಗುತ್ತದೆ.

ಎಲ್ಲಕ್ಕಿಂತ ಮುಖ್ಯವಾಗಿ ಕನ್ನಡವನ್ನು ಕನ್ನಡೀಕರಣದತ್ತ; ಆಧುನೀಕರಣದತ್ತ ಕರೆತರಬೇಕು. ಆದರೆ ನಾವಿಂದು ಪ್ರಭುತ್ವದ ಹಂತದಲ್ಲಿ ಅಲ್ಪಸ್ವಲ್ಪ ಪ್ರಮಾಣದಲ್ಲಿ ಕನ್ನಡವನ್ನು ಅನುಷ್ಠಾನಗೊಳಿಸುವಾಗಲೂ ಸಂಸ್ಕೃತೀಕರಣದತ್ತ, ಅಲಂಕಾರೀಕರಣದತ್ತ ಒಯ್ಯುತ್ತಿರುವುದೊಂದು ಕಪಟ ನಾಟಕವಾಗಿದೆ. ಇದು ಶವ ಸಾಧನೆ ಮತ್ತು ಶವ ಶೃಂಗಾರವೇ ಸರಿ ! ಸಂಸ್ಕೃತೀಕರಣವೆಂದರೆ ಜನಬಳಕೆಯಲ್ಲಿರುವ ಜನಪ್ರಿಯ ಇಂಗ್ಲಿಷ್ ಶಬ್ದಗಳಿಗೆ ಬದಲಾಗಿ ಮೃತ ಭಾಷೆಯಾಗಿರುವ ಸಂಸ್ಕೃತ ಪದಕೋಶದಿಂದಾಯ್ದ ಪದಗಳನ್ನು ಆಡಳಿತಾತ್ಮಕವಾಗಿ ಜಾರಿಗೆ ತರುವುದು. ಉದಾ : ಆರಕ್ಷಕ, ವೃತ್ತ ನಿರೀಕ್ಷಕ, ಅಭಿಯಂತರ, ಅಧೀಕ್ಷಕ, ನಿರ್ವಾಹಕ, ಚಾಲಕ, ನಿಯಂತ್ರಕ, ನಿರ್ದೇಶಕ, ಪ್ರಾಚಾರ್ಯ, ವಿದ್ಯಾಲಯ ಇತ್ಯಾದಿ. ಅಲಂಕಾರೀಕರಣವೆಂದರೆ ಅನುವಾದ ಸಂದರ್ಭದಲ್ಲಿ ಜನಗಳ ನಾಲಗೆಯ ಮೇಲೆ ನಲಿದಾಡುವ ಜನಪ್ರಿಯ ಇಂಗ್ಲಿಷ್ ಶಬ್ದಗಳ ಸ್ಥಾನದಲ್ಲಿ ಕಾವ್ಯಾತ್ಮಕ ದೃಷ್ಟಿಯ ವಿವರಣೆಗಳೆನ್ನಬಹುದಾದ ಅದೇ 'ಸತ್ತ' ಸಂಸ್ಕೃತ ಪದಗಳಿಗೆ ಮರುಹುಟ್ಟು ನೀಡುವುದು. ಉದಾ : ರೇಡಿಯೊ > ಆಕಾಶವಾಣಿ, ಟಿವಿ > ದೂರದರ್ಶನ, ಚಾನೆಲ್ > ವಾಹಿನಿ, ಕ್ಯಾಸೆಟ್ > ಧ್ವನಿಸುರುಳಿ - ದೃಶ್ಯಸುರುಳಿ, ಕಂಪ್ಯೂಟರ್ > ಗಣಕಯಂತ್ರ, ಸೆಟಲೈಟ್ > ಉಪಗ್ರಹ, ಮಿಸೈಲ್ > ಕ್ಷಿಪಣಿ ಇತ್ಯಾದಿ. ಈ ಬಗೆಯ ಶವಸಾಧನೆ ಮತ್ತು ಶವ ಶೃಂಗಾರಗಳಿಗೆ ಬದಲಾಗಿ 'ಜನವೇ ಜಯ' ಎಂಬಂತೆ ಇಂಗ್ಲಿಷ್ ಶಬ್ದಗಳನ್ನೆ ಜನ ಹೇಗೆ ಬಳಸುತ್ತಿದ್ದಾರೋ ಹಾಗೆಯೇ ಪ್ರಭುತ್ವದ ಎಲ್ಲ ಹಂತಗಳಲ್ಲಿ ಬಳಸುವುದೇ ಕನ್ನಡೀಕರಣ ಮತ್ತು ಆಧುನೀಕರಣ ಪ್ರಕ್ರಿಯೆ ಎನಿಸಿಕೊಳ್ಳುತ್ತದೆ. ಉದಾ : ಪೊಲೀಸು, ಇನ್‌ಸ್ಪೆಕ್ಟರು, ಇಂಜಿನಿಯರು, ಸೂಪರಿಂಟೆಂಡೆಂಟು, ಕಂಡಕ್ಟರು, ಡ್ರೈವರು, ಕಂಟ್ರೋಲರು, ಡೈರೆಕ್ಟರು, ಪ್ರಿನ್ಸಿಪಾಲರು, ಕಾಲೇಜು, ರೇಡಿಯೋ, ಟಿವಿ, ಚಾನೆಲ್ಲು, ಕ್ಯಾಸೆಟ್ಟು, ಕಂಪ್ಯೂಟರು, ಸೆಟಲೈಟು, ಮಿಸೈಲು ಇತ್ಯಾದಿ. ಇಲ್ಲಿ ಗಮನಿಸಬೇಕಾದ ವಿಚಾರವೆಂದರೆ ಜನಬಳಕೆಯ ಏಕೈಕ ಮಾನದಂಡವನ್ನು ಆಧರಿಸಿ ಇವನ್ನೆಲ್ಲ ಅಚ್ಚಗನ್ನಡ ಶಬ್ದಗಳೆಂದೇ ಪರಿಗಣಿಸಿ ಪ್ರಭುತ್ವದ ಅಧಿಕೃತ ಮುದ್ರೆಯನ್ನು ಒತ್ತಬೇಕು. ಹೀಗೆ ಮಾಡದಿದ್ದರೆ ಕನ್ನಡಕ್ಕೆ ಗತಿಮತಿಯಿಲ್ಲ.

ಈ ದೃಷ್ಟಿಯಿಂದ ಕುವೆಂಪು ಅವರ ಸಾಯುತಿದೆ ನಿಮ್ಮ ನುಡಿ, ಓ ಕನ್ನಡದ ಕಂದರಿರ ! – ಎಂಬ ಕವನವನ್ನಿಲ್ಲಿ ಸ್ಮರಿಸಬಹುದು..... ರಾಜನುಡಿ (ಇಂಗ್ಲಿಷ್). ರಾಷ್ಟ್ರ ನುಡಿ (ಹಿಂದಿ), ದೇವನುಡಿಗಳ (ಸಂಸ್ಕೃತ) ಭರಾಟೆಯಲ್ಲಿ ತಾಯಿನುಡಿಯೇ (= ಕನ್ನಡ) ನಲುಗಿಹೋಗುತ್ತಿರುವ ಚಿತ್ರಣ ಈ ಕವನದಲ್ಲಿದೆ. ಭಾಷೆಗಿರುವ 'ಸ್ಥಾನಬಲ' ಬದುಕು : ಸಾಹಿತ್ಯಗಳನ್ನು ಕೂಡ ಮೇಲೆತ್ತಿ

ವಿ. ಚಂದ್ರಶೇಖರ ನಂಗಲಿ

ಬಲ್ಲುದೆಂಬುದನ್ನು ಕುವೆಂಪು ಸ್ಪಷ್ಟವಾಗಿ ಸಾರಿದ್ದಾರೆ :

''ನಿಮ್ಮ ನುಡಿ ನಿಮ್ಮ ಗಂಡಸುತನಕೆ ಹಿರಿ ಸಾಕ್ಷಿ
ಗೆಲವಿದ್ದರದಕೆ ನಿಮಗಿಹುದು ಶಕ್ತಿ
ನುಡಿ ಮಡಿದರೆಲ್ಲರೂ ಮೂಕ ಜಂತುಗಳಂತೆ
ಬಾಲವಲ್ಲಾಡಿಪುದೇ ಪರಮಭಕ್ತಿ''

ಕನ್ನಡ ಭಾಷೆ ತ್ರಿಶಂಕುವಿದ್ದಂತೆ ! ಇಂಗ್ಲಿಷ್ ಮತ್ತು ಹಿಂದಿ (= ಸಂಸ್ಕೃತ)ಗಳ ನಡುವೆ ಕನ್ನಡಿಗರ ಬದುಕು ತ್ರಿಶಂಕುವೇ ಆಗಿಬಿಟ್ಟಿದೆ. ಈ ತ್ರಿಶಂಕುವಿಗೆ ಇದ್ದ ಒಂದು ಆಸೆಯೆಂದರೆ ಸಶರೀರವಾಗಿ ಸ್ವರ್ಗ ಸೇರುವುದು. ಇದಕ್ಕಾಗಿ ಯಜ್ಞವೊಂದನ್ನು ಮಾಡಬೇಕಾಗಿರುತ್ತದೆ. ಆದರೆ ತ್ರಿಶಂಕುವನ್ನು 'ಯಜಮಾನ'ನನ್ನಾಗಿ ಮಾಡಿ ಯಜ್ಞ ನೆರವೇರಿಸಲು ಪ್ರತಿಷ್ಠಿತ ಶಕ್ತಿಗಳು ಒಪ್ಪುವುದಿಲ್ಲ. ಆಗ ವಿಶ್ವಾಮಿತ್ರ ಮುಂದೆ ಬರುತ್ತಾನೆ. ಜಾತಿ - ಮತ ಧರ್ಮ - ಕಟ್ಟು ಕಟ್ಟಳೆಗಳ ಬಂಧನವಿಲ್ಲದ ವಿಶ್ವಾಮಿತ್ರನು ತ್ರಿಶಂಕುವನ್ನು 'ಚಂಡಾಲ'ನೆಂದು ಹೀಗಳೆಯದೆ 'ಯಜಮಾನ'ನನ್ನಾಗಿ ಮಾಡಿ ಸಶರೀರನಾಗಿ ಸ್ವರ್ಗ ಸೇರಿಕೊಳ್ಳುವಂತೆ ಆಜ್ಞಾಪಿಸುತ್ತಾನೆ. ಆದರೆ ಸ್ವರ್ಗದಲ್ಲಿ ಅವನಿಗೆ ಪ್ರವೇಶ ಸಿಗುವುದಿಲ್ಲ. ಇಂದ್ರನಾಳುವ ಸ್ವರ್ಗ ಸೀಮೆ ಇಂಗ್ಲಿಷ್ ಇದ್ದಂತೆ. ಈ ಸ್ವರ್ಗ ಸೀಮೆಯಲ್ಲಿ ಕನ್ನಡ ತ್ರಿಶಂಕುವಿಗೆ ಎಡೆಯೆಲ್ಲಿ? ಅವನನ್ನು ಸ್ವರ್ಗದೊಳಗೆ ಬಿಟ್ಟುಕೊಳ್ಳದೆ ಕತ್ತು ಹಿಡಿದು ನೂಕಿಬಿಡುತ್ತಾರೆ. 'ರಕ್ಷಿಸು' ಎಂದು ಆರ್ತನಾದ ಮಾಡುತ್ತಾ ಕೆಳಕ್ಕೆ ಬೀಳುತ್ತಿದ್ದ ತ್ರಿಶಂಕುವಿಗಾಗಿ ವಿಶ್ವಾಮಿತ್ರನು 'ಪ್ರತಿಸ್ವರ್ಗ'ವನ್ನೆ ತನ್ನ ತಪಃಶಕ್ತಿಯಿಂದ ನಿರ್ಮಾಣ ಮಾಡುತ್ತಾನೆ. ಇಂದ್ರನ ಸ್ವರ್ಗವನ್ನೆ ನಾಚಿಸುವಂತಿದ್ದ 'ಪ್ರತಿಸ್ವರ್ಗ'ದಲ್ಲಿ ತ್ರಿಶಂಕು ಇಂದ್ರನಂತೆಯೇ 'ಸಮಾನದೇಹಿ'ಯಾಗಿ ವಿರಾಜಿಸುತ್ತಾನೆ. ಇಂದು ಕನ್ನಡವು ಇಂಗ್ಲಿಷ್‌ಗೆ ಸಮಾನ ದೇಹಿಯಾಗಿ ಸ್ಥಿತ್ಯಂತರಗೊಳ್ಳಬೇಕಾಗಿದೆ.

೨

Monopoly, Hegemony, Mono-culture, Patent, World Trade, M.N.C, cloning, Genome – ಇವೆಲ್ಲ ''ದೇವನೊಬ್ಬ ನಾಮ ಹಲವು'' ಇದ್ದಂತೆ. ಇಪ್ಪತ್ತೊಂದನೆಯ ಶತಮಾನದ ಸಾಮ್ರಾಜ್ಯಶಾಹಿಯ ಬೇರೆ ಬೇರೆ ಮುಖಗಳು ಮತ್ತು ಬೇರೆ ಬೇರೆ ಅವತಾರಗಳಿವು. ವಿಶ್ವ ಆರ್ಥಿಕ ಏಕಸ್ವಾಮ್ಯ ಮತ್ತು ವಿಶ್ವ ರಾಜಕೀಯ ಏಕಸ್ವಾಮ್ಯ – ಇವು ಒಂದೇ ನಾಣ್ಯದ ಎರಡು ಮುಖಗಳು. ಇದು ಆಚರಣೆಗೆ – ಚಲಾವಣೆಗೆ ಸಲ್ಲುವ ಮೂರು ನೆಲೆಗಳಿವು : ೧) ಭಾಷೆ ೨) ಬೀಜ ೩) ಬುದ್ಧಿ. ಭಾಷಾ ಏಕಸ್ವಾಮ್ಯ ಮನಸ್ಸುಗಳ ದಬ್ಬಾಳಿಕೆಗೂ, ಬೀಜ ಏಕಸ್ವಾಮ್ಯ ದೇಹಗಳ ಯಜಮಾನಿಕೆಗೂ, ಬುದ್ಧಿಯ ಏಕಸ್ವಾಮ್ಯ ಸಂಸ್ಕೃತಿಗಳ ಆಧಿಪತ್ಯಕ್ಕೂ ಕಾರಣವಾಗುತ್ತದೆ. ಆದ್ದರಿಂದಲೇ ಪ್ರಜ್ಞಾವಂತರನೇಕರು ಭಾಷೆಯ ಅವಸಾನವೆಂದರೆ ಸಂಸ್ಕೃತಿಯ ಅವಸಾನವೆಂದೇ ಹೇಳುತ್ತಿರುವುದು... ಭಾರತದ ಸಂದರ್ಭದಲ್ಲಿ ಸ್ಥಳೀಯ ಸಂಸ್ಕೃತಿಗಳು ಪ್ರಭುತ್ವದ ಅಧಿಕೃತ ಮುದ್ರೆಗಾಗಿ ತಂತಮ್ಮ ಭಾಷೆಗಳನ್ನು ಅಣಿಗೊಳಿಸುವ ಶಿಕ್ಷಣ - ಸಂಘಟನೆ - ಹೋರಾಟದ ಮಾರ್ಗಕ್ಕೆ ಇಳಿಯಲೇಬೇಕಾಗಿದೆ.... ''ಬಹುರೂಪಿ ಸಂಸ್ಕೃತಿಗಳನ್ನು ಸಮರ್ಥಿಸುವುದೆಂದರೆ ಅವುಗಳ ಶ್ರೇಣೀಕರಣಗಳನ್ನು ಸಮರ್ಥಿಸಿದಂತೆಯೇ'' – ಎಂಬ ಅಭಿಪ್ರಾಯವೊಂದಿದೆ (= ಡಾ|| ಬಿ. ಎಂ. ಪುಟ್ಟಯ್ಯ : ಕಾಲ್ಗಡಿಗೆ). ಸಂಸ್ಕೃತಿಯ ಬಹುತ್ವ (plurality of culture) ಮತ್ತು ಸಾಮಾಜಿಕ ಶ್ರೇಣೀಕರಣ (=ಜನ್ಮಾಧಾರಿತ ಅಸಮಾನತೆ)ಗಳನ್ನು ವ್ಯಾಖ್ಯಾನಿಸುತ್ತಾ ಪರಸ್ಪರಾವಲಂಬನೆಯ ತತ್ವವೆಂದು ತಿಳಿಯಬಾರದು. ಮಾನವಕುಲದ ಅಡ್ಡಗೋಡೆಯೆನ್ನಬಹುದಾದ 'ಸಾಮಾಜಿಕ ಶ್ರೇಣೀಕರಣ'ವನ್ನು ವಿರೋಧಿಸುತ್ತಲೇ, ಜಾಗತಿಕ ಸಂಸ್ಕೃತಿಯ ಏಕರೂಪಾತ್ಮಕ ಮಾದರಿಗಳನ್ನು ಛಿದ್ರಿಸುವುದಕ್ಕಾಗಿ ಬಹುರೂಪಿಯಾದ ಸ್ಥಳೀಯ ಸಂಸ್ಕೃತಿಗಳನ್ನು ಬೆಂಬಲಿಸಬೇಕಾಗುತ್ತದೆ. ಈ ಸೂಕ್ಷ್ಮವನ್ನರಿಯದೆ ಬಹುರೂಪಿ ನೆಲೆ ಮತ್ತು ಶ್ರೇಣೀಕರಣದ ನೆಲೆಗಳನ್ನು ಸುಲಭ ಸಮೀಕರಣ ಮಾಡುವುದು ಸರಿಯಲ್ಲ.

ಇದೇ ಸಂದರ್ಭದಲ್ಲಿ 'ದೇಸಿ ಚಿಂತನೆಗಳು' ಅಡ್ಡ ಹಾದಿ ಹಿಡಿಯಬಾರದೆಂಬುದನ್ನು ಒತ್ತಿ ಹೇಳಬೇಕಾಗಿದೆ :

೧) ಪುನರುತ್ಥಾನವಾದ - Revivalism
೨) ಮೂಲಭೂತವಾದ - Fundamentalism
೩) ಪ್ರತ್ಯೇಕತಾವಾದ - Privatism

ಇವು ಮೂರು ದಾರಿಯಾಗಿ ಕೂಡಿಕೊಳ್ಳುವ ಅನಿಷ್ಟ ಸಂಪ್ರದಾಯಗಳನ್ನು ಕಿತ್ತೊಗೆಯಬೇಕಾಗಿದೆ. ದೇಸಿ ಚಿಂತನೆಗಳಿಂದ ನಾವು ಪಡೆಯಬೇಕಾದ್ದು ೧) ಬಹುತ್ವ ೨) ನವತ್ವ ೩) ಅನಂತ್ಯದ ಗ್ರಹಿಕೆಗಳು. ಇವೇ ಜೀವಂತಿಕೆಯುಳ್ಳ ಸಂಸ್ಕೃತಿಯ ಮೂರು ಮುಖಗಳು.

ಇಪ್ಪತ್ತನೆಯ ಶತಮಾನವನ್ನು 'ವಿಮರ್ಶೆಯ ಯುಗ' ಎಂದು ಕರೆಯುವುದುಂಟು.... ಈ ವಿಮರ್ಶಾ ಬುದ್ಧಿ ಮತ್ತು ವಿಶ್ಲೇಷಣಾ ಮನೋಧರ್ಮಗಳಿಂದಾಗಿಯೇ ಮನುಷ್ಯನ ಒಂದೊಂದು ಅಂಗಕ್ಕೆ ಒಬ್ಬೊಬ್ಬ 'ಸ್ಪೆಶಲಿಸ್ಟ್' ಇಂದು ಮಾರುಕಟ್ಟೆಯಲ್ಲಿ ಲಭ್ಯವಿದ್ದಾನೆ. ಮನುಷ್ಯನೆಂದರೆ ಇಡಿಯಾದ ಶರೀರವೆಂಬ ದೃಷ್ಟಿ ಹಿಂದೆ ಸರಿದು ಕಣ್ಣು - ಕಿವಿ - ಮೂಗು - ಗಂಟಲು - ಮೂಳೆ - ಹೃದಯ -

## ಮುಂಬೈನಲ್ಲಿ ಪುಸ್ತಕ ಪ್ರದರ್ಶನ




ಕಳೆದ ತಿಂಗಳು ನ್ಯಾಷನಲ್ ಬುಕ್ ಟ್ರಸ್ಟ್ ಸಂಸ್ಥೆ ಮುಂಬೈನಲ್ಲಿ ಅಖಿಲ ಭಾರತ ಮಟ್ಟದ ಬೃಹತ್ ಪುಸ್ತಕ ಪ್ರದರ್ಶನಕ್ಕೆ ಏರ್ಪಾಟು ಮಾಡಿತ್ತು. ಒಂಭತ್ತು ದಿನಗಳ ಕಾಲ ನಡೆದ ಪ್ರದರ್ಶನದಲ್ಲಿ ನವಕರ್ನಾಟಕ ಪ್ರಕಾಶನ ಕರ್ನಾಟಕವನ್ನು, ಕನ್ನಡ ಪುಸ್ತಕ ಜಗತ್ತನ್ನು ಪ್ರತಿನಿಧಿಸಿದ ಏಕೈಕ ಸಂಸ್ಥೆಯಾಗಿತ್ತು. ನವಕರ್ನಾಟಕದ ಪ್ರಕಟಣೆಗಳ ಜೊತೆಗೆ ಕನ್ನಡದ ಹಲವು ಪ್ರತಿಷ್ಠಿತ ಪ್ರಕಾಶಕರ ಪುಸ್ತಕಗಳು ಪ್ರದರ್ಶನದಲ್ಲಿ ಲಭ್ಯವಿದ್ದವು. ಕನ್ನಡ ಪುಸ್ತಕಗಳ ಪ್ರದರ್ಶನದ ಬಗ್ಗೆ ಮುಂಬೈನಿಂದ ಪ್ರಕಟವಾಗುವ ಕನ್ನಡ ಪತ್ರಿಕೆಗಳು ಉತ್ಸಾಹದಿಂದ ಬರೆದವು. ಪ್ರದರ್ಶನ ನಡೆದಷ್ಟು ಕಾಲವೂ ಪುಸ್ತಕಾಸಕ್ತ ಮುಂಬೈ ಕನ್ನಡಿಗರು ಪ್ರದರ್ಶನ ಮಳಿಗೆಯಲ್ಲಿ ಕಿಕ್ಕಿರಿದು ತಮ್ಮ ಕನ್ನಡ ಪ್ರೇಮವನ್ನು ಮೆರೆದರು. ಪ್ರಾರಂಭದಲ್ಲಿ ಮಳೆಯಿಂದ ಹಾನಿಯುಂಟಾದರೂ ಮುಂದೆ ಪ್ರೋತ್ಸಾಹದಾಯಕವಾಗಿತ್ತು.

ಮೂತ್ರಪಿಂಡ ಎಂಬಂತೆ ಬಿಡಿ - ಬಿಡಿಯಾಗಿ ಅಂಗಗಳನ್ನು ಪರೀಕ್ಷಿಸುವ 'ಪರಿಣತರು' ವಿಶೇಷವಾಗಿ ನಗರ ಪ್ರದೇಶಗಳಲ್ಲೇ ಅದರಲ್ಲೂ ಉಳ್ಳವರಿಗಾಗಿಯೇ ಏಕೆ ಮೀಸಲಾಗಿದ್ದಾರೆ ? ಜ್ಞಾನವು ವಿಜ್ಞಾನವೆನಿಸಿಕೊಳ್ಳುವುದು ಯಾವಾಗ ?

ಶಾಸ್ತ್ರ : Discipline > ಸ್ಥಾವರ

ಅರಿವು : Process > ಜಂಗಮ

ಜ್ಞಾನವು ಶಾಸ್ತ್ರವಾಗುತ್ತಾ ಸಾಂಸ್ಥಿಕ ನೆಲೆಗಳಲ್ಲಿ 'ಸ್ಥಾವರ'ವಾಗುತ್ತಿದೆ ; ಬಹುಸಂಖ್ಯಾತ ಜನಸಮುದಾಯ ಗಳ ಪಾಲಿಗೆ ಎಟುಕದ ಗಗನ ಕುಸುಮವಾಗಿಬಿಟ್ಟಿದೆ. ಆದರೆ, ಹೆರಿಗೆ - ಜನಪದ ವೈದ್ಯ - ಗಿರಿಜನ ವೈದ್ಯ - ನಿಸರ್ಗ ಚಿಕಿತ್ಸೆ ಮುಂತಾದ ಕ್ಷೇತ್ರಗಳಲ್ಲಿ (= ಕಲಾ ಪ್ರಕಾರಗಳೂ ಸೇರಿದಂತೆ) ಜ್ಞಾನವು ಅರಿವಾಗುತ್ತಾ ಬಹುಸಂಖ್ಯಾತರಾದ ಜನಸಮುದಾಯ ಗಳಲ್ಲಿ 'ಜಂಗಮ'ವಾಗಿರುವುದು ಮಿಗಿಲೆನಿಸುತ್ತದೆ. ಈ ದೃಷ್ಟಿಯಿಂದ ವಿವೇಚಿಸಿದರೆ ರೋಗಚಿಕಿತ್ಸೆಯ ಜೀವನಕ್ಕಿಂತಲೂ ರೋಗ ನಿರೋಧಕ ಜೀವನಶೈಲಿ ಯೊಂದನ್ನು ಪ್ರಜ್ಞಾಪೂರ್ವಕವಾಗಿ ಅಳವಡಿಸಿಕೊಳ್ಳಲು ಗಾಂಧಿಯವರು ನೀಡಿರುವ ಕರೆ ಅರ್ಥಪೂರ್ಣವಾಗಿದೆ.

'ಸಂಸ್ಕೃತಿಯ ಪುನರುಜ್ಜೀವನ'ವೆಂಬ ಲೇಖನದಲ್ಲಿ ಶಿವರಾಮ ಕಾರಂತರು ಚರ್ಚೆ ಮಾಡುತ್ತಾ.... ''ವಿಶ್ವದ ಜನ ಒಂದೇ ನಾಗರಿಕತೆ, ಒಂದೇ ಸಂಸ್ಕೃತಿ, ಒಂದೇ ಭಾಷೆ, ಒಂದೇ ರಾಜಕೀಯ ಅನುಸರಿಸಿದ ದಿನ ಯಾವುದೂ ಹಿಂದೆ ಇದ್ದಿಲ್ಲ, ಇನ್ನು ಬರಲಾರದು''... ಎಂದಿದ್ದಾರೆ.... ಆದರೆ ಇಂದು ಪರಿಸ್ಥಿತಿ ಬದಲಾಗಿದೆ. ಉತ್ಪಾದನೆ ಮತ್ತು ವಿತರಣೆಗಳ ಮಧ್ಯೆ ಕಾಲ-ದೇಶಗಳ ಅಂತರವು ಅಳಿಸಿಹೋಗಿದೆ... ಏಕರೂಪಾತ್ಮಕ ಜೀವನ ಶೈಲಿಗಳ ಸೈಬರ್ ಜಾಲವೊಂದು ಓಜೋನ್ ಕವಚದಂತೆ ಸ್ಥಳೀಯ ಭೂಗೋಳವನ್ನೆಲ್ಲ ಆವರಿಸಿಕೊಳ್ಳುತ್ತಿದೆ..... 'ವಿಶ್ವಗ್ರಾಮ' ವೆಂಬ ಸೇಬಿನ ಹಣ್ಣು ತನ್ನ ರುಚಿ ಬಣ್ಣ ಮತ್ತು ಕಂಪುಗಳಿಂದ ಸ್ವರ್ಗೀಯವಾಗಿದೆ. ವಿಶ್ವದಾದ್ಯಂತ ಹೆಚ್ಚುತ್ತಿರುವ 'ಜನಸಂಖ್ಯಾಸ್ಫೋಟ'ದಂತೆಯೇ 'ಗ್ರಾಹಕ ಜನ' ಸಂಖ್ಯೆಯೂ ಸ್ಫೋಟಗೊಳ್ಳುತ್ತಿದೆ. ಸ್ಥಳೀಯ ಮನುಷ್ಯ ನೊಬ್ಬನು ಗ್ರಾಹಕನಾಗುವುದೆಂದರೆ 'ಯಾಂತ್ರಿಕತೆ'ಯ ಬೆಡಗಿಗೊಳಗಾದನೆಂದೇ ಅರ್ಥ ! ನಾನಿಲ್ಲಿ 'ಯಾಂತ್ರಿಕತೆ' ಎಂಬ ಮಾತನ್ನು 'ಮಿಷಿನರಿ' ಎಂಬರ್ಥದಲ್ಲಿ ಮಾತ್ರ ಬಳಸುತ್ತಿಲ್ಲ. ಜಾತಿಪದ್ಧತಿ - ಮತಾಚಾರ - ಶಿಷ್ಟಾಚಾರ - ಏಕರೂಪಾತ್ಮಕ ಜೀವನಶೈಲಿ - ಶಸ್ತ್ರ ಮತ್ತು ಶಾಸ್ತ್ರ ಸಂಪನ್ನತೆ - ಜಾಗತಿಕ ಸುದ್ದಿ ಮತ್ತು ಬುದ್ಧಿ ಸಂಸ್ಥೆಗಳು - ಜಾಗತಿಕ ಮಾರುಕಟ್ಟೆ - ಮಾಹಿತಿ ತಂತ್ರಜ್ಞಾನ - ಕಲಾ ಪ್ರಕಾರಗಳು - ವೈಜ್ಞಾನಿಕ ಅಧ್ಯಯನಗಳು - ಕೃಷಿ ಮತ್ತು ಪ್ರಾಣಿ ಸಾಕಾಣಿಕೆ - ಇತ್ಯಾದಿ : ಬದುಕಿನ ವಿವಿಧ ಕ್ಷೇತ್ರಗಳಲ್ಲಿ ರೂಢಿಗತವಾದ, ಯಂತ್ರಗತವಾದ, ತಂತ್ರಗತವಾದ ಎಲ್ಲ ಬಗೆಯ ಯಾಂತ್ರಿಕ ಕೃತಿಗಳನ್ನೆ 'ಯಾಂತ್ರಿಕತೆ' ಎಂದು ಕರೆದಿದ್ದೇನೆ. ಇಂಥ ಜಡ ಪ್ರವೃತ್ತಿಗೆ ತದ್ವಿರುದ್ಧವಾಗಿರುವ 'ಸಂವೇದನೆ'ಯು ತಳ ಸಂಸ್ಕೃತಿಯ ಧಾತು ಮತ್ತು ಧೋರಣೆಗಳನ್ನು ಪ್ರಜ್ಞಾಪೂರ್ವಕವಾಗಿ ಅಳವಡಿಸಿ ಕೊಳ್ಳುವಂತಹುದು. ಸಂವೇದನೆ : ಸಂಘೋಪನೆ : ಸಂರಕ್ಷಣೆಯೆಂಬ ಐಕ್ಯತ್ರಯ ದೃಷ್ಟಿಕೋನ ನಮ್ಮೆಲ್ಲರ ಬದುಕಿನ ಮೂಲಮಂತ್ರವಾಗಬೇಕು. ನಾವೀನ್ಯರಹಿತವೂ, ಜೀವರಹಿತವೂ, ಹೃದಯರಹಿತವೂ ಆಗಿರುವ ಯಾಂತ್ರಿಕ ವಿಧಿವಿಧಾನಗಳು ಉತ್ಪಾದಕನಾಗಿದ್ದ ಮನುಷ್ಯನನ್ನು ಗ್ರಾಹಕನನ್ನಾಗಿ ಮಾಡುವಲ್ಲಿ ಸಫಲವಾಗುತ್ತವೆ, ಅಷ್ಟೆ.

'ಗ್ರಾಹಕ ಸಂಸ್ಕೃತಿ' ಎಂದರೆ ಮಾರುಕಟ್ಟೆ ಮತ್ತು ಶೈಕ್ಷಣಿಕ ವ್ಯಾಸಂಗದ ಕ್ಷೇತ್ರಗಳಲ್ಲಿ 'ಸಿದ್ಧವಸ್ತು' ಮತ್ತು 'ಸಿದ್ಧವಿಚಾರ'ಗಳನ್ನು ಕಣ್ಮುಚ್ಚಿ ಸ್ವೀಕರಿಸುವುದರ ಜೊತೆಗೆ ಏಕರೂಪಾತ್ಮಕ ಪಂಚಭೂತಗಳಿಗೆ ಅಧೀನವಾಗಿರುವ ಜೀವನ ವಿಧಾನವೆಂದೂ ತಿಳಿಯಬೇಕು. ಏಕರೂಪಾತ್ಮಕ ನೆಲ (ಮೆಗಾಸಿಟಿ - ನಗರಪ್ರದೇಶಗಳು), ಏಕರೂಪಾತ್ಮಕ ಜಲ (ಬಿಸ್ಲೇರಿ ಬಾಟಲ್ - ಪ್ಯಾಕೆಟ್‌ಗಳು), ಏಕರೂಪಾತ್ಮಕ ಗಾಳಿ (ಇಂಗಾಲದ ಸಂಯುಕ್ತ - ಸೀಸ ಸಂಯುಕ್ತಗಳು), ಏಕರೂಪಾತ್ಮಕ ಬೆಳಕು (ಜಲವಿದ್ಯುತ್ - ಅಣುವಿದ್ಯುತ್), ಏಕರೂಪಾತ್ಮಕ ಆಕಾಶ('ಅನಂತ' ಮತ್ತು 'ವಿಸ್ತಾರ'ಗಳಿಲ್ಲದ ಗಗನ) – ಈ ಬಗೆಯ ಹುಸಿ ಭೂತಗಳೇ ಆಧುನಿಕ ಮಾನವನ ಪಾಲಿಗೆ ನೈಸರ್ಗಿಕ ಜೀವಸತ್ವಗಳಾಗಿರುವುದರ ಜೊತೆಗೆ, ಏಕರೂಪಾತ್ಮಕ ಜೀವನಶೈಲಿಯೆನ್ನಬಹುದಾದ ಜಾಗತಿಕ ಸಂಸ್ಕೃತಿಯತ್ತ ತಳ್ಳುತ್ತಿವೆ. ಜಾಗತಿಕ ಸಂಸ್ಕೃತಿ ಮತ್ತು ಸ್ಥಳೀಯ ಸಂಸ್ಕೃತಿಗಳನ್ನು ಕುರಿತು ಆಲೋಚಿಸುತ್ತಿರುವಾಗ ನನಗೆ ನಾಗಚಂದ್ರನ 'ಪಂಪರಾಮಾಯಣ'ದ ನೆನಪಾಗುತ್ತಿದೆ.




ಹೆಣ್ಣು ಮತ್ತು ಭೂಮಿಯನ್ನು ನಮ್ಮ ದೇಶದಲ್ಲಿ ಬೇರೆ ಬೇರೆ ಎಂದು ಭಾವಿಸಿಲ್ಲ. ಹೆಣ್ಣು ಗೆಲ್ಲುವುದೆಂದರೆ ಭೂಮಿಯನ್ನು ಗೆದ್ದಂತೆಯೇ ಎಂಬ ದೃಷ್ಟಿ - ಧೋರಣೆ ಬಹುತೇಕ ಕಥನ ಗಳಲ್ಲಿದೆ. 'ಖಚರ ಚಕ್ರವರ್ತಿ' ಎಂಬ ಬಿರುದಿಗೆ ಪಾತ್ರನಾಗಿದ್ದ ದಶಮುಖ ರಾವಣನು ನಳಕೂಬರನ ಪತ್ನಿ ಉಪರಂಭೆಯ ಮನಸ್ಸನ್ನು ಮೊದಲಿನಿಂದಲೂ ಗೆದ್ದಿದ್ದರಿಂದಲೇ 'ದುರ್ಲಂಘ್ಯಪುರ' ಕೈವಶವಾಗುತ್ತದೆ.

ಯಾವುದೇ ಹೆಣ್ಣು ಅಥವಾ ಭೂಮಿಯನ್ನು ಗೆಲ್ಲಬಲ್ಲೆನೆಂಬ ಪುರುಷ - ಅಹಮಿಕೆಯಿಂದಾಗಿಯೇ ರಾವಣನು ಸೀತೆಯನ್ನು ಅಪಹರಿಸುತ್ತಾನೆ. ಆದರೆ, ವೈದೇಹಿಯು ರಾವಣನಿಗೆ ಒಲಿಯುವುದಿರಲಿ, ಕಣ್ಣೆತ್ತಿಯೂ ನೋಡುವುದಿಲ್ಲ, ರಾವಣನ ಪ್ರಲೋಭನೆ ಮತ್ತು ಆಕರ್ಷಣೆಗಳಿಗೆ ಬಲಿಯಾಗುವುದಿಲ್ಲ. ಆಕೆ ರಾವಣನೊಡನೆ ಸಂಭಾಷಿಸುವಾಗೆಲ್ಲ ಹುಲ್ಲಿನ ದಳಗಳನ್ನು ಎದುರಿಟ್ಟುಕೊಂಡು ಮಾತನಾಡುತ್ತಿದ್ದಳು. ಖಚರ ಚಕ್ರವರ್ತಿಯ ಸಾಮ್ರಾಜ್ಯಶಾಹಿ ವೈಭವ ತನಗೆ ತೃಣ ಸಮಾನವೆಂದು ತೋರಿಸುತ್ತಿದ್ದಳು. 'ಹುಲ್ಲಿನ ದಳವನ್ನು ಕೈಯಲ್ಲಿ ಹಿಡಿದ ಸೀತೆ'ಯ ದಿಟ್ಟತನ ನನಗೆ ಸ್ಥಳೀಯ ಸಂಸ್ಕೃತಿಗಳ ಕೆಚ್ಚಿನ ಪ್ರತೀಕವಾಗಿ ಕಾಣುತ್ತಿದೆ. ಇಂದು ವಿಶ್ವವ್ಯಾಪಿಯಾಗುತ್ತಿರುವ 'ಖಚರ ಚಕ್ರವರ್ತಿ'ಗಳೆಂದರೆ 'WASP'ಗಳೇ ಸರಿ ! (WASP = White Anglo Saxon Protestant). ಇಪ್ಪತ್ತೊಂದನೆ ಶತಮಾನದ ನವಸಾಮ್ರಾಜ್ಯಶಾಹಿಯ ವೈಭವ ಖಚರ ಚಕ್ರವರ್ತಿ ರಾವಣನಿದ್ದಂತೆ ! ಸ್ಥಳೀಯ ಸಂಸ್ಕೃತಿಗಳು ಇಂದು ಉಪರಂಭೆಯ ಹಾದಿ ಹಿಡಿಯುತ್ತಿವೆ :

ಪ್ರತಿವಿದ್ಯೆಯಂ ಆಕೆ ಕುಲ
ಕ್ಷತಿಯಂ ಪತಿಗಪ್ಪ ಹಾನಿಯಂ ಬಗೆಯದೆ, ದು
ರ್ಮತಿ ಕೊಟ್ಟಳ್ ಅದೆನ್ನರುಮಂ
ಮತಿಗಿಡಿಪುದು ಚೋದ್ಯಮಲ್ತು ಮದನೋನ್ಮಾದಂ.

ಪ್ರಸ್ತುತ, ಭಾರತದ ರೀತಿ-ನೀತಿಗಳು 'ಮದನೋನ್ಮಾದ'ದಿಂದಲೇ ಕೂಡಿದೆ. 'ಖಚರ ಚಕ್ರವರ್ತಿ'ಯ ಎದುರಿನಲ್ಲಿ ಸೀತೆಯ ಹಾದಿ ಒಂದು ಆದರ್ಶವಾಗಿದೆ. ರಾವಣನ ಪಾಲಿಗೆ ಸ್ವತಃ ಸೀತೆಯೇ 'ದುರ್ಲಂಘ್ಯಪುರ'ವಾಗಿದ್ದಳು; ಅವಳ ಮನಸ್ಸು 'ವಜ್ರಪಾಲ'ದಂತೆ ಅಭೇದ್ಯವಾಗಿತ್ತು. ಇಂಥ 'ಹದ' ಮತ್ತು 'ಗತಿಮತಿ' ಸ್ಥಳೀಯ ಸಂಸ್ಕೃತಿಗಳಿಗೆ ಬೇಡವೇನು ?

ಎ. ಚಂದ್ರಶೇಖರ ನಂಗಲಿ
೩೮೮೪, ಪಿ.ಸಿ. ಬಡಾವಣೆ, ಕೋಲಾರ - ೫೬೩೧೦೧

## ಹಾಸಲು

ಕ.ರಾ.ರ.ಸಾ.ಸಂ. ಬಸ್ಸಿನಲ್ಲೊಮ್ಮೆ
'ಕನ್ನಡ ಪ್ರೇಮಿ' ಕಂಡಕ್ಟರ್
ಯಾರಿಗೆ 'ಹಾಸಲು' ಬೇಕು
ಮರೆಯದೇ ಕೇಳಿ ಪಡೆಯಿರೆಂದ.
ಆ ಬಸ್ಸಿನಲ್ಲಿದ್ದ ಹಳ್ಳಿಯ ತುಂಟ
ಮುಗ್ಧ ನವಸಾಕ್ಷರನೊಬ್ಬ
ನನಗೆ 'ಹಾಸಲು' ಇದೆ'
ಒಂದು 'ಹೊದಿಯಲು' ಕೊಡಿ ಎಂದ!

ಅಶೋಕ ಯು. ಪತ್ತಾರ
ಸ.ಹಿ. ಪ್ರಾ.ಶಾಲೆ. ಡೋಣಿ (ತಾಂಡೆ), ತಾಲ್ಲೂಕು
ಮುಂಡರಗಿ, ಗದಗ ಜಿಲ್ಲೆ, ಪಿನ್ - ೫೮೨ ೧೧೮.

# ಕಲೆ ಮತ್ತು ಸಮಾಜಪ್ರಜ್ಞೆ

ರಾಜಶೇಖರ ರಾಮಣ್ಣ ಬಿಲ್ವಪತ್ರಿ

*ಗುಹಾ ಮಾನವನ ಕಲೆಯಲ್ಲೂ ಆವನ ವಿಕಾಸಕ್ಕೆ ತಕ್ಕ ಪ್ರಜ್ಞೆ - ಸಮೂಹಪ್ರಜ್ಞೆ - ಕಂಡುಬರುತ್ತದೆ. ಆದರೆ ಇಂದಿನ ಸುಸಂಸ್ಕೃತ ಮತ್ತು ನಾಗರಿಕ ಕಲಾವಿದನಲ್ಲಿ ತನ್ನ ಪರಿಸರ, ಸಮಾಜಗಳ ಕುರಿತ ಪ್ರಜ್ಞೆ ಕಾಳಜಿಗಳು ಅಷ್ಟಾಗಿ ಕಂಡುಬರುವುದಿಲ್ಲ. ಕಾರಣ ಭೋಗ ಜೀವನಕ್ಕೆ, ವಿಷಯ ಸುಖಗಳಿಗೆ ಮತ್ತು ಅತ್ಯಂತ ವೈಯಕ್ತಿಕ ಮನೋಭಾವ - ಮನೋಭಿಲಾಷೆಗಳಿಗೆ ದಾಸನಾಗಿರುವುದು. ಅಂತಹ ಕು-ಕಲಾವಿದನಿಂದ ಅಂತಹುದೇ ಮನೋವಿಕಾರಗಳೂ, ಭ್ರಮಾತ್ಮಕ ಮನಃಸ್ಥಿತಿಗಳೂ, ಅವಾಸ್ತವ ಲೋಕಗಳೂ, ಅಪಕ್ವ ಆದರ್ಶಗಳೂ ಸೃಷ್ಟಿಯಾಗುತ್ತವೆ. ಕಲೆ ಇಂದಿನ ತನ್ನ ಸೀಮಿತ ವಲಯದಿಂದ ಹೊರಬಂದು ಸಮಸ್ತ ಮಾನವ ಜನಾಂಗವನ್ನು, ಅದರ ಬದುಕು - ಆಶೋತ್ತರಗಳನ್ನು ಪ್ರತಿನಿಧಿಸುವಂತಹ ವೈಶಾಲ್ಯತೆಯನ್ನು, ಶಕ್ತಿಯನ್ನು ಪಡೆದುಕೊಂಡಲ್ಲಿ ಮತ್ತು ಸಮಕಾಲೀನ ಬದುಕು ಮತ್ತು ಸಮಾಜಗಳ ವಾಸ್ತವ ಪ್ರಜ್ಞೆಯನ್ನು ಮೈಗೂಡಿಸಿಕೊಂಡಲ್ಲಿ ಮಾತ್ರ ಚೈತನ್ಯಯುಕ್ತ ನಿರಂತರತೆಯನ್ನು ಹೊಂದಬಹುದಾಗಿದೆ.*

ಸಮಕಾಲೀನ ಸಾಂಸ್ಕೃತಿಕ ಸಂದರ್ಭದಲ್ಲಿ ಸಾಹಿತ್ಯವನ್ನು ಸ್ವಲ್ಪಮಟ್ಟಿಗೆ ಹೊರತುಪಡಿಸಿ ಬೇರೆಷ್ಟೋ ಕಲಾ ಮಾಧ್ಯಮಗಳು ಮೌಲ್ಯಗಳ ಸಂಬಂಧವನ್ನು ಕಳಚಿಕೊಂಡು, ಸಾಮಾಜಿಕ ಪ್ರಜ್ಞೆಯಿಂದ ದೂರ ಸರಿದಿವೆ. ಎಲ್ಲ ಕಲಾಮಾಧ್ಯಮಗಳೂ ಮೂಲ ಜಾನಪದ ಪ್ರಕಾರದಿಂದ ಬೇರ್ಪಟ್ಟು ಶಿಷ್ಟತೆಯತ್ತ ಹೆಜ್ಜೆಯಿಟ್ಟುದೇ ಅವು ಮಾನವ ಬದುಕಿನ ಮೂಲ ಸೆಳಹುಗಳಿಂದ ಅಗಲಿ ಕೃತಕವಾಗಿವೆ; ತಮ್ಮದೇ ಕಾಲ್ಪನಿಕ, ಮನೋಹರ ಮಾಯಾಲೋಕವನ್ನು ಸೃಷ್ಟಿಸಿಕೊಂಡಿವೆ. ಹಾಗೆಂದು ಸಾರಾಸಗಟಾಗಿ ಎಲ್ಲ ಕಲೆಗಳನ್ನು ದೂರುವುದು-ತಿರಸ್ಕರಿಸುವುದು ಉದ್ದೇಶವಲ್ಲ. ಅಪರೂಪಕ್ಕೆಂಬಂತೆ ಕೆಲವು ಸಲ ಕಲೆ ಮೌಲ್ಯದಿಂದೊಡಗೂಡಿ ಜೀವನಪರವೂ ಆಗಿದೆ. ಆದರೆ ಅದರ ಪ್ರಮಾಣ ಅಲ್ಪ. ಹಾಗಾದರೆ ಕಲೆ ಸಾಮಾನ್ಯ ಜನರ ಜೀವನದಿಂದ ಸಂಬಂಧವನ್ನು ಕಡಿದುಕೊಂಡುದಕ್ಕೆ ಕಾರಣವೇನು? ಕಾರಣ - ಅದು ಹಿಂದು, ಇಂದು ಶ್ರೀಮಂತರ ಸೊತ್ತಾಗಿರುವುದು; ಇಲ್ಲವೆ ಮೂರ್ಖರ ಕೈಯ ಕೌಶಲದಲ್ಲಿ ಬಂದಿಯಾಗಿರುವುದು; ಅಥವಾ ಜಾಣರ ತಲೆಯಲ್ಲಿ ಹುಟ್ಟುವ, ಜೀವಂತ ಬದುಕಿಗೆ ಅಪರಿಚಿತವಾದ, 'ವಿಶಿಷ್ಟ ಪರಿಕಲ್ಪನೆ'ಗಳೆಂಬ ಮೃತ ಅಸ್ತಿತ್ವವಾಗಿರುವುದು.

**ಪ್ರಜ್ಞೆಯೆಂದರೇನು?**

ಇತರ ಪ್ರಾಣಿಗಳಲ್ಲಿಲ್ಲದ ಕಲ್ಪನೆ, ಭಾವನೆ, ಸಂಕಲ್ಪ ಮುಂತಾದ ಮನಃಶಕ್ತಿ, ವಸ್ತುಸ್ವರೂಪ ಅಥವಾ ಸತ್ಯದ ಸ್ವರೂಪದ ಕುರಿತ ಅನ್ವೇಷಣೆ, ಆ ಮೂಲಕ ಬೆಳೆಯುವ ಬದ್ಧಿ-ತರ್ಕಶಕ್ತಿ ಮತ್ತು ಇದೆಲ್ಲದರ ಪರಿಣಾಮವಾದ ಜ್ಞಾನಶಕ್ತಿ - ಇವುಗಳ ವಿಕಾಸದ ಪರಮಾವಧಿಯನ್ನು ಕಾಣುವುದು ಮಾನವನಲ್ಲಿ ಮಾತ್ರ. ಈ ಮನಃಶಕ್ತಿ, ಬುದ್ಧಿಶಕ್ತಿ ಮತ್ತು ಜ್ಞಾನಶಕ್ತಿಗಳೊಂದಿಗೆ ಕ್ರಿಯಾಶಕ್ತಿಯೂ ಜೊತೆಗೂಡಿದಲ್ಲಿ ಸೃಷ್ಟಿಕ್ರಿಯೆ ಪ್ರಾರಂಭವಾಗುತ್ತದೆ. ಅದೇ ಸೃಜನಶಕ್ತಿ. ಈ ಎಲ್ಲ ಶಕ್ತಿಗಳಿಗೂ ಮೂಲವಾದ, ಸೂತ್ರಪ್ರಾಯವಾದ ಶಕ್ತಿಯೇ ಪ್ರಜ್ಞಾಶಕ್ತಿ ಅಥವಾ ಪ್ರಜ್ಞೆ.

ಪ್ರಜ್ಞೆಯೆಂದರೆ ಅರಿವು, ಎಚ್ಚರಿಕೆ, ತಿಳಿವು. ಅದು ಸಮಸ್ತ ಮಾನವರ ತಿಳಿವು. ಅದು ಸಮಯಾಸಮಯಗಳ, ಉಚಿತಾನುಚಿತಗಳ, ವ್ಯಷ್ಟಿ-ಸಮಷ್ಟಿಗಳ ವಿವೇಕದ ಸ್ಥಿತಿ. ಇದನ್ನು ವಸ್ತುಮೂಲ ಪ್ರಪಂಚಕ್ಕೆ ಅನ್ವಯಿಸಿ ಅದರ ಸಮಸ್ತ ಸ್ವರೂಪವನ್ನು ಕಂಡರಿಯುವ ವಾಸ್ತವ ಪ್ರಜ್ಞೆಯೆಂದೂ ಮತ್ತು ವಿಷಯ ಅಥವಾ ವ್ಯಕ್ತಿ ಮೂಲವಾದ ಭಾವನೆ, ವಿಚಾರ, ಮನಃಸ್ಥಿತಿ ಮುಂತಾದ ಮನಸತ್ವಗಳೊಂದಿಗೆ ಸಂಬಂಧಿಸಿ ಆತ್ಮಪ್ರಜ್ಞೆ ಅಥವಾ ವ್ಯಕ್ತಿಪ್ರಜ್ಞೆಯೆಂದೂ ಅದರ ವ್ಯಾಪ್ತಿಯನ್ನು ವಿಸ್ತರಿಸಬಹುದು.

ಸಮಾಜಪ್ರಜ್ಞೆಯೆಂದರೆ ಸಮೂಹವೊಂದರ ಸಮಸ್ತ ಆಚಾರ-ವಿಚಾರ, ನಂಬಿಕೆ, ಅದರ ಹಿನ್ನೆಲೆ, ಬೆಳವಣಿಗೆ, ಭಾವನೆಗಳು, ಸಮೂಹದ ಬದುಕಿನ ಸಾಮರಸ್ಯಕ್ಕೆ, ವಿರಸಕ್ಕೆ, ಸಂಘಟನೆ-ವಿಘಟನೆಗಳಿಗೆ ಕಾರಣವಾಗುವ ಅಂಶಗಳು-ಹೀಗೆ ಸಮೂಹದ ಸಮಗ್ರ ಸಂಸ್ಕೃತಿಯ ಎಲ್ಲ ಆಯಾಮಗಳಿಂದ ದೊರಕಿಸಿಕೊಳ್ಳುವ ಒಟ್ಟು ಗ್ರಹಿಕೆ. ಅದು ಸಂಸ್ಕೃತಿ ಮತ್ತು ಪರಂಪರೆಯ ಒಳ ಹೊರ ಸ್ತರಗಳ ಸೂಕ್ಷ್ಮ ಪದರುಗಳ ಸ್ಫುಟವಾದ ಅರಿವು; ಗತ ಇತಿಹಾಸದಲ್ಲಿ ಹೊಸ ಮೂಲ ಬೇರುಗಳ ಮರುಪರಿಶೀಲನೆ; ಪ್ರಸ್ತುತ ಬದುಕಿನ ಚಾಲನೆಯ ಕೇಂದ್ರಗಳ ಅನ್ವೇಷಣೆ; ಸದ್ಯದ ಸಾಮಾಜಿಕ ಜೀವನದ ಸ್ಫೂರ್ತಿ - ವಿಸ್ಫೂರ್ತಿ, ಪ್ರಗತಿ - ವಿಗತಿ, ಪರಿಸರವಾದ - ಕೈಗಾರಿಕೀಕರಣ, ಜಾಗತಿಕವಾದ - ಪ್ರತ್ಯೇಕತಾವಾದ, ಯುದ್ಧ - ಶಾಂತಿ, ಹಿಂಸೆ - ಅಹಿಂಸೆ, ಹೀಗೆ ಹಲವು ದ್ವಂದ್ವಗಳ, ವೈರುಧ್ಯಗಳ ವಿವೇಕಪೂರ್ಣವಾದ, ತೌಲನಿಕ ಜ್ಞಾನ ಮತ್ತು ಸರ್ವರಿಗೂ ಹಿತಕಾರಿಯಾದ ದೃಷ್ಟಿ. ಹೀಗೆ ಸಮಾಜಪ್ರಜ್ಞೆಯೆಂಬುದು ಭೂತದ ನೆರಳಿನಲ್ಲಿ ವರ್ತಮಾನವನ್ನು, ವರ್ತಮಾನದ ಬೆಳಕಿನಲ್ಲಿ ಭವಿಷ್ಯತ್ತನ್ನು ರೂಪಿಸುವ ರೂವಾರಿಯಾಗಿದೆ.

**ಸೃಜನೆ ಮತ್ತು ಪ್ರಜ್ಞೆ**

ಸೃಜನೆ (=ಅಭಿವ್ಯಕ್ತಿ) ಮತ್ತು ಪ್ರಜ್ಞೆ ಎರಡೂ ಪೂರಕ ಪರಿಕಲ್ಪನೆಗಳಾಗಿವೆ. ಅವು ಪರಸ್ಪರ ಅವಲಂಬನೆ, ಅಂತರ ಸಂಬಂಧ ಹೊಂದಿದ 'ಕ್ರಿಯಾತ್ಮಕ' ಮತ್ತು 'ಪ್ರಚೋದಕ' ಶಕ್ತಿಗಳು. ಬೆನೆಡಿಟೊ ಕ್ರೋಚೆಯ ಸಿದ್ಧಾಂತವನ್ನಿಲ್ಲಿ ಬಳಸಿಕೊಂಡು ಹೇಳುವುದಾದರೆ-ನಂಬಿಕೆ, ಕಲ್ಪನೆ, ಮೌಲ್ಯ ಮುಂತಾದವುಗಳ ಅರಿವು, ಎಂದರೆ ಪ್ರಜ್ಞೆ, ಇಲ್ಲಿ ಪ್ರಚೋದಕ ಶಕ್ತಿಯಾದರೆ ಅದರಿಂದ ರೂಪುಗೊಳ್ಳುವ ಕೃತಿಯೇ ಸೃಜನೆಯ ಫಲ ಸ್ವರೂಪ. ಆ ಪ್ರಜ್ಞೆಯೂ ಕೃತಿಯ ಜೊತೆಜೊತೆಗೇ ಬೆಳೆಯುತ್ತಿರುತ್ತದೆ. ಈ ಅರ್ಥದಲ್ಲಿ ಪ್ರಜ್ಞೆಯೆಂದರೆ ಒಬ್ಬನು ತನ್ನ ಕೃತಿಯ ಮೂಲಕ ಸಾಧಿಸುವ ಪೂರ್ಣತೆಯೇ. ಈ ಕಾರಣದಿಂದಲೇ ಪ್ರಜ್ಞೆಯೆಂಬುದು ಪ್ರತಿಯೊಂದು ಸೃಜನಶೀಲ ಕೃತಿಯ ಸ್ವಭಾವವಾಗಿರುತ್ತದೆ. ಕಾರಣ, ಪ್ರತಿಯೊಂದು ಕೃತಿಯ ವಸ್ತುವೂ ರಾಗ-ದ್ವೇಷ ಮುಂತಾದ ಭಾವಗಳೂ, ವಿಚಾರಗಳೂ, ಮೌಲ್ಯಗಳೂ ಮೂಲವಾದ ಬದುಕಿನ, ಸಮಾಜದ ಪ್ರಜ್ಞೆಯೇ ಹೊರತು ಇನ್ನೇನಲ್ಲ.

'ಧ್ವನಿ'ಯು ನಮ್ಮ ಸೌಂದರ್ಯ ಮೀಮಾಂಸೆಯಲ್ಲಿ ಆನಂದವರ್ಧನನು ಪ್ರತಿಪಾದಿಸಿ ಅಭಿನವಗುಪ್ತನು ಒಪ್ಪಿಕೊಂಡ ಒಂದು ಪ್ರಮುಖವಾದ ತತ್ತ್ವ. ಇಲ್ಲಿ ಧ್ವನಿಯೆಂದರೆ ಕೃತಿಯೊಂದರಲ್ಲಿ ಅಭಿವ್ಯಕ್ತವಾಗುವ ವಸ್ತುವಿನ ಪರಿಪಕ್ವ ಫಲ; ಅದು ಕೃತಿಕಾರನ ಪ್ರಜ್ಞೆ ಅರ್ಥಾತ್ ಸಮಾಜಪ್ರಜ್ಞೆಯಲ್ಲದೆ ಇನ್ನೇನಲ್ಲ. ಭರತನೂ ನಾಟಕದ ವಸ್ತುವನ್ನು ಕುರಿತು ಹೇಳುತ್ತಾ, ಅದು ಲೋಕೋಪಕಾರಿಯಾಗಿರಬೇಕು, ಬೋಧಕವಾಗಿರಬೇಕು ಎನ್ನುತ್ತಾನೆ. ಎಂದರೆ, ನಾಟಕವು ವಿಷಯಾಸಕ್ತರ ಕಾಲಕ್ಷೇಪಕ್ಕಾಗಿರುವ ಒಣ ಮನರಂಜನೆಯ ಆಟವಲ್ಲ, ಅದು ಲೋಕಕಲ್ಯಾಣಾರ್ಥವಾದ ಕಲಾಪ್ರಕಾರವೆಂಬ ಅರ್ಥ ಇದರಿಂದ ಧ್ವನಿತವಾಗುತ್ತದೆ. ಮೇಲಿನ ಉದಾಹರಣೆಗಳು ಸೃಜನೆ ಮತ್ತು ಪ್ರಜ್ಞೆಯ ಅವಿನಾಭಾವ ಸಂಬಂಧವನ್ನೇ ಸಮರ್ಥಿಸುತ್ತವೆ. ಪ್ರಜ್ಞೆಯಿಲ್ಲದೆ ಸೃಜನೆಯಿಲ್ಲ. ಅವೆರಡೂ ಏಕಾತ್ಮವಾದ ಅನನ್ಯ ಪರಿಕಲ್ಪನೆಗಳು, ಶಕ್ತಿಗಳು.

ಸೃಜನೆ ಮತ್ತು ಪ್ರಜ್ಞೆಯ ಸಹಸಂಬಂಧವನ್ನು ಅನನ್ಯವೆಂದಾಕ್ಷಣ ಕೃತಿಯೊಂದು ಪರಿಪೂರ್ಣವೆಂದು ಹೇಳಲಾಗುವುದಿಲ್ಲ. ಅದು ಪರಿಪೂರ್ಣವಾಗಬೇಕಾದರೆ ಕರ್ತೃವಿನ ಭಾವ, ವಿಚಾರವು ಸೂಕ್ತ ಸಾದೃಶ್ಯವನ್ನು ಪಡೆಯಬೇಕಾದುದು ಅನಿವಾರ್ಯ. ಈ ಸಾದೃಶ್ಯ ಕಲ್ಪನೆ ಪೂರ್ಣವಾಗಬೇಕಾದರೆ ಕೃತಿಕಾರನ ಅನುಭವ, ಸಂಸ್ಕಾರ ಮೂಲವಾದ ಪ್ರಜ್ಞಾಶಕ್ತಿಯನ್ನೇ ಅವಲಂಬಿಸುವ ಕಲ್ಪಕ·ಶಕ್ತಿ ಮತ್ತು ಪ್ರತಿಭೆಗಳು ಸಮರ್ಥವಾಗಿರಬೇಕು.

ಇಲ್ಲಿ 'ಸಾದೃಶ್ಯ'ವೆಂಬುದೇ ಸಮಸ್ಯೆಯ ಮೂಲ. ಅದು ಕೃತಿಕಾರನ ಪ್ರಜ್ಞೆ ಮತ್ತು ಪ್ರತಿಭೆಗಳನ್ನು ಸಂಯುಕ್ತವಾಗಿ ಬೆಸೆದು, ನಿರ್ದಿಷ್ಟವಾದ ಹದದಲ್ಲಿ ಅವನ ಭಾವನೆ, ವಿಚಾರಗಳೆಂಬ ಮೂಲವಸ್ತುವನ್ನು ತನ್ಮೂಲಕ ಎರಕಹೊಯ್ದು ಕಲೆಯಾಗಿಸುತ್ತದೆ. ಹೀಗೆ ಸಾದೃಶ್ಯವು ಪ್ರಜ್ಞೆ ಮತ್ತು ಸೃಜನೆಗಳನ್ನು ನೇರವಾಗಿ ಪ್ರತಿನಿಧಿಸಿ 'ಪ್ರಜ್ಞೆಯ ಸ್ವರೂಪ' ಮತ್ತು 'ಸೃಜನೆಯ 'ಸಾಮರ್ಥ್ಯ'ಗಳಲ್ಲಿ ತನ್ನ ಸಮಸ್ಯೆಯ ಮೂಲವನ್ನು ಹೊಂದಿದೆ.

ಮಾನಸಿಕ ಅಂತರದ ಅಳಿವಿಗೆ ಕೃತಿಯ ದೌರ್ಬಲ್ಯ ಅಥವಾ ಸಹೃದಯನ ದೌರ್ಬಲ್ಯ ಕಾರಣವಾಗಬಹುದೆನ್ನುವ ಎಡ್ವರ್ಡ್ ಬುಲ್ಲೊ, ಕೃತಿಯೊಂದು ಭಾವಾನುಭವದ (ರಸಾನುಭವವಲ್ಲ) ಅಪಾಯಕ್ಕೆ ತುತ್ತಾಗುವುದು ಕೃತಿಕಾರನ 'ಅಸಂಸ್ಕೃತ ವಾಸ್ತವತೆಯ ಗೀಳಿನಿಂದ ಉಂಟಾಗುವ ಭಾವೋದ್ರೇಕದ ಅಭಿವ್ಯಕ್ತಿಯ ಕಾರಣದಿಂದಾಗಿ' ಎನ್ನುತ್ತಾನೆ (ಡಾ॥ ಎಚ್. ತಿಪ್ಪೇರುದ್ರಸ್ವಾಮಿ : ತೌಲನಿಕ ಕಾವ್ಯ ಮೀಮಾಂಸೆ, ಪು. ೪೫೯). ಇಲ್ಲಿ ಕೃತಿಕಾರನ ಪ್ರಜ್ಞೆಯೇನಿದ್ದರೂ ಅಪಕ್ವ ಮತ್ತು ಆತುರದ ಅಭಿವ್ಯಕ್ತಿ ಮಾತ್ರ. ಇಂತಹ ಕೃತಿಯು ಕೃತಿಕಾರನ ಅಸಂಸ್ಕೃತವಾದ ವಾಸ್ತವತೆಯ ಪ್ರಜ್ಞೆಯು ಪರಿಪೂರ್ಣತೆಯನ್ನು ಸಾಧಿಸದೆ, ಎಂದರೆ, ಪೂರ್ಣಪ್ರಜ್ಞೆಯ ಮತ್ತು ಪ್ರತಿಭೆಯ ಮೂಸೆಯಲ್ಲಿ ಸೂಕ್ತ ಸಾದೃಶ್ಯವನ್ನು ಪಡೆಯದೇ ಉಂಟಾದ ಅಭಿವ್ಯಕ್ತಿ. ಅದು ಒಂದು ಬಗೆಯ ಗರ್ಭಪಾತ. ಇನ್ನು ಕಲಾನುಭವದಿಂದ ವಂಚಿತನಾಗುವ ಅಪಾಯಕ್ಕೆ

ರಚನೆಯಲ್ಲಿನ ಕೃತ್ರಿಮತೆ, ಅಸಂಭಾವ್ಯ ಘಟನೆಗಳು, ಅನುಭವದಾರಿದ್ರ್ಯ ಮುಂತಾದವುಗಳು ಕಾರಣವಾಗುತ್ತವೆ.

ಕೃತಿಯೊಂದನ್ನು ಶ್ರೇಷ್ಠವೆನ್ನುವಲ್ಲಿ ಅದು ಉಂಟು ಮಾಡುವ ಅನುಭವದ ಸ್ವರೂಪವನ್ನು ಗಮನಿಸಬೇಕೆನ್ನುವ ರಿಚರ್ಡ್ಸ್, ಅನುಭವ ಉದಾತ್ತವಾಗಿಲ್ಲದೆ, ಮನಸ್ಸನ್ನು ಉದ್ರೇಕಿಸುವಂತೆಯೋ ಅಥವಾ ತನ್ನ ಧೋರಣೆಯಿಂದ ಮೌಲ್ಯಘಾತಕವಾಗಿಯೋ ಇದ್ದರೆ, ಆ ಕೃತಿ ಕಲಾತ್ಮಕವಾಗಿ ಎಷ್ಟೇ ಸಮರ್ಥವಾಗಿದ್ದರೂ 'ಕೆಟ್ಟ ಕಲೆ' ಎನಿಸಿಕೊಳ್ಳುತ್ತದೆ ಎನ್ನುತ್ತ, ಕಲಾತ್ಮಕತೆ ಕಲೆಯನ್ನು ಬೆಲೆ ಕಟ್ಟುವ ಒರೆಗಲ್ಲಲ್ಲ, ಬದಲಾಗಿ ಆ ಮೂಲಕ ಅಭಿವ್ಯಕ್ತವಾಗುವ ಮೌಲ್ಯಗಳು ಅದರ ಮಹತ್ವವನ್ನು ನಿರ್ಣಯಿಸುತ್ತವೆ ಎನ್ನುತ್ತಾನೆ (ತೌ.ಕಾ.ಮೀ. : ಪು. ೫೨೨).

**ಕಲೆ : ಪ್ರಜ್ಞೆಯೋ, ಕಲ್ಪನೆಯೋ?**

ಸೃಜನೆ ಎಲ್ಲ ಬಗೆಯ ಸೃಷ್ಟ್ಯಾತ್ಮಕ ಮತ್ತು ಕಲಾತ್ಮಕ ಕ್ರಿಯೆ-ಪ್ರಕಾರಗಳನ್ನು ಒಳಗೊಂಡಂತಹುದು. ಎಲ್ಲ ಬಗೆಯ ಕಲಾ ಪ್ರಕಾರಗಳಲ್ಲೂ ಪ್ರಜ್ಞೆಯ ಪಾತ್ರ ಆಯಾ ಅರ್ಥ-ಪ್ರಕಾರಗಳಲ್ಲಿದ್ದೇ ಇರುತ್ತದೆ. ಅದು ಸಾಹಿತ್ಯ, ನಾಟಕ ಮುಂತಾದ ಪ್ರಕಾರಗಳಲ್ಲಂತೂ ನಿಚ್ಚಳವಾಗಿಯೇ ಇದೆ. ದೃಶ್ಯಕಲೆಯಲ್ಲೂ ಇರಬೇಕಾದ ಪ್ರಮಾಣದಲ್ಲಿಲ್ಲದೇ ಹೋದರೂ ಅಲ್ಪಸ್ವಲ್ಪ ಅದನ್ನು ಗುರುತಿಸಬಹುದು. ಆದರೆ, ಈ ಕಲೆಗೂ ಸಮಾಜಪ್ರಜ್ಞೆಗೂ ಅದೆಂತಹ ಸಂಬಂಧವೆಂಬ ನಕಾರಾತ್ಮಕ ಪ್ರಶ್ನೆಯೂ ಬಹು ಹಿಂದಿನಿಂದ ಇಂದಿನವರೆಗೂ ಉಳಿದುಕೊಂಡೇ ಬಂದಿದೆ. ಅದಕ್ಕೆ ಅಂದಂದಿನ ಪ್ರಜ್ಞಾವಂತ ಚಿಂತಕರು ಸಮರ್ಥವಾಗಿ ಉತ್ತರಿಸಿದರೂ ಮೂರ್ಖ ಕಲಾವಿದರಿಂದ ಮತ್ತು ಅಪಕ್ವ ಬುದ್ಧಿಯ ಚಿಂತಕರಿಂದಾಗಿ ಆ ಸಮಸ್ಯೆ ಅನಂತವಾಗಿದೆ. ಇದು ಬದುಕನ್ನು ಬದುಕಾಗಿ ಕಾಣದೆ ಭೋಗವೆಂದೆಣಿಸುವ, ಬದುಕಿನ ಪೂರ್ಣದೃಷ್ಟಿಯನ್ನು ಪಡೆಯದ, ಕಲೆಯೂ ಕೇವಲ ಭೋಗದ, ಆನಂದದ ಸಾಧನವೆಂಬ ಅಪೂರ್ಣದೃಷ್ಟಿಯ, 'ಕಲೆಗಾಗಿ ಕಲೆ' ಎಂಬ ಅಜ್ಞಾನಜನ್ಯ, ಪ್ರಜ್ಞಾಹೀನ ಮತ್ತು ಜನವಿರೋಧಿ ಧೋರಣೆಯ ಕಲಾವಿದರ ಮತ್ತು ಚಿಂತಕರ ಸೀಮಿತ ಚಿಂತನೆಯ ಮತ್ತು ಅಮಾನವೀಯತೆಯ ಫಲವಾಗಿದೆ. ಅದು ಜನಸಾಮಾನ್ಯರಿಗೆ ತುಷ್ಟಿ-ಪುಷ್ಟಿಯನ್ನು ಕೊಡುವ ಬದಲು ಮತ್ತುಬರಿಸುವ ಫಲವಾಗಿದೆ. ಹಾಗೆಂದೇ ರಿಚರ್ಡ್ಸ್ ಹೇಳುತ್ತಾನೆ, ''ಕಲೆಯಲ್ಲಿ ಆನಂದಾನುಭವವೇ ಪರಮಗುರಿಯೆಂಬ ಅಪೂರ್ಣದೃಷ್ಟಿ ಮತ್ತು ಮನಸ್ಸನ್ನು ಉದ್ರೇಕಗೊಳಿಸುವುದೇ 'ಆನಂದ'ವೆಂಬ ತಪ್ಪು ಕಲ್ಪನೆ ಕಲೆಯ ದುರುಪಯೋಗಕ್ಕೆ ಕಾರಣ'' ಎಂದು.

ಹನ್ನೆರಡನೆಯ ಶತಮಾನದ ಕರ್ನಾಟಕದಲ್ಲಿ ವಚನ ಸಾಹಿತ್ಯವು ಭಾರತೀಯ ಸಾಹಿತ್ಯೇತಿಹಾಸದಲ್ಲಿಯೇ ಮೊಟ್ಟ ಮೊದಲಿಗೆ ಮೌಲ್ಯ, ಸಮಾಜಪ್ರಜ್ಞೆಗಳಿಂದ ಕೂಡಿ ಜನಪರವಾಗಿ ಬೆಳೆದುದನ್ನು ಕಾಣಬಹುದು. ಶಿವಶರಣರು ವಚನಗಳ ಮೂಲಕ ಜನಪರ ಕ್ರಾಂತಿಕಾರಿ ವಿಚಾರಗಳನ್ನು ಸಮಾಜದಲ್ಲಿ ಹರಡಿ ಹೊಸ ಸಮಾಜದ ನಿರ್ಮಾಣದ ಬುನಾದಿ ಹಾಕುವುದಕ್ಕೆ ಕಾರಣಕರ್ತರಾದರು. ಅವರ ಸಾಹಿತ್ಯವು ವಾಸ್ತವಪ್ರಜ್ಞೆಯಿಂದ, ಪ್ರಗತಿಪರ, ರಚನಾತ್ಮಕ ಸಮಾಜದ ಅಭ್ಯುದಯ-ಕಲ್ಯಾಣದ ಆಶಯದಿಂದ ಕೂಡಿದ ತತ್ತ್ವದ ಬೆಳಕಾಗಿದೆ. ಮುಂದೆ ಶಿವಶರಣರ ತತ್ತ್ವದ ಬೆಳಕಿನ ಹಾದಿಯಲ್ಲೇ ನಡೆದುಬಂದ ಶಿವಕವಿ ಹರಿಹರ ಮತ್ತು ರಾಘವಾಂಕರು ಜನರುದ್ಧಾರಗೈಯುವಂತಹ, ಬದುಕನ್ನು ಶಿವಮಯವಾಗಿಸುವಂತಹ, ಮನುಷ್ಯನನ್ನು ಶ್ರೇಷ್ಠತೆ ಗೊಯ್ಯುವಂತಹ ಸಾಹಿತ್ಯವನ್ನೇ ರಚಿಸಬೇಕೆಂಬ ಧೋರಣೆಯನ್ನು ಹೊಂದಿ ಕಾರ್ಯಪ್ರವೃತ್ತರಾದರು. ಇಲ್ಲೆಲ್ಲ ಕಲೆ ಸಮಾಜದ ಉದ್ಧಾರಕ್ಕೆ, ಪ್ರಗತಿಗೆ, ಶ್ರೇಷ್ಠ ಜೀವನಕ್ಕೆ ಕಾರಣವಾಗಬೇಕೆಂಬ ವಿಚಾರವಿದೆಯೇ ಹೊರತು ಅರ್ಥಹೀನ, ಭ್ರಮಾತ್ಮಕ ಲೋಕವನ್ನು ಸೃಷ್ಟಿಸುವುದಲ್ಲ.

೧೯ನೇ ಶತಮಾನದ ಹಿಪೊಲೈಟ್ ಟೇಯ್ನ್ ಎಂಬ ಫ್ರೆಂಚ್ ತಜ್ಞನು ಕಲೆಯು ಸಾಮಾಜಿಕ ಮೌಲ್ಯಗಳ ಮತ್ತು ಒಂದು ವ್ಯವಸ್ಥಿತ ಮಾನಸಿಕ ರೂಪುರೇಷೆಗಳ ಸಂಯುಕ್ತ ಕ್ರಿಯೆಯ ಫಲವೆನ್ನುತ್ತಾನೆ (ಯೂರಿ ಬೊರೆವ್ : **ಈಸ್ತೆಟಿಕ್ಸ್** ಪು. ೧೦೨). ಟೇಯ್ನ್ ಜೀವನದ ಮೌಲ್ಯಗಳನ್ನು ಮತ್ತು ಕಲಾವಿದನೊಬ್ಬನ ಅವುಗಳೊಂದಿಗಿನ ಮಾನಸಿಕ ಸ್ಪಂದನೆಯನ್ನು, ಎಂದರೆ, ಸಮಾಜದ ಕುರಿತ ಅವನ ಪ್ರಜ್ಞೆ, ಧೋರಣೆಗಳನ್ನೇ ಹೇಳುತ್ತಾನೆ. ಅವನ ಪ್ರಜ್ಞೆಯ, ಕಾಳಜಿಯ ನೆಲೆಯಿಂದ ಅಭಿವ್ಯಕ್ತವಾದ ಸಾಮಾಜಿಕ ಮೌಲ್ಯವೇ ಕಲೆಯೆನ್ನುತ್ತಾನೆ.

ಶ್ರೇಷ್ಠ ಸಮಾಜವಾದೀ ಕಲಾಚಿಂತಕ ಜಿ. ವಿ. ಪ್ಲೆಹಾನೊವ್ ಸಂಪತ್ತು ಮತ್ತು ವಿಜ್ಞಾನ ಮುಂತಾದವುಗಳು ಮಾನವ ಬದುಕಿನ ಪ್ರಗತಿಗೆ, ಶ್ರೇಯಸ್ಸಿಗೆ ಹೇಗೆ ಕಾರಣ ವಾಗುತ್ತವೋ ಹಾಗೆ ಕಲೆಯೂ ಬದುಕಿನ ಶ್ರೇಯಸ್ಸಿಗೆ ಸಾಧನವಾಗಬೇಕೆನ್ನುತ್ತಾನೆ. ಯಾರೂ ಸಂಪತ್ತಿಗಾಗಿಯೇ ಸಂಪತ್ತು ಎಂಬ ಹುಚ್ಚುತನದಿಂದ ಅದನ್ನು ಸಂಗ್ರಹಿಸುವುದಿಲ್ಲ. ಬದಲಿಗೆ ಅದರಿಂದ ಬದುಕು ಸುಗಮವಾಗಬೇಕೆಂಬ ಆಶಯವೇ ಅಲ್ಲಿದೆ. ಅಂತೆಯೇ ಯಾವ ವಿಜ್ಞಾನಿಯೂ ಶೋಧನೆಗಾಗಿಯೇ ಶೋಧನೆಯೆಂದು ಕಾರ್ಯಪ್ರವೃತ್ತ ನಾಗುವುದಿಲ್ಲ, ಅದರ ಹಿಂದೆ ಮಾನವನ ಅಭ್ಯುದಯದ ದೃಷ್ಟಿಯೇ ಅಡಗಿದೆ. ಹಾಗೆ 'ಕಲೆಗಾಗಿ ಕಲೆ'ಯೆಂಬ ಮಾತು ಅತ್ಯಂತ ಮೂರ್ಖತನದಿಂದ ಕೂಡಿದ್ದು, ಎನ್ನುತ್ತಾನೆ.

ಔದ್ಯೋಗಿಕ ಕ್ರಾಂತಿಯ ನಂತರದ ಬದಲಾದ ಸಾಮಾಜಿಕ, ಸಾಂಸ್ಕೃತಿಕ ಸಂದರ್ಭದಲ್ಲಿ ಕಲೆಯ ಕುರಿತಾದ ವಿಚಾರಗಳೂ ಸಮಾಜವಾದೀ ತತ್ತ್ವದ ಹಿನ್ನೆಲೆಯಲ್ಲಿಯೇ ರೂಪಿತವಾದವು. ಸಾಮಾಜಿಕ ಪರಿವರ್ತನೆಯಲ್ಲಿ ಸಾಹಿತ್ಯ, ಕಲೆಗಳ ಪಾತ್ರವನ್ನು ಮನಗಂಡು ಅದಕ್ಕನುಗುಣವಾಗಿಯೇ ಅವುಗಳ ಸ್ವರೂಪ, ಉದ್ದೇಶಗಳನ್ನು ರೂಪಿಸಿದ ಮಾರ್ಕ್ಸ್‌ವಾದವು ಕಲೆ, ಸಾಹಿತ್ಯ ಮೊದಲಾದ ಪರಿಸರಗಳೆಲ್ಲವೂ ಸಾಮಾಜಿಕ ಏಳಿಗೆಗಾಗಿಯೇ ಎನ್ನುತ್ತದೆ. ಕಲೆಯನ್ನು ಸಾಮಾಜಿಕ ಪ್ರಜ್ಞೆಯ ಅಭಿವ್ಯಕ್ತಿ ಮತ್ತು ಈ ಜಗತ್ತನ್ನು ವ್ಯಾವಹಾರಿಕವಾಗಿ, ಸಾಂಸ್ಕೃತಿಕವಾಗಿ ಗ್ರಹಿಸಿದುದರ ಫಲವೆಂದು ಒಪ್ಪಿಕೊಳ್ಳುತ್ತದೆ. ಕಲೆ ಮತ್ತು ಕಲಾನುಭವವು ಅಲೌಕಿಕಾನುಭವವಾಗಿ ಸಾಮಾಜಿಕ ಹೊಣೆಗಾರಿಕೆಯಿಂದ ಪಲಾಯನ ಹೂಡಿದ ಸಂದರ್ಭದಲ್ಲಿ ಮಾರ್ಕ್ಸ್‌ವಾದವು ಕಲಾತತ್ತ್ವವನ್ನು, ಆ ಮೂಲಕ ಕಲೆಯನ್ನು ಪರಿಷ್ಕರಿಸಿ, ಅದಕ್ಕೆ ಸಾಮಾಜಿಕ ಹೊಣೆಗಾರಿಕೆಯನ್ನು ಆರೋಪಿಸಿ, ಕಲಾಕೃತಿಯನ್ನು ಅದು ಪಡೆದ ಸಾಮಾಜಿಕ ಮಹತ್ವದಿಂದಲೇ ಗುರುತಿಸಬೇಕೆಂಬ ನಿಲುವನ್ನು ತಳೆಯಿತು. ಕೃತಿಯೊಂದರ ಕೇಂದ್ರ ಧೋರಣೆಯ ಆಳ ಹರಹುಗಳಿಂದಲೇ ಅದರ ಕಲಾತ್ಮಕ ಮೌಲ್ಯ ನಿರ್ಣಯವಾಗುತ್ತದೆನ್ನುತ್ತದೆ ಮಾರ್ಕ್ಸ್‌ವಾದ.

ರಷ್ಯನ್ ಸಮಾಜವಾದೀ ಅಥವಾ ಭೌತಿಕವಾದೀ ಕಲಾ ತತ್ತ್ವವು ಬದುಕಿಗೆ ಪ್ರಧಾನವಾದ ಸ್ಥಾನವನ್ನು ಕಲ್ಪಿಸಿದೆ. ಕಲೆಗೆ ಸಂಬಂಧಿಸಿದ ಯಾವುದೇ ಅಂಶವೂ ಅಲ್ಲಿ ಜೀವನದ ಶ್ರೇಯಸ್ಸಿನ ಗುರಿಯಿಟ್ಟುಕೊಂಡೇ ಮೂಡಿಬರಬೇಕಾಗಿದೆ. ಪ್ರತಿಯೊಂದರ ಹೊರ ಸೌಂದರ್ಯಕ್ಕಿಂತ ಮುಖ್ಯವಾಗಿ ಆಂತರಿಕ ಸೌಂದರ್ಯಕ್ಕೆ ಹೆಚ್ಚಿನ ಮಹತ್ವವನ್ನು ನೀಡಲಾಗಿದೆ. ಸೌಂದರ್ಯವೆಂದರೇನೆಂದು ಗಂಭೀರ ಚಿಂತನೆಯನ್ನು ಮಾಡಿದ ಪ್ರಸಿದ್ಧ ವಿಮರ್ಶಕ ಚೆರ್‌ನಿಶೇವ್‌ಸ್ಕಿ, ನಮ್ಮ ನಂಬುಗೆಯ ಕಲ್ಪನೆಯ ಬದುಕನ್ನು ಯಾವುದು ಸಾಕ್ಷಾತ್ಕರಿಸುವುದೋ ಅಥವಾ ಅದರ ಬಗೆಗಿನ ಪ್ರಜ್ಞೆ, ಕಾಳಜಿಯನ್ನು ಮೂಡಿಸುವುದೋ ಅದೇ ಸೌಂದರ್ಯವೆನ್ನುತ್ತಾನೆ. ಇಲ್ಲಿ ಸೌಂದರ್ಯಕಲ್ಪನೆಯೊಂದಿಗೆ ಉದಾತ್ತ ಜೀವನದೃಷ್ಟಿಯೂ ಸೇರಿ ಉಂಟಾದ ಅಪೂರ್ವ ತಾತ್ತ್ವಿಕ ನಿಲುವು ಕಂಡು ಬರುತ್ತದೆ.

ಲೆನಿನ್‌ನ ದೃಷ್ಟಿಯು ಕಲೆ, ಸಾಹಿತ್ಯದಿಂದ ಸಾಧಿಸ ಬಹುದಾದ ಸಾಮಾಜಿಕ ಪರಿವರ್ತನೆಯ ಕುರಿತಾಗಿದೆ. ಮಾನವಪ್ರಜ್ಞೆಯು ಹೊರಜಗತ್ತನ್ನು ತನ್ನ ವಿಚಾರ, ಕೃತಿಯ ಮೂಲಕ ಕೇವಲ ಪ್ರತಿಬಿಂಬಿಸುವ ದರ್ಪಣ ಮಾತ್ರವಾಗಿರದೆ, ಸೂಕ್ಷ್ಮ ಸಂಸ್ಕಾರವನ್ನು ಮೂಡಿಸುವುದರ ಮೂಲಕ ಮಾನಸಿಕ ಪರಿವರ್ತನೆಯನ್ನು ಸಾಧಿಸಬಲ್ಲ, ಹೊಸ ಪ್ರಜ್ಞೆಯನ್ನು ಹುಟ್ಟಿಸಬಲ್ಲ ಸೃಷ್ಟಿಕರ್ತನಾಗಿದೆಯೆಂಬ ಭಾವನೆ ಅವನದಾಗಿದೆ.

'ಜೀವನಸತ್ಯ' ಮತ್ತು 'ಕಲಾಸತ್ಯ'ಗಳು ಬೇರೆ ಬೇರೆಯಲ್ಲವೆನ್ನುವುದರ ಅರ್ಥ ಸತ್ಯ ಎರಡಲ್ಲ, ಅದು ಯಾವಾಗಲೂ ಒಂದೇ ಎಂಬುದಾಗಿದೆ. ಕಲಾಸತ್ಯವು ಬದುಕಿನಿಂದಲೇ ಪಡೆದ ಸತ್ಯವಾಗಿದ್ದು ಕಲಾಮಾಧ್ಯಮದಲ್ಲಿ ಅದು ಅಭಿವ್ಯಕ್ತಗೊಂಡಿದೆ (**ತೌ.ಕಾ.ಮೀ.** ಪು. ೫೬೧ - ೫೬೨ ರಲ್ಲಿ ಉದ್ಧೃತ) ಎನ್ನುವಲ್ಲಿ ಕಲೆ ಮತ್ತು ಬದುಕಿನ ಅದ್ವೈತವನ್ನು ಕಾಣಬಹುದು. ಕಲೆ ತನಷ್ಟಕ್ಕೆ ತಾನು ಸ್ವಯಂಪೂರ್ಣ ಅಥವಾ ಕಲೆಗಾಗಿ ಕಲೆ ಎನ್ನುವ ಹುಚ್ಚುತನದ ಪರಮಾವಧಿಗೆ ತದ್ವಿರುದ್ಧವಾದ ಪೂರ್ಣ ಜೀವನದೃಷ್ಟಿ ಮತ್ತು ಸೃಷ್ಟಿಗಳ ಸಮರಸ ಐಕ್ಯಭಾವನೆ ಅದು.

**ರಾಜಶೇಖರ ರಾಮಣ್ಣ ಬಲ್ಲಪ್ಪ**
೬೫೩, ೧೨ನೇ ಬಿ ಮುಖ್ಯರಸ್ತೆ, ಇ. ಡಬ್ಲ್ಯೂ. ಎಸ್. ೨ನೇ ಹಂತ
ಯಲಹಂಕ ಉಪನಗರ, ಬೆಂಗಳೂರು - ೬೪.

**ಬೆಳಗು**

ಅಮೃತವ ತುಂಬು
ನನ್ನೀ ಹೃದಯ ಬಟ್ಟಲಲಿ !
ನಿನ್ನ ಪ್ರಕಾಶಮಯ ಚೆಲುವಿನಿಂದ
ಈ ನಭವ ಈ ಬುವಿಯ
ಬೆಳಗು ಓ ! ಸಖಿ !

**ಡಾ. ಪಂಚಾಕ್ಷರಿ ಹಿರೇಮಠ**
ಜಯನಗರ, ಧಾರವಾಡ - ೧

# ಕಾಂಪಿಟಿಶನ್

ಅವನು ನನ್ನ ಗೆಳೆಯನಾಗಿದ್ದ. ಅಂದರೆ ಪ್ರೌಢಶಾಲೆಯಲ್ಲಿ ನಾವಿಬ್ಬರೂ ಕೊನೆ ಬೆಂಚಿನ ಮೇಲೆ ಕೂತು ನಾಲ್ಕು ವರ್ಷ ಕಲಿತು ಪಾರಾಗಿದ್ದೆವು.

ಬಾಲ್ಯದಲ್ಲಿ, ಅಂದರೆ ಎಂಟನೇ ವರ್ಗದಲ್ಲಿದ್ದಾಗ ಶಾಲೆಯ ಪ್ರವೇಶದ್ವಾರದಲ್ಲೇ ತನ್ನ ಕಜ್ಜಿಯ ಕೈಗಳನ್ನು ಮುಂದೆ ಚಾಚಿ ''ಹೇಳು ಶಕ್ತಿ ಶ್ರೇಷ್ಠವೋ ಯುಕ್ತಿಯೋ ?'' ಎಂದು ಕೇಳಿದ್ದ. ನಾವು ಒಂದೇ ಬೆಂಚಿನ ಮೇಲೆ ಹೇಗೆ ಕೂತೆವೋ ದೇವರಿಗೊತ್ತು! ಆದರೆ ಅನಂತರ ಅವನು ನನ್ನೊಂದಿಗೆ ಸರಿಯಾಗಿ ಹೊಂದಿಕೊಂಡಿದ್ದ.

ನನ್ನ ಗೃಹಪಾಠದ ನೋಟ್ಸುಗಳನ್ನು ಒಯ್ಯುತ್ತಿದ್ದ. ''ಮುಂದಿನ ವರ್ಷ ಪಾಸಾದರೆ ನಾನು ಪಾರಾದ ಹಾಗೆ'' ಎಂದು ನೋಟ್ಸ್ ತಿರುಗಿ ಕೊಡುವಾಗ ಹೇಳುತ್ತಿದ್ದ. ಪ್ರತಿಸಲ ಅವನು ಹೇಳುವ ದ್ರುಪದದಂತಹ - ಈ ವಾಕ್ಯ ನನಗಿನ್ನೂ ನೆನಪಿದೆ.

ಅನಂತರ ಅವನು ಶಿಕ್ಷಣ ಮುಂದುವರಿಸಲಿಲ್ಲ. ಯಾಕೆಂದರೆ ಎಂಟು ಸೋದರ, ಇಬ್ಬರು ಸೋದರಿಯರಿದ್ದ ಆ ಮನೆಯಲ್ಲಿ ಅವನದು ಮೂರನೇ ನಂಬರು. ನನ್ನ ತಂದೆ ಮಾಮಲೇದಾರನಾಗಿದ್ದರಿಂದ ನಾನು ಶಿಕ್ಷಣ ಮುಂದುವರೆಸಿದೆ.

ಅವನು ಮಾತ್ರ ಪ್ರತಿ ರವಿವಾರ ಮನೆಗೆ ಬರುತ್ತಿದ್ದ. ಆಗಾಗ ಜನಸಂದಣಿಯಿದ್ದ ರಸ್ತೆಯಲ್ಲೂ ಕಾಣಸುತ್ತಿದ್ದ. ಆಗ ತಟ್ಟನೆ ಸೈಕಲ್ ನಿಲ್ಲಿಸಿ ಇಳಿಯುತ್ತಿದ್ದ. ಆಗ ಮೊದಲೇ ಇಸ್ತ್ರೀ ಇಲ್ಲದ ಅವನ ಪ್ಯಾಂಟು ಮತ್ತಷ್ಟು ಮುದುಡಿ ಕೊಳ್ಳುತ್ತಿತ್ತು. ಒಮ್ಮೊಮ್ಮೆ ಬಾರ ಮೇಲೆ ಕೂತು ನೆಲಕ್ಕೆ ಕಾಲು ಹಚ್ಚಿ ನಿಲ್ಲುತ್ತಿದ್ದ. ''ನನ್ನ ಎತ್ತರ ಕಡಿಮೆ; ಅಲ್ಲದೆ ಮಾತಾಡಿದ ನಂತರ ಸೈಕಲ್ ತುಳಿದು ಮುಂದೆ ಹೋಗಲು ಅನುಕೂಲವೂ ಆಗುತ್ತದೆ'' ಎಂಬ ಸ್ಪಷ್ಟೀಕರಣ ನೀಡುತ್ತಿದ್ದ. ನನ್ನ ಎತ್ತರವನ್ನು ಕಂಡು ಇವನು ಹಂಗಿಸುತ್ತಿದ್ದಾನೆಂದು ಸಿಟ್ಟು ಬರುತ್ತಿತ್ತು.

ಆದರೆ ರವಿವಾರ ಬರುವಾಗ ಇಸ್ತ್ರೀ ಬಟ್ಟೆ ಧರಿಸಿಯೇ ಬರುತ್ತಿದ್ದ. ಅವನಿಗೆ ಈಗ ಸಂಸಾರದ ಹಲವು ಸಂಗತಿಗಳು ತಿಳಿದಿದ್ದವು. ಇದನ್ನೆಲ್ಲ ಅಮ್ಮನಿಗೆ ಹೇಳುತ್ತಿದ್ದ. ''ಮನೆ ಮಂದಿಗಾಗಿ ಎಷ್ಟೆಲ್ಲ ಒದ್ದಾಡುತ್ತಾನೆ ಪಾಪ ! ಬಹಳ ಬುದ್ಧಿವಂಥ. ಚೆನ್ನಾಗಿ ವ್ಯಾಪಾರ ಮಾಡ್ತಿರಬೇಕು.'' ಅವನು ಹೊರಟುಹೋದ ಬಳಿಕ ಅಮ್ಮ ಹೇಳುತ್ತಿದ್ದಳು.

ಅವನನ್ನು ಹೊಗಳುವುದು ನನಗೆ ಸೇರುತ್ತಿರಲಿಲ್ಲ ಎಂದಲ್ಲ. ಒಮ್ಮೆ ಅವನು ತನ್ನ ರೋಗಿಯಾದ ತಂದೆಯ ವಾಂತಿಯಲ್ಲಿ ಹೊರಬಿದ್ದ ಜಂತುಗಳ ಬಗ್ಗೆ ವಿವರಿಸಿದ್ದ. ನೆನಪಾದರೆ ಮೈ ನವಿರೇಳುತ್ತಿತ್ತು. ಹೊಟ್ಟೆ ತೊಳಸಿ ಬಂದಂತಾಗುತ್ತಿತ್ತು. ಬೆವರುವ ಕಾಲು ಬೂಟು ಹಾಕಿ ಕೊಂಡಾಗ ಅಂಟು ಅಂಟಾದಂತೆನಿಸುತ್ತಿತ್ತು.

ನಾನು ಕಾಲೇಜಿನ ಅನೇಕ ಮೋಜಿನ ಸಂಗತಿಗಳನ್ನು, ನಾನು ಗಳಿಸಿದ ಅಂಕಗಳನ್ನು ಹೇಳಿದಾಗ ಅವನು ಅಸಮಾಧಾನಗೊಳ್ಳುತ್ತಿರುವುದು ಗಮನಕ್ಕೆ ಬಂತು. ಇದನ್ನೆಲ್ಲ ರೆಪ್ಪೆ ಫಡಫಡಿಸುತ್ತ ಅವನು ಕೇಳುತ್ತಿದ್ದ. ಅವನು ನನ್ನ ಅಮ್ಮನೊಂದಿಗೆ ಮಾತಾಡುವಾಗಲೂ ಹೀಗೆಯೇ ಮಾಡುತ್ತಿರುವುದು ನನ್ನ ಗಮನಕ್ಕೆ ಬಂತು. ಅವನು ರೆಪ್ಪೆ ಫಡಫಡಿಸುವುದು ಮಾತ್ರ ನನ್ನ ಮನಸ್ಸಿನಲ್ಲಿ ಆಳವಾಗಿ ಬೇರೂರಿದ್ದು ಸತ್ಯ. ಅಮ್ಮ ಬತ್ತಿ ಹೊಸೆಯುತ್ತ ಕೂಡುವುದರಿಂದ ಆಕೆಯ ಗಮನಕ್ಕೆ ಅದು



ಬಂದಿರಲಿಕ್ಕಿಲ್ಲ. ಇದು ಯೋಗಾಯೋಗವೋ ಅಥವಾ ಅಮ್ಮ ಬತ್ತಿ ಹೊಸೆಯುವ ಸರಿಯಾದ ಕಾಲಕ್ಕೋ ಅವನು ಬರುತ್ತಿರಬೇಕು. ಅಮ್ಮನೋ ಪ್ರತಿ ರವಿವಾರ ಬತ್ತಿ ಹೊಸೆಯುತ್ತಾಳೆ. ಅಷ್ಟೆಲ್ಲ ಬತ್ತಿಯ ಅವಶ್ಯಕತೆಯಿದೆಯೋ ?

ನಾನು ಮನೆಯಲ್ಲಿ ಬಹಳ ಮಾತಾಡುವುದಿಲ್ಲ. ಆದರೆ ಪರೀಕ್ಷೆಯಲ್ಲಿ ಹೆಚ್ಚು ಅಂಕಗಳನ್ನು ಗಿಟ್ಟಿಸಿ ಕ್ಲಾಸು ಗಳಿಸುತ್ತಿದ್ದೆ. ಹೀಗಾಗಿ ಮನೆಯವರು ನನ್ನ ಬೇಡಿಕೆಗಳನ್ನು ಪೂರೈಸುತ್ತಿದ್ದರು. ಮೌನಕ್ಕೆ ಬುದ್ಧಿವಂತಿಕೆಯ ಮಾನ್ಯತೆ ದೊರಕಿತ್ತು.

ನನ್ನ ತಂದೆ ನಡುಮನೆಯ ಆರಾಮ ಕುರ್ಚಿಯಲ್ಲಿ ಕೂತು ಸಿಗರೇಟು ಸೇದುತ್ತ ಅಮ್ಮನೊಂದಿಗೆ ಹರಟೆ ಹೊಡೆಯುತ್ತಿದ್ದ, ಆಫೀಸಿನ ಜೋಕ್‌ಗಳನ್ನು ಹೇಳಿ ನಗಿಸುತ್ತಿದ್ದ.

ನಾನು ಮಧ್ಯಾಹ್ನ ಮನೆಗೆ ಬಂದಾಗ ಅಪ್ಪ ಅವಲಕ್ಕಿ ತಿನ್ನುತ್ತ ಕೂತಿದ್ದ. ನಾನು ಕೈ ಕಾಲು ತೊಳೆದು ಬಂದ ಬಳಿಕ ಅಮ್ಮ ನನಗೂ ಒಂದು ಪ್ಲೇಟ್ ಅವಲಕ್ಕಿ ನೀಡಿದಳು. ಸ್ಟೋ ಮೇಲೆ ಕಾಫಿಗೂ ನೀರಿಡಲಾಯಿತು.

ಅಷ್ಟರಲ್ಲಿ ನನ್ನ ಗೆಳೆಯ ರಾಮ ಬಂದ. ಅಮ್ಮ ಅವನಿಗೆ ಮಣೆ ನೀಡಿ ಕೂತುಕೊಳ್ಳುವಂತೆ ಸೂಚಿಸಿದಳು (ಇತ್ತೀಚೆಗೆ ರಾಮ ಮನೆಯವರಿಗೆ ನನಗಿಂತಲೂ ಹೆಚ್ಚು ಆತ್ಮೀಯನಾಗಿದ್ದ ). ಅವನು ಮಣೆ ಮೇಲೆ ಕೂತ. ಅಮ್ಮ ಅವನಿಗೂ ಅವಲಕ್ಕಿ ನೀಡಿದಳು. ತಿಂದು ಚಹಾನೂ ಸೇವಿಸಿದ. ಅನಂತರ ಅವನು ತಾನು ತಂದ ಕಾಗದದ ಸುರುಳಿ ಬಿಚ್ಚಿದ. ನಮ್ಮೆದುರು ನೆಲದ ಮೇಲಿಟ್ಟು ಪಸರಿಸಿದ. ಅವನು ಅದರ ಮೇಲೆ ಆಲದ ಮರದ ಬಣ್ಣದ ಚಿತ್ರ ಬಿಡಿಸಿದ್ದ. ಬರೇ ಆಲದ ಮರದ ಚಿತ್ರ. ಹಿಂಬದಿಗೆ ಮೋಡಗಳಿಲ್ಲ. ಕೆಳಗೆ ಬೇರೂ ಇಲ್ಲ. ನೆಲವೂ ಇಲ್ಲ. ಆದರೆ ಬೃಹದಾಕಾರದ ಮರ ನಮ್ಮೆದುರಿಗೆ ನಿಂತಂತೆ ಭಾಸವಾಗುತ್ತಿತ್ತು.

ಅಪ್ಪ-ಅಮ್ಮನ ಗಮನಕ್ಕಿದು ಬಂತೋ ಇಲ್ಲವೋ ಯಾರಿಗ್ಗೊತ್ತು. ಆದರೆ ಅವರಿಬ್ಬರೂ ಇದನ್ನು ಬಹಳ ಹೊಗಳಿದರು. ಅವನು ನಕ್ಕ. ಅವನು ಹೊರಬಿದ್ದ ಕೆಲಕ್ಷಣಗಳಲ್ಲಿ ನಾನೂ ಹೊರಬಿದ್ದೆ. ಅವನು ವೇಗವಾಗಿ ನಡೆಯುತ್ತಿದ್ದ. ಆದರೂ ನಾನವನನ್ನು ಕೂಡಿಕೊಂಡೆ.

''ರಾಮ, ನಿಜವಾಗಿಯೂ ನೀನು ಬರೆದ ಚಿತ್ರ ಚೆನ್ನಾಗಿತ್ತು''. ಅವನು ಕೊಟ್ಟ ಬಣ್ಣ ನನಗೆ ಹಿಡಿಸಿತ್ತು.

''ಸೈಕಲ್ ಪಂಕ್ಚರ್ ತೆಗೆಯುವಾಗ ಚಿತ್ರ ಬಿಡಿಸಬೇಕೆಂಬ ಮನಸ್ಸಾಯಿತು.''

''ಆದರೂ ಇದಕ್ಕೊಂದು ಪಾರ್ಶ್ವಭೂಮಿ'' - ಎಂದು ಕೇಳಬೇಕೆನಿಸಿತು. ಆದರೆ ಕೇಳಲಿಲ್ಲ.

''ಈ ಮೊದಲು ನೀನೆಂದೂ ಚಿತ್ರಕಲೆಯಲ್ಲಿ ಇಷ್ಟೊಂದು ಆಸಕ್ತಿ ತೋರಿಸಿರಲಿಲ್ಲ'' ಎಂದು ಕೇಳಿದೆ. ಆಗ ನಾನು ಪ್ರೌಢನಂತೆ ಮಾತಾಡುತ್ತಿದ್ದೆನೇನು ?

ಆದರೆ ನಾವೀಗ ವಯಸ್ಸಿನಿಂದ ದೊಡ್ಡವರಾಗಿದ್ದಂತೂ ನಿಜ. ನಾನಂತೂ ಕಾಲೇಜಿನ ನಾಲ್ಕನೇ ವರ್ಷದಲ್ಲಿದ್ದೆ.

ಒಮ್ಮೆ ಅವನ ತಂದೆ ತೀವ್ರರೋಗದಿಂದ ಬಳಲುತ್ತಿರುವುದು ಗೊತ್ತಾಗಿ, ಅಮ್ಮನ ಆಗ್ರಹದ ಮೇರೆಗೆ ನಾನವನ ಮನೆಗೆ ಹೋದೆ. ಅವನ ಪರಿಸ್ಥಿತಿಗಿಂತಲೂ ಅವನ ಮನೆ ಚೆನ್ನಾಗಿತ್ತು. ಮನೆ ಕಾಂಕ್ರೀಟಿನದು. ಎರಡನೆಯದಾಗಿ ಛಾವಣಿ ಸಾಕಷ್ಟು ಎತ್ತರವಾಗಿತ್ತು. ಅದೊಂದು ಸಭಾಗೃಹ ದಂತೆ ಕಾಣುತ್ತಿತ್ತು. ಅದರ ದುಷ್ಪರಿಣಾಮವೇನೆಂದರೆ ಮನೆಯೊಳಗಿನ ಜನ ಕುಬ್ಜರಂತೆ ಕಾಣಸುತ್ತಿದ್ದರು.

ಮರಾಠಿ ಮೂಲ : **ಶಾಮ ಮನೋಹರ**

ಮೂಲೆಯ ಮಂಚದ ಮೇಲೆ ಮೈತುಂಬ ಹೊದಿಕೆ ಹೊದ್ದುಕೊಂಡು ಅವನ ತಂದೆ ಮಲಗಿದ್ದರು. ಮುಖ ಮಾತ್ರ ಕಾಣುವಂತೆ ಸ್ಕಾರ್ಫ್ ಸುತ್ತಲಾಗಿತ್ತು.

ನಾನು ಹೆಚ್ಚೇನು ಮಾತಾಡಲಿ ? ನನ್ನ ಬದಿಗೆ ರಾಮ ನಿಂತಿದ್ದ. ಅವನ ಹಿರಿಯಣ್ಣ ತಂದೆಯ ರೋಗದ ವಿವರ ನೀಡುತ್ತಿದ್ದ. ಕ್ಯಾನ್ಸರ್ ರೋಗ ಅತ್ಯಂತ ಭೀಕರ ಎನ್ನುವುದು ನನಗೆ ಮೊದಲೇ ತಿಳಿದಿತ್ತು.

ಹೊರಗೆ ಬಂದ ಮೇಲೆ ರಾಮ ಹೇಳಿದ, ''ಅವನು ನನ್ನ ಹಿರಿಯ ಅಣ್ಣ. ನಿನಗೆ ನಮ್ಮ ಮನೆಯ ವಿಷಯವನ್ನೆಲ್ಲ ಹೇಳುವ ಸಂದರ್ಭವೇ ಬರಲಿಲ್ಲ. ಅವನಿಗೂ ಅಸ್ತಮಾ ಇದೆ. ತಪ್ಪೆಲ್ಲಾದರೂ ಅಟ್ಯಾಕ್ ಬಂದರೆ, ಮುಗಿದೇ ಹೋಯ್ತು!'' ಅವನ ಮುಖದ ಮೇಲೆ ಭೀತಿಯ ಛಾಯೆ ಗೋಚರಿಸಿತು. ನನ್ನ ದೇಹವೂ ಸಹ ನವಿರೆದ್ದಿತು. ಅಷ್ಟರಲ್ಲಿ ಹೈಸ್ಕೂಲಿಗೆ ಹೋಗುವ ಅವನ ಇಬ್ಬರು ಸೋದರರು ಅಲ್ಲಿಗೆ ಬಂದರು. ನಾನು ಸಂಕೋಚಗೊಂಡೆ. ಅನಂತರ ಮನೆಗೆ ಮರಳಿದೆ.

ಅಮ್ಮನಿಗೆ ಹೇಳಿದೆ, ''ನಾನು ಅವರಪ್ಪನನ್ನು ಭೆಟ್ಟಿಯಾಗಿ ಬಂದೆ. ಜಂಗು ಹಿಡಿದ ತಗಡಿನಂತೆ ಅವರ ಮುಖ ಕಾಣುತ್ತಿತ್ತು. ಅವನ ಮನೆಯ ಜನರೆಲ್ಲ ರೋಗಿಗಳಂತೆ ಕಾಣ್ತಾರೆ. ರಾಮನ ಮುಖ ಉದಾಸೀನವಾಗಿದೆ. ನನಗಿದು ಹಿಡಿಸುವುದಿಲ್ಲ.''

ಅಮ್ಮ ಕೆರಳಿದಳು, ''ನಿಂಗೇನು ! ಅವನ ಮನಸ್ಸಿನ ದುಃಖ ಅವನಿಗೇ ಗೊತ್ತು. ಹಾಗೆ ನೋಡಿದರೆ ನಿನಗೆ ಯಾವ ಚಿಂತೆಯೂ ಇಲ್ಲ...''

''ನೀನು ಆಕೆಯ ಮಾತಿನ ಕಡೆ ಬಹಳ ಲಕ್ಷ್ಯ ಕೊಡಬೇಡ. ಸರಿಯಾಗಿ ಅಭ್ಯಾಸ ಮಾಡು. ನಿನಗೇನಾದರೂ ಬೇಕಾದರೆ ನನಗೆ ಕೇಳು...'' ಎಂದು ಹಿಂದೊಮ್ಮೆ ಅಪ್ಪ ಹೇಳಿದ ಮಾತು ನೆನಪಾಯಿತು. ಹೀಗಾಗಿ ಅಭ್ಯಾಸ ಹೊರತುಪಡಿಸಿ ನಾನು ಉಳಿದ ಕಡೆ ಲಕ್ಷ್ಯ ಹಾಕುವುದಿಲ್ಲ.

ಈಗ ಇನ್ನೊಂದು ಕಡೆ ಲಕ್ಷ್ಯ ಹಾಕುತ್ತಿದ್ದೇನೆ. ಅದೆಂದರೆ, ವೃಂದಾ ಎಂಬ ಹುಡುಗಿ ಕಡೆ. ಮುದ್ದಾದ ಹುಡುಗಿ. ಮೆಡಿಕಲ್ ಓದುತ್ತಿದ್ದಾಳೆ. ಹಾಸ್ಟೆಲಿನಲ್ಲಿರ್ತಾಳೆ.

ಆಕೆಯೊಮ್ಮೆ ತಕರಾರು ಮಾಡುತ್ತ ಹೇಳಿದ್ದಳು. ''ಪ್ರಭು, ನಾವೀಗ ಪ್ರತಿ ರವಿವಾರ ಭೆಟ್ಟಿಯಾಗೋಣ. ಸಂಪೂರ್ಣ ಸಂಡೇ ಎಂಜಾಯ್ ಮಾಡೋಣ.''

ಪರಿಣಾಮ ಏನಾಯಿತೆಂದರೆ, ರವಿವಾರ ರಾಮನ ಭೆಟ್ಟಿ ತಪ್ಪಿತು. ಆದರೆ ಅವನ ರಿಪೋರ್ಟನ್ನೆಲ್ಲ ಅಮ್ಮ ನೀಡುತ್ತಿದ್ದಳು, ಅದೂ ನಾನು ಉಣ್ಣುವಾಗ. ಆಗ ಇಡೀ ರವಿವಾರದ ಮಜವೆಲ್ಲ ಹಾಳು.

ಏನೇ ಆಗಲಿ, ವೃಂದಾಳ ಜತೆ ದಿನ ಕಳೆಯುವುದೆಂದರೆ ಏನೋ ಮಜ.

ನನ್ನ ಗಮನವೆಲ್ಲ ರವಿವಾರದ ಮೇಲೆಯೇ. ಆದರೂ ನಾನು ಅಭ್ಯಾಸ ಚೆನ್ನಾಗಿಯೇ ಮಾಡುತ್ತಿದ್ದೆ. ಪರಿಣಾಮ ಬಿ.ಎ. ಫಸ್ಟ್‌ಕ್ಲಾಸಿನಲ್ಲಿ ಪಾಸ್ !

ಎಂ.ಎ.ಗೆ ಪ್ರವೇಶ ಪಡೆದ ಬಳಿಕ ನಾನು ವೃಂದಾಳನ್ನು ಮನೆಗೆ ಕರೆದೊಯ್ದೆ. ಆಕೆಯ ಪರಿಚಯವನ್ನು ಮಾಡಿಕೊಟ್ಟೆ. ನಾನು ಎಂ.ಎ. ಮುಗಿಸಿದಾಗ, ವೃಂದಾ ಮೆಡಿಕಲ್ ಮುಗಿಸುತ್ತಾಳೆ, ನಾನಾಗ ಆಕೆಯನ್ನು ಮದುವೆ ಯಾಗುತ್ತೇನೆಂದು ಸೂಟ್ ಧರಿಸಿದಾಗೊಮ್ಮೆ ಡಿಕ್ಲೇರ್ ಮಾಡಿಯೂಬಿಟ್ಟೆ !

ವೃಂದಾಳ ಮನೆಯವರಿಗೂ ಒಪ್ಪಿಗೆಯಾಯ್ತು.

ಅನಂತರ ನಾವು ಹಕ್ಕಿನಿಂದ ರವಿವಾರ ತಿರುಗಾಡಲಾರಂಭಿಸಿದೆವು. ನಾವೆಂದೂ ನೀತಿಯನ್ನು ಮೀರಿ ವರ್ತಿಸಲಿಲ್ಲ. ನಮ್ಮ ಎಂಜಾಯ್‌ಮೆಂಟು ಮರ್ಯಾದೆಯ ಚೌಕಟ್ಟಿನಲ್ಲೇ ನಡೆಯುತ್ತಿತ್ತು. ನಮ್ಮ ಮನೆಯವರಿಗೂ ನಮ್ಮ ವರ್ತನೆ ಬಗ್ಗೆ ಅಚಲ ವಿಶ್ವಾಸವಿತ್ತು.

ಆ ರವಿವಾರ ಹನ್ನೆರಡರ ಮ್ಯಾಟನಿಗೆ ಹೋಗುವುದೆಂದು ನಾನು ಟಿಕೇಟ್ ಮೊದಲೇ ತರಿಸಿಟ್ಟಿದ್ದೆ. ಆದರೆ ಹನ್ನೆರಡು ಹೊಡೆದುಹೋದರೂ ವೃಂದಾ ಬರಲೇ ಇಲ್ಲ. ನಾನು ಕಸಿವಿಸಿಗೊಂಡು ಮನೆಯಲ್ಲಿ ಶತಪಥ ಹಾಕಲಾರಂಭಿಸಿದೆ !

ಅಷ್ಟರಲ್ಲಿ ರಾಮ ಬಂದ. ಇಷ್ಟು ದಿನ ವೃಂದಾಳ ನಿಮಿತ್ತದಿಂದ ನಾನವನನ್ನು ತಪ್ಪಿಸುತ್ತಿದ್ದೆ. ಅಮ್ಮನೂ ಸುಮ್ಮನಾಗಿದ್ದಳು. ನನ್ನ ಕ್ಷೇತ್ರ ಈಗ ಬೇರೆ ಅನ್ನೋದು ಅಮ್ಮನಿಗೂ ಅರಿವಾಗಿರಬೇಕು. ಹೀಗಾಗಿ ಅವರಿಬ್ಬರು ಮಾತನಾಡುವಾಗ ನಾನಿರುತ್ತಿರಲಿಲ್ಲ!

''ಹಿಂದಿನ ಎರಡೂ ರವಿವಾರ ಏಕೆ ಬರಲಿಲ್ಲ ?'' ರಾಮನನ್ನು ಕಂಡು ಅಮ್ಮ ಕೇಳಿದಳು. ತಕ್ಷಣ ರಾಮನ ಕಂಗಳು ತುಂಬಿಕೊಂಡವು. ಅವನು ಅಳಲಾರಂಭಿಸಿದ. ನಾನಂತೂ ದಿಗಿಲುಗೊಂಡೆ. ಅಮ್ಮನೂ ಚಕಿತಳಾಗಿ ನಿಂತಳು.

ಅಮ್ಮ ಅವನ ಬೆನ್ನಿನ ಮೇಲೆ ಕೈಯಾಡಿಸಿ ಸಮಾಧಾನಗೊಳಿಸಲೆಂಬ ಇಚ್ಛೆ ನನ್ನದು. ಆದರೆ ಯಥೇಚ್ಛವಾಗಿ ಅವನು ಕಣ್ಣೀರು ಸುರಿಸಿದ. ಅವನು ಮಣೆ ಮೇಲೆ ಕೂತು ಹೇಳಿದ, ''ಕಳೆದ ರವಿವಾರ ಅಪ್ಪ ಸತ್ತ.'' ಈಗವನು ಶುಷ್ಕ ನೋಟದಿಂದ ಸ್ಟೋ ದಿಟ್ಟಿಸುತ್ತಿದ್ದ. ಸ್ಟೋ ಮೇಲೆ ಚಹಾದ ನೀರು ಕುದಿಯುತ್ತಿತ್ತು. ಆದರೆ ಅಮ್ಮನಿಗೆ ಇದೆಲ್ಲ ಹೊಸದೆಂಬಂತೆ ಸುಮ್ಮನೆ ಇದ್ದಳು.

ನನಗೆ ಅಪರಾಧಿಯಂತೆನಿಸಿತು. ಯಾವುದೇ ಸಾವಿನ ಹಿನ್ನೆಲೆಯಲ್ಲಿ ನಮ್ಮ ತಪ್ಪು ಗೋಚರಿಸಿದರೆ ಅದನ್ನು ಸಮರ್ಥನೆ ಮಾಡಿಕೊಳ್ಳುವಷ್ಟು ಶಕ್ತಿ ನಮ್ಮಲ್ಲಿರುವುದಿಲ್ಲ!

ಗಲಿಬಿಲಿಗೊಂಡ ಅಮ್ಮ ಸುಧಾರಿಸಿಕೊಂಡಳು. ರಾಮನ ಎದುರಿಗೆ ಚಹಾದ ಕಪ್ಪು ಇಟ್ಟಳು. ನಾನೂ ಕಾಫಿಯ ಹಟ ತೊರೆದು ಚಹಾ ಸ್ವೀಕರಿಸಿದೆ.

ಕೊನೆಗೂ ಅಮ್ಮ ಬಾಯಿಬಿಟ್ಟಳು (ನನಗೂ ಸಮಾಧಾನವೆನಿಸಿತು) : ''ಅವರಿಗೆ ಕ್ಯಾನ್ಸರ್ ಆಗಿದೆಯಂತ ಪ್ರಭು ಹೇಳುತ್ತಿದ್ದ''.

''ಮೊದಲು ಕ್ಯಾನ್ಸರ್ ಎಂದೆ ಅಂದುಕೊಂಡಿದ್ವಿ. ಆದರೆ ಆಮೇಲೆ ಹೊಟ್ಟೆ ಉಬ್ಬಿತು. ಜಲೋದರ ಅಂತೆ !''

''ಅದೆಂಥ ಡಾಕ್ಟರಪ್ಪ? ಸರಿಯಾಗಿ ಪರೀಕ್ಷೆ ಮಾಡೋದು ಆಗಲಿಲ್ಲವೆ...'' ಅಮ್ಮ.

''ಕಳೆದ ನಾಲ್ಕು ತಿಂಗಳಿಂದ ಸಾಕಷ್ಟು ನೀರು ತೆಗೆಯಲಾಯಿತು. ಯಾತನೆಯಿಂದ ರೋಸಿಹೋದರು - ಅಂತೂ ಕೊನೆಗೊಮ್ಮೆ ಕೊನೆಯುಸಿರೆಳೆದರು !''

''ಆದರೆ ಎಂದೂ ಹೇಳಲೇ ಇಲ್ಲವಲ್ಲಾ ?''

''ಹೇಳಿ ಏನು ಉಪಯೋಗ ? ಪ್ರಭುವಿಗೆ ಮನೆ ಗೊತ್ತಿತ್ತು - ಆದರೆ ಬರಲಿಲ್ಲ'' ರಾಮ ಜೋರಾಗಿ ಉಸಿರು ಬಿಡುತ್ತಿದ್ದ. ಸ್ಟೋವಿನ ಫರ್ ಸಪ್ಪಳದಲ್ಲೂ ಅದು ಕೇಳಿಸಿತು. ಅವನು ನನ್ನ ಹೆಸರು ತೆಗೆದುಕೊಂಡಿದ್ದಕ್ಕೆ ಎದೆಯಲ್ಲಿ ಚುರ್ ಎಂದಿತು. ಜತೆಗೆ ಸಿಟ್ಟೂ ಬಂತು.

ಈಗ ಅಮ್ಮನ ಮುಖವೂ ಸಾಕಷ್ಟು ಗಂಭೀರ ಗೊಂಡಿತ್ತು !

ಅಷ್ಟರಲ್ಲಿ ವೃಂದಾ ಓಡೋಡಿ ಬಂದಳು. ಯಾರಿದ್ದಾರೋ ಇಲ್ಲವೋ ಎಂಬುದನ್ನು ನೋಡದೆ ಹೇಳಿದಳು, ''ಗೆಳತಿಯರು ಬಿಡಲು ಸಿದ್ಧರಿರಲಿಲ್ಲ. 'ಅವನೇ ಇಲ್ಲಿಗೆ ಬರ್ತಾನೆ ನೋಡ್ತಿರು' ಎಂದು ಪಂದ್ಯ ಕಟ್ಟಿ ಸೋತೆ - ಯಾಕೆ ಬರಲಿಲ್ಲ ?''

ಈ ವೃಂದಾಳಿಗಂತೂ ಏನೂ ತಿಳಿಯುವುದಿಲ್ಲ. ಚಿವುಟಿ ಸೂಚಿಸಬೇಕೆಂದಿದ್ದೆ. ಆದರೆ ರಾಮ ನಮ್ಮನ್ನೇ ನೋಡುತ್ತಿದ್ದ.

''ರಾಮ, ಇವಳೇ ಆ ವೃಂದಾ''. ಕೆಲ ಕ್ಷಣಗಳ ಬಳಿಕ ಅಮ್ಮನೇ ಹೇಳಿದಳು. ಇಂಥ ಪ್ರಸಂಗದಲ್ಲಿ ಯಾರಾದರೂ ಪರಿಚಯ ಮಾಡಿಕೊಡ್ತಾರೆಯೇ ? ಅಮ್ಮನಿಗೆ ಏನೂ ಗೊತ್ತಾಗುವುದಿಲ್ಲ, ವೃಂದಾಳೇನು ಮತ್ತೆ! ರಾಮನಿಗೆ ನಮಸ್ಕರಿಸಿ ನಸುನಕ್ಕಳು. ಪಾಪ, ರಾಮ ! ಅವನೂ ಶಿಷ್ಟಾಚಾರಕ್ಕಾಗಿ ನಕ್ಕು ನಮಸ್ಕರಿಸಿದ ! ''ಇವನು ಪ್ರಭೂನ ಬಾಲ್ಯದ ಗೆಳೆಯ. ಕಳೆದ ರವಿವಾರ ಅವನ ತಂದೆ ತೀರಿಕೊಂಡರಂತೆ'' ಅಮ್ಮ ಹೇಳಿದಳು. ಅಮ್ಮನಿಗೆ ಏನೂ ಅರ್ಥವಾಗುವುದೇ ಇಲ್ಲ. ಆದರೆ ವೃಂದಾ ಮಾತ್ರ ಗಂಭೀರಳಾದಳು. ನಾನೂ ಗಂಭೀರನಾದೆ. ಅನಂತರ ರಾಮ ಹಾಗೂ ಅಮ್ಮನೂ.

ಪರಿಸ್ಥಿತಿ ತಹಬಂದಿಗೆ ಬಂದಿರುವುದು ಕಂಡು ನನಗೂ ಸಮಾಧಾನವಾಯಿತು.

ಎಷ್ಟೋ ಹೊತ್ತಿನ ಬಳಿಕ ರಾಮ ಹೊರಡಲು ಸಿದ್ಧನಾದ. ನಾನವನಿಗೆ ತಲುಪಿಸಲು ರಸ್ತೆಗೆ ಬಂದೆ. ರಾಮ ಸಂತಗತಿಯಲ್ಲಿ ನಡೆಯುತ್ತಿದ್ದ. ಹೊರಟುಹೋಗುವ ಯಾವ ಸೂಚನೆಯೂ ಕಾಣಲಿಲ್ಲ. ಹೀಗಾಗಿ ನಾನೂ ಅವನ ಜೊತೆ ನಡೆಯಬೇಕಾಯಿತು.

''ಪ್ರಭು, ನಿನಗೆ ನನ್ನ ಹಿರಿಯಣ್ಣನ ನೆನಪಿದೆಯೇ ? ಅಸ್ತಮಾದವನು ? ಅವನಿಗೂ ಹೆಚ್ಚಾಗಿದೆ. ಎರಡನೇ ಸೋದರ ಎಂದೋ ಓಡಿಹೋದ. ಎಲ್ಲೋ ಕಾಟೇವಾಡಿಯಲ್ಲಿ ಇರ್ತಾನಂತೆ. ಹಿರಿಯಣ್ಣನ ದಮ್ಮು ಎಂದರೆ ಅಯ್ಯೋ, ರಾಮ !... ನನ್ನ ತಮ್ಮಂದಿರಂತೂ ಮವ್ವಾಲಿಯಾಗ್ತಾರೆ !'' ನಾನವನ ಮಾತು ಆಲಿಸುತ್ತಿದ್ದೆ. ಅವನು ಮುಂದುವರಿಸಿದ. ''ನಮ್ಮ ಮನೆಯಲ್ಲಿ ಯಾರಿಗೂ ಪ್ರೀತಿಯಿಲ್ಲ. ಆದರೆ ಇನ್ನೊಬ್ಬರ ಅಸ್ತಿತ್ವದ ಬಗ್ಗೆ ವಿಚಿತ್ರವಾದ ಕಾಳಜಿಯಿದೆ''. ರಾಮ ನನಗೆ ಗೊಂದಲವಾಗುವ ಎಂಥದೋ ಪೃಥಕರಣದ ಬಗ್ಗೆ ಹೇಳುತ್ತಿದ್ದ. ನಾನು ಕಾಳಜಿಯಿಂದ ಕೇಳುತ್ತಿದ್ದೆ. ರಾಮ ಹೇಳುತ್ತಿದ್ದ ''ನಮ್ಮಲ್ಲಿ ಇನ್ನೊಬ್ಬರ ಬಗ್ಗೆ ಎಂಥದೋ ತಾತ್ಸಾರ. ಆದರೂ ಯಾರನ್ನೂ ಬಿಡದಂಥ ಘನಿಷ್ಠ ಸಂಬಂಧ. ಬಹಳ ವಿಚಿತ್ರವಪ್ಪ ಈ ವೃತ್ತಿ !''

ರಾಮ ಇದಕ್ಕಿಂತಲೂ ಇನ್ನೂ ಸರಿಯಾಗಿ ಹೇಳಬಹುದಿತ್ತು. ಆದರೆ ನನ್ನ ಮಿದುಳು ಗುಂಗು ಹಿಡಿದಂತಾಗಿತ್ತು !

ನಾನು ರಾಮನನ್ನು ಸನಿಹದ ಹೋಟೆಲಿಗೆ ಕರೆದೊಯ್ದೆ. ಚಹಾ ತರಿಸಿದೆ.

''ತಂದೆ ಸಾವನ್ನು ಬಹಳ ಮನಸ್ಸಿಗೆ ಹಚ್ಚಿಕೊಂಡಂತೆ ಕಾಣಿಸುತ್ತದೆ.'' ನಾನು ಸಾಂತ್ವನದ ಮಾತು ಆಡಲಾರಂಭಿಸಿದೆ.

''ಅವರು ಬಹಳ ಸೋತಿದ್ದರು. ಅದೇನು ದೊಡ್ಡ ವಿಷಯವಲ್ಲ. ಆದರೆ ಈ ರೀತಿಯ ಬದುಕಿಗೇನು ಅರ್ಥವಿದೆ ? ಎಲ್ಲ ಅಸ್ತವ್ಯಸ್ತ. ಹಿರಿಯ ಅಣ್ಣಂದಿರು ಇಬ್ಬರು. ಆದರೆ ಏನೂ ಅರ್ಥವಿಲ್ಲ. ತಂಗಿಯರ ಮದುವೆ ಇನ್ನೂ ಇಲ್ಲ. ಉಳಿದ ತಮ್ಮಂದಿರಂತೂ ಪಕ್ಕಾ ಮವಾಲಿಗಳು. ಎಲ್ಲಾದರೂ ಓಡಿಹೋಗಿ ಅಂತ ಹೇಳಬೇಕು.''

ರಾಮ ಹೀಗೆ ಏನೇನೋ ಹೇಳಲಾರಂಭಿಸಿದ. ಅನಂತರ ಅವನ ಬಡಬಡಿಸುವಿಕೆ ಎಷ್ಟು ಅಸಂಬದ್ಧ ವಾಗಿತ್ತೆಂದರೆ ನಾನು ಲಕ್ಷ್ಯಕೊಡುವುದನ್ನೇ ಬಿಟ್ಟೆ.

ಮನೆಗೆ ಮರಳಿದೆ. ಅಪ್ಪ ಬಂದದ್ದೇ ಒಳ್ಳೆದಾಯ್ತು. ಆಧಾರ ಸಿಕ್ಕಂತಾಯಿತು. ಅಮ್ಮ ಮತ್ತೆಲ್ಲಿ ರಾಮನ ವಿಷಯ ತೆಗೆಯುತ್ತಾಳೇನೋ ಎಂಬ ಭೀತಿ ಮೂಡಿತು. ಆದರೆ ಮನೆಯಲ್ಲಿ ಮಾತ್ರ ಚೇಷ್ಟೆ, ವಿನೋದ ನಡೆದಿತ್ತು. ಅದರಲ್ಲಿ ಇವತ್ತು ಹೊರಗೆ ಹೋಗುವುದು ಬೇಡವೆಂದು ನಾನು ವೃಂದಾಳಿಗೆ ಹೇಳಿದೆ. ಯಾವ ಚರ್ಚೆಯೂ ನಡೆಯದೆ ಅದನ್ನು ಒಪ್ಪಿಕೊಳ್ಳಲಾಯಿತು.

ನಾನೀಗ ಬದುಕಿನ ಮಹತ್ವದ ಒಂದು ಹಂತ ದಾಟಿದ್ದೆ. ಫಸ್ಟ್‌ಕ್ಲಾಸ್ ಎಂ.ಎ ! ಜತೆಗೆ ಪಿಹೆಚ್.ಡಿ.ಗಾಗಿ ಸ್ಕಾಲರ್‌ಶಿಪ್. ವೃಂದಾನೂ ಖುಶಿಯಲ್ಲಿದ್ದಳು. ರಸ್ತೆಯಲ್ಲಿ ಭೆಟ್ಟಿಯಾದ ಪರಿಚಿತರನ್ನೆಲ್ಲ ನಿಲ್ಲಿಸಿ ಅವರೊಂದಿಗೆ ಮಾತಾಡುತ್ತಿದ್ದೆ.

ಹೀಗಿರುವಾಗ ರಾಮ ಎದುರಿಗೆ ಬಂದ. ಅವನು ಕಂಗ್ರ್ಯಾಜ್ಯುಲೇಶನ್ ಹೇಳಿದ, ''ನಡೆ, ಯಾವುದಾದರೊಂದು ಒಳ್ಳೆ ಹೋಟೆಲಿಗೆ ಹೋಗಿ ಟಿಫನ್ ಮಾಡೋಣ''. ನನ್ನ ಯಶಸ್ಸು ಕಂಡು ಅವನಿಗೆ ಆನಂದವಾಗಿದ್ದು ಕಂಡು ನನಗೂ ಸಂತೋಷವಾಯಿತು. ಖುಶಿಯಿಂದ ರೆಸ್ಟೋರೆಂಟ್‌ಗೆ ಹೋದೆವು.

ಶಿರಾ ತಿಂದು ಸ್ಪೆಶಲ್ ಟೀ ಸೇವಿಸಿದೆವು. ರಾಮ ಸಿಗರೇಟು ಹೊತ್ತಿಸಿದ. ನಾನೂ ಹೊತ್ತಿಸಿದೆ - ಮೊದಲ ಸಲ !

''ಪ್ರಭು, ನಿನಗೆ ಸ್ವಲ್ಪ ಆಕ್‌ವರ್ಡ್ ಅನಿಸಬಹುದು ನನ್ನ ಮಾತು. ಯಾರ ಬಗ್ಗೂ ಏನೂ ಅನಿಸದಂತಹ ಪ್ರಯೋಗದಲ್ಲಿ ನಾನು ಯಶಸ್ವಿಯಾದೆ.''

''ಅಂದರೆ ?''

''ಅಂದರೆ 'ಏನೂ ಇಲ್ಲ' ಅಂತ ತಿಳಕೊಳ್ಳೋದು''.

''ಇದೆಲ್ಲ ಸುಳ್ಳು ಬೂಟಾಟಿಕೆ.'' ನಾನು ಕೆರಳಿದೆ. ಅವನು ಹೇಳಿದಂತೆ ಕೇಳಿ ಕೇಳಿ ನನಗೂ ಬೇಸರ ಬಂದಿತ್ತು. ನನಗೂ ಯೋಚನಾಶಕ್ತಿ ಇದೆಯಲ್ಲ !

ಟೇಬಲ್ ಮೇಲಿದ್ದ ನನ್ನ ಕೈ ಹಿಡಿದು ಕೇಳಿದ, ''ನಿನ್ನ ವಯಸ್ಸೆಷ್ಟು ?''

''ಇಪ್ಪತ್ತೈದು.''

''ಈಗೇನು ಮಾಡುತ್ತಿದ್ದಿ ?''

''ಪಿಎಚ್.ಡಿ. ಮಾಡುತ್ತಿದ್ದೇನೆ.''

''ಮದುವೆ ಆಯ್ತೆ ?''

''ಇಲ್ಲ, ನಿಶ್ಚಯವಾಗಿದೆ. ವೃಂದಾಳ ಡಾಕ್ಟರ್ ಕೋರ್ಸ್ ಈ ವರ್ಷ ಮುಗಿಯುತ್ತದೆ. ಆಮೇಲೆ ಮದುವೆಯಾಗುತ್ತೇವೆ.''

''ಸರಿ, ಸರಿ. ತನಗಾಗಿ ಜಗತ್ತಿನಲ್ಲೊಬ್ಬ ಹೆಣ್ಣಿದ್ದಾಳೆ ಎಂಬ ಸಂಗತಿ ಸಂತೋಷದಾಯಕವೇ.'' ನನಗೆ ಸಂತಸವಾಯಿತು. ಅವನು ನೀಡಿದ ಎರಡನೇ ಸಿಗರೇಟು ಹೊತ್ತಿಸಿದೆ. ತಲೆ ಧೀಂಗುಡುತ್ತಿತ್ತು. ಆದರೂ ಸುಧಾರಿಸಿಕೊಂಡೆ.

''ಹಾಂ. ಈಗ ಮುಂದಿನ ಪ್ರಶ್ನೆ : ತಾಯ್ತಂದೆಗಳು ಹೇಗಿದ್ದಾರೆ ?''

''ಚೆನ್ನಾಗಿದ್ದಾರಲ್ಲ.'' ನಾನು ಕೆರಳಿದೆ. ಆದರೆ ಬೆದರಿಸುವಂತೆ ಅವನ ಕಣ್ಣಿನ ರೆಪ್ಪೆಗಳು ಚಲಿಸಿದವು. ಫಡ ಫಡ ಸಪ್ಪಳ ಮಾಡಿದವು. ಅದರಿಂದ ಅನ್ನಿ ಅಥವಾ ಸಿಗರೇಟಿನ ಹೊಗೆಯನ್ನು ಮೂಗು - ಬಾಯಿಯಿಂದ ಹೊರಹಾಕುವ ಕ್ರಿಯೆಯಿಂದ ಅನ್ನಿ. ನನಗೆ ಹಗುರ ವಾದಂತೆ, ನಿಶೆಯೇರಿದಂತೆ, ಅನಿಸಿತು. ಸಹನ ಶೀಲತೆಯೂ ಬಂತು. ಅವನು ಹೇಳಿದ ''ಈಗ ಇದೇ ಪ್ರಶ್ನೆ ನನಗೆ ಕೇಳು''.

ನಾನು ಪುನಃ ಕೆರಳಿದೆ. ತಾಳಿಕೊಳ್ಳುವ ಸಹನಶೀಲತೆ ನನ್ನಲ್ಲಿ ಬಂದರೂ ಇದೆಂಥ ಉದ್ಧಟತನ ? ಅವನ ರೆಪ್ಪೆಯ ಚಲನೆ ಕ್ಷಣಕಾಲ ನಿಂತಿತು. ಅವನ ಕಂಗಳಲ್ಲಿ ದಟ್ಟವಾದ ಕಾರುಣ್ಯ ಗೋಚರಿಸಿತು. ಅವನು ಗೋಗರೆದು ಬೇಡಿಕೊಂಡ ''ಪ್ಲೀಜ್, ನನಗಾಗಿ ಕೇಳು, ಅಂದರೆ ಒಮ್ಮೆ ನಿರುಮ್ಮಳ ಆಗ್ತೇನೆ''. ಅವನ ಮಾತಿನ ಹಾಗೂ ಕಣ್ಣಿನ ಕಾರುಣ್ಯಕ್ಕೆ ನಾನು ಶರಣಾಗತನಾದೆ. ಪ್ರಶ್ನೆ ಕೇಳಿದೆ.

''ನಿನ್ನ ವಯಸ್ಸೆಷ್ಟು ?''

''ಇಪ್ಪತ್ತೈದು''

''ಈಗೇನು ಮಾಡ್ತೀಯ ?''

''ಸೈಕಲ್ ಅಂಗಡಿಯಿದೆ. ಗಾಳಿ ಹಾಕೋದು, ಪಂಕ್ಚರ್ ತೆಗೆಯೋದು...''

''ಮದುವೆ ಆಗಿದೆಯೇ ?''

ನಾನು ಆಯಾಸಗೊಂಡೆ. ಕ್ಷಣಕಾಲ ಸ್ತಬ್ಧ. ಅವನು ಜೋರಾಗಿ ನಿಟ್ಟುಸಿರುಬಿಟ್ಟು ಹೇಳಿದ :

''ಎಲ್ಲಿ ಮದುವೆ ? ನಮ್ಮ ಮನೆ ಎದುರಿಗೆ ಸಾವಿನ ಸರದಿ. ಅಪ್ಪ ಜಲೋದರದಿಂದ ಸತ್ತ, ದಿಗಂಬರನಿಗೆ ಆಸ್ತಮಾ ಅಟ್ಯಾಕ್. ಕಾಠೇವಾಡಿನಲ್ಲಿದ್ದವ ರೈಲು ಅಪಘಾತದಲ್ಲಿ ಸತ್ತನಂತೆ. ಅಂದಮೇಲೆ ನನ್ನ ಮದುವೆ ಬಗ್ಗೆ ಯೋಚಿಸುವವರು ಯಾರು ? ತಂಗಿಯರು ನಖರಾದಲ್ಲಿ ಮುಳುಗಿದ್ದಾರೆ. ತಮ್ಮಂದಿರು ಪಕ್ಕಾ ಮವಾಲೀಗಳು - ಮನೆಕಡೆ ಯಾರ ಲಕ್ಷ್ಯವೂ ಇಲ್ಲ.'' ಅವನ ಸಿಟ್ಟು ನೆತ್ತಿಗೇರುತ್ತಿತ್ತು.... ಅವನು ಆಕ್ರಂದನ ಮಾಡುತ್ತಿದ್ದ. ನಾನೇನು ಆರೋಪಿಯೇ ?

ಆಮೇಲೆ ಅವನು ಕ್ರಮೇಣ ಶಾಂತನಾದ. ಆಗಿನ ಆಕ್ರಂದನಕ್ಕೂ ಈಗಿನ ಶಾಂತತೆಗೂ ಎಂಥ ಗಾಢ ಸಂಬಂಧ ಅನ್ನಿಸಿತು. ಅವನು ನನ್ನ ನೇರವಾಗಿ ದಿಟ್ಟಿಸುತ್ತಿದ್ದ. ಕಣ್ಣಿನಲ್ಲಿ ಕಠೋರತೆಯೂ ಇಲ್ಲ, ರೆಪ್ಪೆಯ ಚಲನೆಯೂ ಇಲ್ಲ ! ಅವನು ಮೆಲ್ಲಗೆ ಹೇಳಿದ, ''ಪ್ರಭು, ಈಗ ನಿರುಮ್ಮಳ ಅನಿಸುತ್ತಿದೆ. ಇನ್ನೊಂದು ಸಂಗತಿಯೆಂದರೆ, ನಾನು ಮದುವೆ ನಿಶ್ಚಯಿಸಿದ್ದೇನೆ. ಕಣ್ಣು ಸ್ವಲ್ಪ ಕುರುಡಾಗಿದೆ, ಆದರೂ ಅಡ್ಡಿಯಿಲ್ಲ. ಮದುವೇನೇ ಇಲ್ಲದಿರುವುದಕ್ಕಿಂತಲೂ... ನೀನು ಮದುವೆಗೆ ಬರ್ತಿಯಲ್ಲ ?''

ನನಗೆ ಅವನ ಬಗ್ಗೆ ಏನು ಅನಿಸುತ್ತಿದೆ ಎಂಬುದು ನಿಶ್ಚಿತವಾಗಿ ಹೇಳಲು ಬರುವುದಿಲ್ಲ. ಈಗಲೂ ನನಗೆ ಅವನು ಡಾಂಭಿಕ ಅನಿಸುತ್ತಿದ್ದ... ಎಲ್ಲೋ ಸ್ವಲ್ಪ ಪ್ರೇಮ, ಸಾಕಷ್ಟು ಸಿಟ್ಟು , ಕೆಲಮಟ್ಟಿಗೆ ಅಸಹ್ಯತನ... ಒಂದು ಮಾತ್ರ ನಿಜ, ನಾವಿಬ್ಬರು ಸಾಕಷ್ಟು ಸನಿಹಕ್ಕೆ ಬಂದಿದ್ದೆವು.

ಕಂದು ಬಣ್ಣದ ಸಂಜೆ. ನಾನು, ವೃಂದಾ ಗಾರ್ಡನ್ನಿನಲ್ಲಿ ಕೂತಿದ್ದೆವು. ನಾನು ಆಕೆಯ ಹೆಗಲ ಮೇಲೆ ತಲೆಯಾನಿಸಿ ಕೂತಿದ್ದೆ. ಆಕೆ ನನ್ನ ತಲೆಗೂದಲಲ್ಲಿ ಕೈಯಾಡಿಸುತ್ತಿದ್ದಳು. ''ವೃಂದಾ, ನಿನಗೆ ನನ್ನ ಗೆಳೆಯ ರಾಮನ ನೆನಪಿದೆಯೇ ? ಅವನ ಮದುವೆ ನಿಶ್ಚಯವಾಗಿದೆ.'' ರಾಮನ ಬಗ್ಗೆ ಏನೇನೋ ಹೇಳಬೇಕಾಗಿತ್ತು , ಆದರೆ ಸಾಧ್ಯವಾಗಲಿಲ್ಲ. ಇಷ್ಟು ಮಾತಾಡುವುದರೊಳಗೆ ನನಗೆ ಆಯಾಸವಾಗಿತ್ತು !

ಅನುವಾದ : **ಚಂದ್ರಕಾಂತ ಪೋಕಳೆ**
ಕನ್ನಡ ಉಪನ್ಯಾಸಕ, ಬಿ.ಎಸ್.ಪಿ.ಯು. ಕಾಲೇಜು
ಬೇಡಕಿಹಾಳ - ೫೯೧ ೨೧೪, ಬೆಳಗಾವಿ ಜಿಲ್ಲೆ



# ಕನಕ ನೀ ಬರುವ ತನಕ

'ನಾನು' ಹೋಗದೆ ಮನದಿ
ಹೋದೇನೆ ಕೈಲಾಸಕೆ....
ಕನಕ, ನೀನು ಹೋಗಲು ಬೇರೆ
ರಹದಾರಿ ಬೇಕಾ?

ಕಿಂಡಿ ಸಾಲದು ನಮಗೆ
ಹೊಲೆಯ ಹಾಕಲು ಹೊರಗೆ
ಇಡಿಕಿರಿದ ದಾರಿಯಲಿ
ಕೃಷ್ಣನಿಲ್ಲ.

ರಾಮಧಾನ್ಯಕ್ಕಾಗಿ ದೇವ ಸನ್ನಿಧಿಯಲ್ಲಿ
ಧರಣಿಯಿಲ್ಲದೆ ನೀನು
ದಾವೆಯನು ಹೂಡಿ
ಪಡೆದೆನಲ್ಲವೆ ಅಂದು ಪರವಾನಿಗೆ
ಅದಕ್ಕಿತ್ತೆ ಅಂಕಿತವು?
-ನಮಗೀಗ ಕವಿಯೊಳಗೆ
ಸುಳಿಗಾಳಿ, ಚಿಂತೆಗಳ ಸಂತೆ.



ಯಾರೂ ಕಾಣದೆ ಯಾರು
ಏನೂ ಮಾಡದೆ ಏನು
ನೀನಾದರೂ ಹಣ್ಣು ತಿನ್ನದೇ ಹೋದರೂ.....
ಹಣ್ಣೇಕೆ-ನಾವು
ಹೊನ್ನೆಷ್ಟು ಗೆದ್ದರೂ
ಬಗಲ ಜೋಳಿಗೆಯೊಳಗೆ
ಇಣುಕಿಲ್ಲ ಯಾರೂ

ಕನಕ ಕಿಂಡಿಯೇ?
ಅದಕೆ ರಜತ ಪಟ್ಟಿಕೆಯೆ?

ಗಚ್ಚಿನಾವರಣದ ಕುಶಲಿ ಯಾವನು ಎಲ್ಲಿ?
ಕುಸುರಿಯಲಿ
ಇಷ್ಟು ಕೊರೆಯಾದರೂ, ಕೃಷ್ಣ
ಮೊಗವ ತೋರನು ಹಳೆಯ ಬಣ್ಣದಲ್ಲಿ.

ಬೇಡವೆಂದರೂ ನಾವು
ಗಾಂಧಿ ತಾತಗೆ ಅಂದು
ಮೂರ್ತಿ ಕಡೆದಿಲ್ಲವೆ ಗುಡಿಯ ಕಟ್ಟಿ
ದೇಹ ದೇಗುಲವೆಂದ ಬಸವರನ್ನೆ ಹಿಡಿದು
ಕುದುರೆ ಸ್ಥಾವರದಲ್ಲಿ ಕೆಡೆದಿಲ್ಲವೆ?

ಇಂದಾದರೂ ಅಷ್ಟೆ
ಹಳೆಯದಾದರೆ ಕಿಂಡಿ
ಕನಕ ಪತ್ತಲ ಹೊದಿಸಿ ಹೊಸತು
ಮಾಡುವೆವು

ಹೊಸಶಕೆಯ ಭಕ್ತನಿಗೆ
ಗಣಕ ಯಂತ್ರವ ತಂದು
ಕನಸ ನೇಯುವೆವು

ಕರ್ನಾಟ ತುಂಬ
ಹೊಸ ಕಿಂಡಿಗಾಗಿ
ಬಯಲ ಹುಡುಕುವೆವು
ಕನಕ........ನೀನಿರುವನಕ
ನೀ ಬರುವ ತನಕ.

**ಇಸಾಕ್ ಅಗ್ನಾಡಿ**
ಕನ್ನಡ ಉಪನ್ಯಾಸಕ, ಸ. ಪ. ಪೂ. ಕಾಲೇಜು, ಕುರ್ನಾಡು-ಮುಡಿಪು,
ಬಂಟ್ವಾಳ ತಾಲ್ಲೂಕು, ದ.ಕ. ೫೭೪ ೧೫೩.

# ಗಾಡಿ ನಿಲ್ಲುವ ಸಮಯ

ಜೀವಧಾರಣ ಘಳಿಗೆ ಉಸಿರು
ತೊಡಿಸಿದ ಗಾಡಿ; ಬೆಳ್ಳಿ ಮೋಡದ ಕೆಳಗೆ-
ಚಲಿಸುವ ಮಂದಹಾಸ, ತೇರು
ಉತ್ಸವ ಚಳಿಗಾಳಿ ಬಿಸಿಲುಮಳೆ ಭಯವಿಲ್ಲ.

ತಡೆತಡೆದು ನಡೆದೇ ಇದೆ ಸಂತೆ-
ಮುಗಿಯಿತು ಸಂಜೆಗೆ; ಏಕೋ ಎದೆ
ನೋವು ಒಳಗೇ ಸಣ್ಣಗೆ, ಭಾರ ದಿನದಿನದ
ದಿನಸಿ ಬೆಲೆ ಮುಟ್ಟಿದೆ ಗಗನ.

ನುಡಿಕಾಳು ಕಾವ್ಯಕಟ್ಟಿದೆ ಜೇನುಗೂಡು
ಹಾಡಿಲ್ಲದೇನಿದೆ ಬಾಳು; ನಗರ ಬಿಕ್ಕುವ ಶಬ್ದ
ತೂರಾಡಿ ರಾಡಿ ಕೆಸರು ಗಾಳಿ ಹೊಗೆ ಧೂಳು
ಯಾವ ಯುಗದೊಳಗೂ ಇಲ್ಲ ಉಸಿರು ಕಟ್ಟುವ ಹಾಡು.

ಯಾರಿಗೇನಾಗಬೇಕು ತಾನಿದ್ದರೆ ಸಾಕು
ನಾಯಿ ಬದುಕು; ಸ್ವಾರ್ಥ ಪರಾಕಾಷ್ಠೆ
ಬಂದೂಕಿಗೇ ಹೆಚ್ಚು ತೂಕ ಕೆಲಸ ಸುಗಮ
ಕಡೆಗೀಲು ಜಾರಿ ಗಾಡಿ ನಿಲ್ಲುವ ಸಮಯ.

**ರಾಮಗಿರಿ ರವೀಂದ್ರ**
ವಿಧಾನಸೌಧ, ಬೆಂಗಳೂರು

# ಆತ್ಮನಾದ

ಅಹಂಕಾರದ ಆತ್ಮನಾದ
ವಂಶವೃಕ್ಷ ರಕ್ತಧಾರಾಕಾರ
ಚಿಂತೆಯ ಬಿಲ ಸೇರದ ಧರ್ಮ ಸಂತಸ ಪಡದಿರಲಿ
ಅಂತರ್ಯದಲಿ ವಿಶಾಲಭಾವವಿರದ ಧರ್ಮವೆ?
ಎಲ್ಲಾ ಧರ್ಮದ ಸಾರ ರಕ್ತವಾಗಿರುವಾಗ
ಮಾಧುರ್ಯ ಸಿಗುತ್ತಿರಲು ಹಾಯಾಗಿ ಪಯಣಿಸಿರಲು
ನೆರಳಿನಂತೆ ಮಧುರ ನೆನಪಿನಂತೆ
ಅಧೋಲೋಕದಲ್ಲಿನ ಶಾಸನಗಳ ಜಾರಿ
ತುಂಬು ಬಟ್ಟಲ ದಾನಕ್ಕಾಗಿ ಆಸೆ
ಸಮುದ್ರವ ನೀಡಿದ್ದಾರೆ ಸಂವಿಧಾನ ಕರ್ತರು
ಹಿತ್ತಾಳೆ ಉಂಗುರ, ಕಸೂತಿ ಕರವಸ್ತ್ರ, ಮುಗಿಲರಂಗು
ಬದಲಾಗುವುದು ಬೆವರ ನೆಲೆಯಲ್ಲಿ
ಬಾಗಿಲಿಗೆ ನೇತಾಡುತ್ತವೆ ಮುಂಗಾರು
ಹಸಿರುತೋಟದಿಂದ ನಕ್ಷತ್ರಗಳು ಬಾಳೆಗೊನೆಗಳಲ್ಲಿ
ಬಹುಜನರ ಖಜಾನೆಯ ಆಸೆ ತುಂಬಲಿವೆ
ಹರಿದ ಬಟ್ಟೆಗಳಿಗೆ ಒಂದು ರಾತ್ರಿ ಒಂದು ಹಗಲಿನಲ್ಲಿ
ಹೊಲಿಗೆ. ಇದೇ ಬಾಗಿಲಿಗೆ ಸೂರ್ಯನೆ
ಬಾಗಿ ನಮಸ್ಕಾರ
ಬಿಚ್ಚುಗತ್ತಿಯಂತವರು ಜ್ವಾಲಾಮುಖಿಯಂತೆ ಎತ್ತರ



ರೊಟ್ಟಿಯ ಚಿಂತೆಯ ಜನ ಒಂದಿಷ್ಟು
ತಪ್ಪು ಮಾಡುವರು. ಮಹಲುಗಳ ಮೇಲಿಂದ ಬೀದಿಗೆ
ಕೆಂಪು ಹೂಗಳ ಮೇಲೆ ನಡೆದು
ಯುಗಯುಗದ ಬೆಂಬಲದ ಬಾವುಟ ಕೈಯಲ್ಲಿಡಿದು
ಚಂಡಮಾರುತದ ಜೊತೆಗೆ ಸಾರಸ್ವತ ಲೋಕ ಕಣ್ಣು
ಬಿಟ್ಟಿರಲು ಎದೆ ನಡುಗಿರಲಿ.

**ಗಂಗಾರಾಂ ಚಂಡಾಳ**
ಹಿರಿಯ ಶ್ರೇಣಿ ಉಪನ್ಯಾಸಕರು, ಸರಕಾರಿ ಸಿಪಿಸಿ ಪಾಲಿಟೆಕ್ನಿಕ್
ಅಶೋಕ ರಸ್ತೆ, ಮೈಸೂರು - ೫೭೦ ೦೨೩.



# ಗಡ್ಡಗಾಥ

**ಸತ್ಯವತಿ**

ಒಮ್ಮೆ ಆಶಳ ಪತಿ ದಿನೇಶನಿಗೆ ಜ್ವರ ಬಂದಿತು. ಎಲ್ಲರಂತೆಯೇ ಅವರ ಸವಾರಿಯೂ ವೈದ್ಯರಿದ್ದಲ್ಲಿಗೆ ಹೋಯಿತು. ಮೂಗು, ಬಾಯಿ, ಕಣ್ಣು, ಕಿವಿ, ಹೊಟ್ಟೆ, ಬಟ್ಟೆ(!) ಎಲ್ಲವನ್ನೂ ಪರೀಕ್ಷಿಸಿ ವೈದ್ಯರು ಮ್ಲಾನವದನರಾದರು.

ಸಾಧಾರಣ ಜ್ವರಗಳಾದ 'ಫ್ಲೂ' ಮುಂತಾದ್ದು ಅಲ್ಲದೆ ಮತ್ತೇನೋ ಘೋರ ಜ್ವರವೇ ಆತನನ್ನು ಪಿಶಾಚಿಯಂತೆ ಹಿಡಿದಿರಬೇಕೆಂದು ಅಂದಾಜಾಗಿ, ಆಶ ಬೆದರಿದಳು, ನಡುಗಿದಳು. ವೈದ್ಯರ ನುಡಿಮುತ್ತುಗಳು ಕುತ್ತು ತರುವ ವಿಷಯವನ್ನರುಹದಿದ್ದರೆ ಸಾಕೆಂದು ಮನದಲ್ಲೇ ಅವಲತ್ತುಕೊಂಡಳು.

ಕಡೆಗೂ ವೈದ್ಯರು ಬಾಯಿಬಿಟ್ಟರು. ''ಮೇಡಂ, ನಿಮ್ಮವರ ಜ್ವರ ಇಂಥದ್ದೇ ಎಂದು ಹೇಳಲು ಸಾಧ್ಯವಿಲ್ಲ. ರಕ್ತ, ಮೂತ್ರ, ಮುಂತಾದವುಗಳ ಪರೀಕ್ಷೆ ಮಾಡುವುದರೊಂದಿಗೆ, ಕೆಲವು ಸ್ಕ್ಯಾನಿಂಗ್‌ಗಳೂ ಬೇಕಾಗಬಹುದು. ಇಂಥಾ ರೋಗಿಗಳನ್ನು ಮನೆಯಲ್ಲಿ ಇರಿಸಿಕೊಳ್ಳುವುದು ಸರಿಯಲ್ಲ. ಕೂಡಲೇ ನರ್ಸಿಂಗ್‌ಹೋಂಗೆ ರವಾನಿಸಿ'' ಎಂದು ಆಜ್ಞೆಯೊಂದಿಗೆ ಭಯವನ್ನೂ ತುಂಬಿ, ಇತರ ರೋಗಿಗಳ ಬಳಿಗೆ ಸರಿದರು.

ವೈದ್ಯನೇ ನಾರಾಯಣನೆಂದು ನಂಬಿರುವ ಮುಗ್ಧ ಮಹಿಳೆ ಆಶ, ಕೊಂಚವೂ ತಡಮಾಡದೆ, ಆ ಕೂಡಲೆ ಆ ವೈದ್ಯರದ್ದೇ ಆದ ನರ್ಸಿಂಗ್‌ಹೋಂನಲ್ಲಿ ತನ್ನ ಪತಿಯನ್ನು ದಾಖಲಿಸಿ, ವೈದ್ಯನುಡಿ ಪರಿಪಾಲನೆ ಮಾಡಿ, ವೈದ್ಯಭಕ್ತಿ ಪರಾಯಣೆಯಾಗಿ ಮೆರೆದಳು. ದಿನೇಶ, ಎಲ್ಲಾ ತರದ ಮೆಶಿನ್‌ಗಳಿಗೂ ದೇಹದ ವಿವಿಧ ಅಂಗಗಳನ್ನು ಪ್ರದರ್ಶಿಸಿ, ರಕ್ತ-ಮೂತ್ರಗಳನ್ನು ದಾನಮಾಡಿ, ಮಾತ್ರೆ-ಚುಚ್ಚುಮದ್ದುಗಳನ್ನು ಸ್ವೀಕಾರ ಮಾಡಿ, ಗ್ಲೂಕೋಸನ್ನು ಗುಳುಂ ಮಾಡಿ, ಬ್ಯಾಂಕ್ ಬಾಲೆನ್ಸನ್ನು ಮಿತಿಗೊಳಿಸಿ, ವೈದ್ಯರ ಖಜಾನೆಯನ್ನು ಬೃಹದೀಕರಿಸಿ, ಅಂತೂ ಒಂದು ದಿನ ಆಸ್ಪತ್ರೆಯಿಂದ ವಿಮುಕ್ತನಾಗಿ, ಜ್ವರದಿಂದ ಮುಕ್ತಿ ಪಡೆದು ತನ್ನ ಮನೆಗೆ ಬಿಜಯಂಗೈದ. ಆದರೂ ಅವನ ಜೋರಿನ ಜ್ವರ ಯಾವ ಗುಂಪಿಗೆ ಸೇರಿದ್ದೆಂದು ಕಡೆಗೂ ಯಾರಿಗೂ ತಿಳಿಯಲಿಲ್ಲ. ವೈದ್ಯರು ಇದೇನೋ ಒಂದು ಹೊಸಾ ತರಹದ ಜ್ವರವೆಂದು ಉದ್ಗರಿಸಿದರು. ಇದರಿಂದ ಈತ ಮೇಲೆ ಬಿದ್ದದ್ದೇ ಒಂದು ಪವಾಡವೆಂದು ಘೋಷಿಸಿದರು.

ಇಷ್ಟಾಗುವಾಗ ನಯವಾದ, ಸುಂದರವಾದ, ಪೂರ್ಣಚಂದ್ರನಂತೆ ಇದ್ದ ಆತನ ಮುಖದಲ್ಲಿ ಅಷ್ಟಿಷ್ಟು ಗಡ್ಡ-ಮೀಸೆಗಳು ಹುಲುಸಾಗಿ ಬೆಳೆದಿದ್ದವು. ಮಾತ್ರೆ-ಮದ್ದು ಎಂಬ 'ಸುಫಲಾ' ಗೊಬ್ಬರದಿಂದ ಮಾತ್ರ ಇಷ್ಟು ಶೀಘ್ರವಾಗಿ ಇಷ್ಟು ಸೊಗಸಾದ ಗಡ್ಡ-ಮೀಸೆಗಳನ್ನು ಪಡೆಯಬಹುದೆಂದು ಅವರ ಮಗ ಮುಖೇಶ ಸಾರಿದ.

ಮನೆಗೆ ಬಂದು ಎರಡು-ಮೂರು ದಿನಗಳಾದರೂ ದಿನೇಶ ಈ ಪುರುಚಲು ಗಡ್ಡವನ್ನು ತೆಗೆಯದೆ, ಗುಡಾಣದಂತೆ ಅಲ್ಲಾಡದೆ ಕುಳಿತಾಗ ಆಶಗೆ ತಡೆಯಲಾಗಲಿಲ್ಲ.

''ಈ ಕೆಟ್ಟ ಗಡ್ಡವನ್ನು ತೆಗೆದು ಸ್ವಲ್ಪ ಫ್ರೆಶ್ ಆಗಬಾರದಾ?'' ಒಂದು ಅರುಣೋದಯ ಕಾಲದಲ್ಲಿ, ಇದೇ ಸುಮುಹೂರ್ತವೆಂದು ಕೇಳಿಯೇಬಿಟ್ಟಳು.

''ಏನು? ಗಡ್ಡ ತೆಗೀಬೇಕಾ? ಅದೂ ಅಷ್ಟು ದುಡ್ಡು ಕೊಟ್ಟು ಬೆಳೆಸಿದ ಗಡ್ಡ?'' ನಸುಗೋಪದಿಂದ ಗುಡುಗಿದ ದಿನೇಶ.

''ದುಡ್ಡು ? ಏನು ದುಡ್ಡು ?'' ಅರಿವಾಗದೆ ಪಿಳಿ ಪಿಳಿ ಕಣ್ಣು ಬಿಡುತ್ತಾ ಪೆದ್ದುತನವನ್ನು ಪ್ರದರ್ಶಿಸಿಯೇಬಿಟ್ಟಳು ಆಶ.

''ಅಷ್ಟೂ ಗೊತ್ತಿಲ್ವಾ ನಿಂಗೆ? ನೀನೇ ತಂದಿದ್ದಿ ಬ್ಯಾಂಕಿಂದ! ಸಾವಿರಗಟ್ಟಳೆ ನರ್ಸಿಂಗ್ ಹೋಂಗೆ ಸುರಿದಾಗ, ಅಲ್ಲಿ ಬೆಳೆದ ಗಡ್ಡ ಇದು. ಇದನ್ಯಾಕೆ ತೆಗೀಬೇಕು? ಇದರ ಬೆಲೆ ಸಾವಿರಾರು ರೂಪಾಯಿ, ತಿಳಿಯಿತಾ?'' ಗದರಿಸುವಂತೆಯೇ ವಿವರಿಸಿ ಆಶಳ ಬಾಯಿಯನ್ನು ಮುಚ್ಚಿಸಿದನಾದರೂ, ಅವಳ ಅಸಮಾಧಾನವನ್ನು ಹೋಗಲಾಡಿಸಲಿಲ್ಲ.

ರೋಗಿ, ಭಿಕ್ಷುಕ, ಬೈರಾಗಿ ಹೀಗೆ ಇನ್ನೂ ಯಾರ್‍ಯಾರದೋ ರೂಪದಲ್ಲಿ ಕಂಗೊಳಿಸುತ್ತಿರುವ ಈತ, ಒಂದು ಮನೆಯ ಯಜಮಾನನೆಂದು ಯಾರಾದರೂ ಹೇಳಬಹುದೆ? ಹಾಗೆಂದು ಈ ಕಠಿಣ ಪದಗಳನ್ನು ಅವನೆದುರಿಗೆ ಹೇಗೆ ಉಪಯೋಗಿಸುವುದೆಂದು ಮುಜುಗುರಪಟ್ಟುಕೊಂಡು ಅಜಗರದಂತೆ ಒಂದೆಡೆ ತಣ್ಣಗೆ ಕುಳಿತಳು ಆಕೆ.

ಆದರೂ ಯಾಕೋ ಪತಿಯ ಈ ಕೆಟ್ಟರೂಪ ಅವಳನ್ನು ಕುಕ್ಕೀ ಕುಕ್ಕೀ ನೋವುಂಟುಮಾಡಿತು. ದಿನೇಶ ದೊಡ್ಡ 'ಕೋಪಿಷ್ಠ ಶಂಕರ'ನಾದ್ದರಿಂದ, ಅಳೆದೂ ಸುರಿದೂ ಅಂತೂ ಇಂತೂ ಒಂದು ಒಳ್ಳೆಯ ಶಾಂತ ಘಳಿಗೆಯಲ್ಲಿ ''ಓ ನನ್ನ ಪೂರ್ಣ ಚಂದಿರ। ಬೇಡ ನಿನಗೀ ತೂಬುರ। ಕಾಣದು ಇದು ಸುಂದರ॥'' ಎಂದೊದರಿದಳು.

ಹಾಯ್ ಹಾಯ್! ಶಂಕರನ ಮೂರನೆ ಕಣ್ಣು ತೆರೆಯಿತೆ? ಏನೀ ತಾಪ? ಉರಿ? ಅಯ್ಯೋ! ಕೋಪಾಗ್ನಿಯಲ್ಲಿ ದಹದಹಿಸುತ್ತಲಿರುವ ದಿನೇಶನ ನಯನಗಳ ತೀಕ್ಷ್ಣವಾದ ಆಗ್ನೇಯಾಸ್ತ್ರದ ಧಾಳಿಗೆ ತುತ್ತಾದ ಆಶಳ ಕೋಮಲ ಶರೀರ ನಡುಗಿ ನಲುಗಿಹೋಯಿತಲ್ಲಾ! ಬೆವರೆಂಬ ಮಳೆ ದೇಹದಲ್ಲೇ ಉದ್ಭವಿಸದಿರುತ್ತಿದ್ದರೆ ಆಕೆ ಅಲ್ಲೇ ಆಗಲೇ ಭಸ್ಮವಾಗಿ ಬಿಡುತ್ತಿದ್ದಳು.

ದಿನೇಶನ ಹಲವಾರು ವರ್ಷಗಳ ಉಳಿತಾಯವನ್ನು ಹಲಕೆಲವು ದಿನಗಳಲ್ಲೇ ಆ ನರ್ಸಿಂಗ್ ಹೋಂ ಎಂಬ ಬಕಾಸುರ ಕಬಳಿಸಿದ ಕೋಪವನ್ನು ಆತ ಬಡಪಾಯಿಯಾದ ಆಶಳ ಮೇಲೆ ಈ ರೀತಿ ತೀರಿಸಿಕೊಂಡರೆ ಆಶಳ ಗತಿ? ಎಲ್ಲರಂತೆಯೇ ಪತಿ ಮುನಿದಾಗಿನ ಸತಿಯ ಶೋಚನೀಯ ಪರಿಸ್ಥಿತಿ! ಹಾಗೆಂದು ಸುಮ್ಮನಿರಲಾದೀತೆ? ತನಗೆ ಬೇಕಾದವರೆಲ್ಲಾ ತನ್ನ ಗಂಡನ ಸುಂದರ ವದನದ ಕುರೂಪ ಗಡ್ಡದ ಬಗ್ಗೆ ವಿಚಾರಿಸಿದ ಕೂಡಲೇ ಆಕೆಗೆ ವಿಪರೀತ ದುಃಖವಾಗುತ್ತಿತ್ತು. ಇದೆಲ್ಲಿಂದ ಬಂದು ಸೇರಿತು ಈ ದೃಷ್ಟಿ ಬೊಟ್ಟು? ದಿನೇಶನ ರಾಕೆಂದು ವದನಕ್ಕೆ ಕುಂದು ತರುವ ಈ ಗಡ್ಡದಿಂದ ವಿಮುಕ್ತಿ ಎಂದು ? ಮುಂತಾಗಿ ಚಿಂತಿಸಿ ಚಿಂತಿಸಿ (ಹೆಣ್ಣಾಗಿದ್ದ ಆಕೆ) ಹಣ್ಣಾದಳು !

ಆಶ 'ಹಣ್ಣೇ' ಆಗಲಿ, 'ಕಾಯೇ' ಆಗಲಿ, (ಅಂದರೆ ಇವನ ಗಡ್ಡ ಎಂದು ಮಾಯವಾಗುವುದೆಂದು ಕಾತುರದಿಂದ 'ಕಾಯು'ವ ಕಾಯಕದಿಂದ 'ಕಾಯಿ'ಯ ಹಾಗೆ 'ಸಪೂರ ಕಾಯ'ದವಳೇ ಆಗಲಿ) ದಿನೇಶನಿಗೆ ಮಾತ್ರ ಆಶಳ ಬಗ್ಗೆ ಚೂರೂ ಆಸಕ್ತಿ ಇರಲಿಲ್ಲ. ಅವನ 'ಧನ'ವನ್ನು ಮಾಯಮಾಡಿದ 'ಮಾಯಾಂಗನೆ' ಅವಳೆಂದು ಆತನಿಗೆ ಕೆಂಡಾ ಮಂಡಲ ಕೋಪ! ಅಲ್ಲಾ, ಇವನನ್ನೊಲಿಸಿಕೊಳ್ಳಲು ಆಕೆ ಮತ್ತೇನು ಮಾಡಬೇಕಿತ್ತು ?

''ಏನೋಪ್ಪ! ಈ ಕೋಪಿಗಳ ರೀತಿಯೇ ಅರ್ಥವಾಗಲ್ಲ. ನನ್ನಲ್ಲಿ ಚೂರೂ ಅನುತಾಪವಿಲ್ಲದ ಇವರಿಗೆ, ಈಗ ನಾನು ಏನೇ ಮಾಡಿದ್ರೂ ಕೋಪ, ಮಾಡದಿದ್ರೂ ಕೋಪ, ಆಡಿದ್ರೂ ಕೋಪ, ಆಡದಿದ್ರೂ ಕೋಪ. ಒಟ್ಟನಲ್ಲಿ ನಾ ಬಾಯಿ ತೆರೆದರೆ ಇವರದು ರೌದ್ರರೂಪ!'' ಎಂದು ಶೋಕರಾಗದಲ್ಲೇ ಆಲಾಪಿಸುತ್ತಾ, ಮುಂದಿನ ಹೆಜ್ಜೆಯನ್ನು ಮನದಲ್ಲೇ ರೂಪಿಸತೊಡಗಿದಳು ಆಶ.

ನಯ-ವಿನಯದಿಂದ ಪತಿಯ ಮನವೊಲಿಸಿ, ಆ ನಯ-ನಾಜೂಕಿಲ್ಲದ ವಕ್ರಗಡ್ಡವನ್ನೊಮ್ಮೆ ಕಿತ್ತೊಗೆಯುವಂತೆ ಮಾಡಬೇಕೆಂದು ಪಣತೊಟ್ಟಳು. 'ಪಣ ತೊಡುವುದು ಸುಲಭ, ಫಲ ದೊರೆವುದು ದುರ್ಲಭ' ಎನ್ನುವ ನವ-ನವೀನ ನುಡಿಯೊಂದು ಜನ್ಮ ತಳೆಯಲು ಕಾರಣಕರ್ತನಾದ ದಿನೇಶ. ನಯ-ವಿನಯಗಳಿಗೆ ನಯಾಪೈಸೆಯಷ್ಟೂ ಬೆಲೆ ಇಲ್ಲವಾಗಿ, ಕನಸು ಚೂರಾಗಿ, ಮನಸು ಮುದುಡಿಹೋಗಿ ಕಂಗಾಲಾಗಿ ಕುಳಿತಳು ಆಶ.

ತಾಯಿಯ ಬೆಂದ ಮುಖ ನೋಡಿ, ಆಕೆಯ ಕಂದ ಮುಖೇಶ ಮುಕ್ತವಾಗಿ ತನ್ನ ಸಹಕಾರ ಹಸ್ತವನ್ನು ಚಾಚಿದ.

''ಅಮ್ಮಾ, ಈ ಅಪ್ಪ, ಅವರ ಗಡ್ಡನ್ನ ಟ್ರಿಮ್ ಮಾಡಿಕೊಂಡ್ರೆ ಥೇಟ್ 'ಕೌನ್ ಬನೇಗ

ಕ್ರೋರ್ ಪತಿ?' ನಡೆಸುತ್ತಿರುವ ಅಮಿತಾಭ್ ಬಚ್ಚನ್ ತರಾನೇ ಕಾಣ್ತಾರೆ. ಆಗ ನಿನಗೆ ದುಃಖನೂ ಇರಲ್ಲ ; ಅವರ ಗಡ್ಡನೂ ಹೋಗಲ್ಲ. ಬೇರೆಯವರ ಬಾಯಿಗೆ ಅವರಾಗ ಬೀಳುವುದೂ ಇಲ್ಲ,'' ಎಂದೆಲ್ಲಾ ಸುಂದರ ಭಾಷಣ ಬಿಗಿದ.

ಆದರೆ ಬೆಕ್ಕಿನ ಕೊರಳಿಗೆ ಗಂಟೆ ಕಟ್ಟುವವರಾರು? ದಿನೇಶನ್ನ ಒಪ್ಪಿಸಿ, ಅವನ ಅಜಶ್ಮಶ್ರುವನ್ನು ಸ್ಪರ್ಶಿಸುವ ಧೈರ್ಯ ಅದಾರಿಗಿದೆ? ಹಗಲಲ್ಲಿ ಈ ಅಗ್ನಿಪರ್ವತದೊಂದಿಗೆ ಸೆಣಸಾಡುವ ಬದಲು, ರಾತ್ರಿ ಆತ ನಿದ್ರಾಲೋಕದಲ್ಲಿ ವಿಹರಿಸುತ್ತಿರುವಾಗ, ಅವನ ಗಡ್ಡದ ಕೆಲವು ಬೇಡದ ಭಾಗಗಳನ್ನು ಕದ್ದುಬಿಡುವುದು ಸೂಕ್ತವೆಂದು ತಾಯಿ-ಮಗ ನಿರ್ಧರಿಸಿದರು. ಏಕೆಂದರೆ ನಿದ್ರೆಯಲ್ಲಿ ಕುಂಭಕರ್ಣ ಮೊದಲಿಗನಾದರೆ, ಎರಡನೆಯವ ಇವನೇ! ದಿನೇಶ ನಿದ್ದೆಯಲ್ಲಿರುವಾಗ ಕುಂಭದೊಳಗಾದ್ರೂ ಹಾಕಿ, ಕುಂಭೀಪಾಕ ನರಕಕ್ಕಾದರೂ ಹಾಕಿ, ಅವನಿಗೆ ಎಚ್ಚರವಂತೂ ಆಗುವುದಿಲ್ಲ.

ಏನೇ ಆಗಲಿ ತಮ್ಮ ಕಾರ್ಯ ಅರ್ಧದಲ್ಲಿ ಎಡವಿ ನಿಲ್ಲಬಾರದೆಂಬ ದೂರಾಲೋಚನೆಯಿಂದ, ಆತನನ್ನು ಇನ್ನಷ್ಟು ಗಾಢನಿದ್ರೆಗೆ ತಳ್ಳಲು 'ಪಿಜ್ಜಿ ಮದ್ದ'ನ್ನು ಮಾಡಿ ಹಿರಿಯರನ್ನು ಅನುಸರಿಸಿದಳು ಆಶ. ''ಮಗಾ, ಯಾಕೋ ಇತ್ತೀಚೆಗೆ ನಿದ್ದೆನೇ ಬರಲ್ಲ. ದಿನಾ ಒಂದಿಷ್ಟು 'ಕಾಯಿಹಾಲು' ಹಾಕಿ ಗಸಗಸೆ ಪಾಯಸ ಮಾಡು. ಅದನ್ನು ಕುಡಿದರೆ ಖಂಡಿತಾ ನಿದ್ದೆ ಬರುತ್ತೆ'' ಎನ್ನುತ್ತಿದ್ದ ಪಿಜ್ಜಿಯ ನೆನಪಾಗಿ, ಅದನ್ನು ನೇರವಾಗಿ ದಿನೇಶನ ಮೇಲೇ ಪ್ರಯೋಗಿಸಿದಳು ಆಶ. ನಿದ್ರೆಮಾತ್ರೆ ಕೊಟ್ಟು ಸಿಕ್ಕಿ ಬೀಳುವುದಕ್ಕಿಂತ, ಗಸಗಸೆ ಪಾಯಸ ಕೊಟ್ಟು ಮೇಲೆ ಬೀಳುವುದೇ ಜಾಣತನವೆಂದು ಬಗೆದು ಮುದಗೊಂಡಳು. ದಪ್ಪ ತೆಂಗಿನ ಹಾಲನ್ನು ಬೆರೆಸಿ, ರುಚಿರುಚಿಯಾಗಿ ಮಾಡಿದ ಗಸಗಸೆ ಪಾಯಸ, ಬಿಸಿಬಿಸಿಯಾಗಿ ದಿನೇಶನ ಗಂಟಲಲ್ಲಿ ಕೆಳಗಿಳಿಯುವುದನ್ನು ಕಂಡು, ಲಗುಬಗೆಯಿಂದ ಬೇಗ ಬೇಗನೆ ಅವನ ಶಯನೋತ್ಸವಕ್ಕೆ ಅಣಿಗೊಳಿಸಿ ಕಾದು ನಿಂತಳು.

ಆತ ನಿದ್ರೆಯ ಆಳಕ್ಕೆ ಇಳಿಯುತ್ತಿದ್ದಂತೆ, ಮಗನೇ ಪಿತನಿಗೆ ನಾಪಿತನಾದ! ಹದಿನಾಲ್ಕರ ಹರೆಯದ ಆತನಿಗಿನ್ನೂ ಗಡ್ಡ-ಮೀಸೆಗಳು ಮೂಡಿರಲಿಲ್ಲವಾಗಿ, ಆತನಿಗೂ ಸರಿಯಾಗಿ ಶೇವ್ ಮಾಡಲು ಬರದು. ಆದರೂ ಹೆತ್ತ ತಾಯಿಯ ತೃಪ್ತಿಗಾಗಿ ಆತ ತನಗೆ ತಿಳಿದಷ್ಟು ತಿಣಕಾಡಿ ಒಂದಷ್ಟು ಗಡ್ಡವನ್ನು ಗೆರ್ಪಿದ. ಅಲ್ಲಲ್ಲಿ ಕೂದಲುಳಿದು, ಇನ್ನೂ ಒಂದಿಷ್ಟು ವಿಚಿತ್ರವಾಯ್ತು. ಅದನ್ನು ಸರಿಪಡಿಸಲು ಇಬ್ಬರೂ ಕತ್ತರಿ ಪ್ರಯೋಗ ನಡೆಸಿದರು. ಆದರೆ ದಿನೇಶ ಅಂಗಾತ ಮಲಗದೆ, ಅಡ್ಡ ತಿರುಗಿ ಮಲಗಿದ್ದರಿಂದ ಇಷ್ಟೆಲ್ಲಾ ಪ್ರಯೋಗ ನಡೆದದ್ದು ಅವನ ಎಡ ಕೆನ್ನೆ-ಗಲ್ಲದ ಮೇಲೆ ಮಾತ್ರ. ಆಗಲೇ ಆಶಗೆ ನೆನಪಾದದ್ದು; ಅವನು ಹೆಚ್ಚೂ ಕಡಿಮೆ ಒಂದೇ ಬದಿಗೆ ತಿರುಗಿ ಮಲಗುವ ಪರಿಪಾಟದವನೆಂದೂ, ಮತ್ತೆ ಹೇಗೆ ಮಲಗುತ್ತಾನೋ ಹಾಗೆಯೇ ಬೆಳಗ್ಗೆ ಏಳುವನೆಂದು. ಅವನು ಪುನಃ ಪುನಃ ತಿರುಗಿ ಮಲಗುವುದು ತುಂಬಾ ಅಪರೂಪ.

ಈಗ, ಪುನಃ 'ಸಿಕ್ಕಿಬಿದ್ದೆವಲ್ಲಾ' ಎಂದು ಸಂಕಟವಾಯ್ತು ಆಶಗೆ. ಅರ್ಧ ಮುಖ ಒಂದು ರೀತಿ, ಇನ್ನೊಂದು ಅರ್ಧ ಮುಖ ಬೇರೊಂದು ರೀತಿ ಇರುವುದನ್ನು ನೋಡಿ, ದಿನೇಶ ಹೌಹಾರಿ, ಆಮೇಲೆ ತಮ್ಮ ಮೇಲೆ ಹಾರಿ ರಾದ್ಧಾಂತ ಮಾಡಲಾರನೆ ? ಈತ ರುದ್ರತಾಂಡವವನ್ನೋ, ಕಾಳಿಂಗ ಮರ್ದನವನ್ನೋ ಶುರುಮಾಡಿ ರೌದ್ರಾವತಾರ ತೋರಿದರೆ ಹೇಗಿರಬಹುದೆಂದು ಎಣಿಸಿಯೇ ತರತರಗುಟ್ಟಿದಳು ತರಳೆ !

ಎಷ್ಟಾದರೂ ಮಕ್ಕಳು ದೊಡ್ಡವರಿಗಿಂತ ಚುರುಕಲ್ಲವೆ? ಆದ್ದರಿಂದ ಇಂಥಾ ಪರಿಸ್ಥಿತಿಯಲ್ಲೂ ಕಂಗೆಡದೆ, 'ಪಂಚತಂತ್ರ' ಕಥೆಗಳಲ್ಲಿ ಬರುವ ಮೊಲ, ಗೂಬೆ, ಇತ್ಯಾದಿಗಳಿಗಿಂತ ಚತುರನಾದ ಆಕೆಯ ಸುಪುತ್ರ, ತಂದೆಯ ಹೊದಿಕೆಯ ತುದಿಯನ್ನೇ ಸುರುಳಿಮಾಡಿ, ಅವನ ಮೂಗಿನ ಹೊಳ್ಳೆಯೊಳಗೆ ಬಿಟ್ಟ. ಅದು ಒಳಹೊಕ್ಕು ಕತುಕುಳಿ ಮಾಡಲು, ಉದ್ದಕ್ಕೆ ನಾಲ್ಕು 'ಹಕ್ಷಿ ಹಾಕ್ಷಿ' ಗಳನ್ನು ಪಕ್ಷಿಯಂತೆ ಹಾರಿಸಿದ ಮುಖೇಶನ ಹೆತ್ತ -ಅಪ್ಪ! ಆಗ ಅಡಗಿ ಕುಳಿತ ಅವರಿಬ್ಬರೂ, ಮೂಗಿಗಾದ ರಗಳೆಯಿಂದ ಇನ್ನೊಂದು ಪಕ್ಕಕ್ಕೆ ತಿರುಗಿ ಮಲಗಿದ ದಿನೇಶನನ್ನು ಕಂಡು ಸಮಾಧಾನದ ನಿಟ್ಟುಸಿರಿಟ್ಟು, ಹೊರಬಂದರು.

ಮತ್ತೆ ಕೆಲವು ನಿಮಿಷಗಳಲ್ಲೇ ಪುನಃ ಅವರಿಬ್ಬರೂ 'ಆಪರೇಶನ್ ಜಾಕ್‌ಪಾಟ್' ಪ್ರಾರಂಭಿಸಿ, ಹಾಗೂ ಹೀಗೂ ಹರಸಾಹಸ ಮಾಡಿ ಒಂದಷ್ಟು ಗಡ್ಡವನ್ನು ತೆಗೆದು, 'ಟ್ರಿಂ' ಮಾಡಿ ಮುಗಿಸಿದ್ದೇವೆಂದು ತಿಳಿದು ಮಲಗಿದರು. ಮಲಗುವಾಗಲೇ ಗಂಟೆ ಒಂದನ್ನು ದಾಟಿತ್ತಾದ್ದರಿಂದ ಬೆಳಿಗ್ಗೆ ಇಬ್ಬರಿಗೂ ಬೇಗನೆ ಎಚ್ಚರವಾಗಲೇ ಇಲ್ಲ. ಗಸಗಸೆ ಪಾಯಸದ ಮಹತ್ವವೂ ಸೇರಿಕೊಂಡದ್ದರಿಂದ ನಿದ್ರಾಲೋಕದಲ್ಲೇ ಸಂತೋಷದಿಂದ ವಿಹರಿಸುತ್ತಿದ್ದ ಅವರಿಗೆ ದಿನೇಶನ ಮೇಘಗರ್ಜನೆಯಿಂದ ಸುಪ್ರಭಾತ(!)ವಾಯ್ತು.

ನಿದ್ದೆಯ ಮಂಪರಿನಿಂದಾಗಿ 'ರಾತ್ರಿ ಸಾಹಸಗಾಥೆ'ಯ ನೆನಪಿಲ್ಲದೆ, ಅವರುಗಳು ಈತನ ಕೂಗಾಟ ಕೇಳಿ ತೂರಾಡುತ್ತಾ ಬಂದರು. ಗುರುತೇ ಸಿಗದಂತಾಗಿದ್ದ ದಿನೇಶನ ಮುಖವನ್ನು ಕಂಡು ಆಶಗೆ ಆತನಾರೆಂದು ಮತ್ತಷ್ಟು ಗಾಭರಿಯಾಯ್ತು. ಯಾವುದೋ ಕೆಟ್ಟ ಮಿಕವನ್ನು ಕಂಡಂತಾಗಿ, ಅವನನ್ನೇ ಮಿಕಿ ಮಿಕಿ ನೋಡುತ್ತಾ ಕಿಟಾರೆಂದು ಕಿರುಚಿದಳು. ಮಗನೂ ಗಾಬರಿ- ಅನುಮಾನಗಳಿಂದ ನೋಡುತ್ತಿದ್ದವನು ಫಕ್ಕನೆ ಕೀಟಲೆಯಿಂದ ಕಿಟಿಕಿಟಿ ನಗಲಾರಂಭಿಸಿದ.

ಆಶಳ ಚೀರಾಟ, ಮುಖೇಶರ ನಗೆ-ನಗೆಯಾಟಗಳ ಮಧ್ಯೆ ದಿನೇಶನ ಕೂಗಾಟ ನಾಗಲೋಟ ಮಾಡಿತು.

ಬೌನ್ಸಿಂಗ್ ಬಾಲ್ ತರ ನೆಗೆದಾಡುತ್ತಾ ''ಅಪ್ಪಾ, ಅಪ್ಪಾ, ನೀವೀಗ ಥೇಟ್ 'ಅಂಬಿ ತಾಗಿದ ಬಚ್ಚ' ನ ಹಾಗೆ ಇದ್ದೀರಿ. ಗಡ್ಡ ಬೆಳೆಸಿ ಅಮಿತಾಭ್ ಬಚ್ಚನ್ ತರ ಆಗ್ತೀರೀಂದ್ರೆ ಈಗ ... ಹ.. ಹ್ಹ.. ಹ್ಹಾ..'' ಎಂದು ಹೊಟ್ಟೆ ಹಿಡಿದು ಕುಳಿತೇಬಿಟ್ಟ ನಗೆಯ ತರಂಗಗಳನ್ನು ಎಬ್ಬಿಸುತ್ತಾ.



ಆಗಷ್ಟೇ ತನ್ನವನ ವಿಕಾರ ಮುಖದ 'ಪರಿಚಯ'ವಾಗಿ ದುಃಖ, ಸಂಕಟ ಉಕ್ಕೇರಿ ಬಂತು ಆಶಗೆ. ಇದೇ ವಿಕಾರವದನದಿಂದ ಈತ ತಿರುಗಾಡಲಿಕ್ಕೆ ಶುರುಮಾಡಿಬಿಟ್ಟರೆ (?) ಎಂದು ನೆನೆದೇ ಆಕೆಗೆ ಹೊಟ್ಟೆಯಲ್ಲಿ ಕೆಟ್ಟ ಅನುಭವವಾಗತೊಡಗಿತು.

ಅಲ್ಲಿಷ್ಟು ಇಲ್ಲಿಷ್ಟು ಉದ್ದ ಕೂದಲು, ಮತ್ತೆಲ್ಲೋ ಗಿಡ್ಡ ತರಿತರಿ ಕೂದಲು, ಕೆಸರು ಸಿಡಿದಂತೆ ಮುಖದ ತುಂಬಾ ವಿಚಿತ್ರ ಆಕಾರದಲ್ಲಿ ಕಪ್ಪು ಬಿಳಿ ಮಿಶ್ರಿತ ಕೂದಲು! ಇದನ್ನೆಲ್ಲಾ ಕಂಡು ಆತನಿಗೆ ಇದರಲ್ಲಿ ತನ್ನ ಅರ್ಧಾಂಗಿ ಹಾಗೂ ಪುತ್ರರತ್ನನ ಕೈವಾಡ ಉಂಟೆಂದು ತಿಳಿಯಿತೋ, ಬಿಟ್ಟಿತೋ ಗೊತ್ತಿಲ್ಲ. ಆದರೆ ಅತ್ಯಾಶ್ಚರ್ಯಕರವಾದ ರೀತಿಯಲ್ಲಿ ಪುನಃ ಉಗ್ರರೂಪತಾಳದೆ, ದೃಷ್ಟಿಯಲ್ಲೇ ಈರ್ವರನ್ನೂ ಆಪಾದಮಸ್ತಕ ಅಳೆದ ಅವನು, ಕಡೆಗೂ ತಾನೇ ಗಡ್ಡ-ಮೀಸೆ ಎಲ್ಲಾ ತೆಗೆದು, ಗ್ರಹಣಬಿಟ್ಟ ಚಂದ್ರಮನಂತೆ ಶೋಭಿಸುತ್ತಾ, ಮೌನವಾಗಿ ಆಫೀಸಿಗೆ ನಡೆದುಬಿಟ್ಟ.

ಅಂತೂ ತಮ್ಮ ಆಪರೇಶನ್ ಜಾಕ್‌ಪಾಟ್ ಸಕ್ಸಸ್ ಆಗಿದ್ದರಿಂದ, ಅಂದು ಹಬ್ಬದ ಅಡಿಗೆ ಮಾಡಿ, ಮಗನಿಗಿಷ್ಟವಾದ ಸಿಹಿ ಭಕ್ಷ್ಯಗಳನ್ನು ತಯಾರಿಸಿ ಸಂಭ್ರಮಿಸಿದಳು ಆಶ. 'ಸಜೀವ'ವಾಗಿದ್ದ ತನ್ನನ್ನು ಕಿತ್ತು ತಿನ್ನುತ್ತಿದ್ದ ಆ 'ನಿರ್ಜೀವ' ಗಡ್ಡದಿಂದ ಮುಕ್ತಿ ದೊರಕಿಸಿ ಕೊಟ್ಟ ಮಗ ಆಶಳ ಪಾಲಿಗೆ 'ಸೂಪರ್ ಮ್ಯಾನೇ' ಆಗಿದ್ದ. ತನ್ನ ಸಂಕಟಕ್ಕೆ ಮಾರಕನಾಗಿ ಬಂದು, ಪತಿರಾಯನ ಶ್ಮಶ್ರುಗಾಥಕ್ಕೊಂದು ತೆರೆ ಎಳೆದ ಸುಕುಮಾರ ಸುಂದರ ಕುಮಾರ ಕಂಠೀರವನಿಗೆ ಷೋಡಶೋಪಚಾರ ಮಾಡಿ, ಅತ್ಯಂತ ಸಂತೃಪ್ತಿಯನ್ನು ಹೊಂದಿದಳು ಮುಖೇಶಮಾತೆ!

(ಶ್ಮಶ್ರು=ಗಡ್ಡ. ಅಜಶ್ಮಶ್ರು=ಹೋತದ ಗಡ್ಡ. ಅಂಬಿ=ಸೆಗಣಿ)

**ಸತ್ಯವತಿ**

W/O ಡಾ|| ಎಸ್. ಹರಿಕೃಷ್ಣನ್, ಸರ್ಜನ್ ಡೆಂಟಿಸ್ಟ್, ಸುರತ್ಕಲ್ - ೫೭೫ ೦೧೪

*ಬಂಡವಾಳದ ಚಲನೆಯನ್ನು ನಿಯಂತ್ರಿಸುವುದು ಎಲ್ಲಕ್ಕಿಂತ ಮಿಗಿಲಾದ ನಿಸ್ಸಂದಿಗ್ಧ ನಿರ್ಣಯವಾಗಬೇಕು. ಇಲ್ಲದಿದ್ದರೆ ಬಂಡವಾಳ (ಹಣ) ಮಾಯಾ ಹಾಸುಗಂಬಳಿಯ ವೇಗದಲ್ಲಿ ಸ್ಥಳಾಂತರಗೊಳ್ಳುತ್ತದೆ. ಬಂಡವಾಳದ ಅನಿರ್ಬಂಧಿತ ಚಲನೆ ಎಲ್ಲಾ ವಿಧವಾದ ವ್ಯವಸ್ಥಿತ ವ್ಯಾಪಾರ ವ್ಯವಹಾರಗಳನ್ನು ವಿಘಟಿಸುತ್ತದೆ. ಸ್ಥಿರವಾದ ಉದ್ಯಮಗಳಲ್ಲಿ ಊಹೆಯ ವ್ಯಾಪಾರ ಹೊಳೆಯ ಮೇಲಿನ ಗುಳ್ಳೆಗಳಂತೆ, ಅವುಗಳಿಂದ ಯಾವ ವಿಧವಾದ ಅಪಾಯವಿಲ್ಲ. ಆದರೆ ಊಹೆಗೆ ವ್ಯಾಪಾರದ ಸುಳಿಯಲ್ಲಿ ಉದ್ಯಮವೇ ಗುಳ್ಳೆಯಾದಾಗ ಪರಿಸ್ಥಿತಿ ಅತ್ಯಂತ ಗಂಭೀರವಾಗುತ್ತದೆ.*

*ಐ. ಎಂ. ಎಫ್. ವರ್ಲ್ಡ್ ಬ್ಯಾಂಕ್‌ಗಳ ಕರ್ತವ್ಯವನ್ನು ಕುರಿತು - ಜಾನ್ ಮೇನಾರ್ಡ್ ಕೀನ್ಸ್ (೧೯೪೪ರಲ್ಲಿ).*

# ಜಾಗತಿಕ ಬಂಡವಾಳಕ್ಕೆ ಲಗಾಮು

**ಮ. ಮಹೇಶನ್**

ಕೀನ್ಸ್‌ನ ಮಾತು ಎಂತಹ ಭವಿಷ್ಯವಾಣಿ ! ಅದರ ಒಂದೊಂದು ಅಕ್ಷರವೂ ಇಂದು ನಿಜವಾಗಿದೆ. ಅವನ ಹೇಳಿಕೆಯ ಅಂತರ್ಯದಲ್ಲಿ ಅಡಗಿರುವ ಅಂಜಿಕೆ, ಆತಂಕ, ಅನುಮಾನಗಳು ಇಂದು ಕಟುವಾಸ್ತವಗಳಾಗಿವೆ, ಮಾತ್ರವಲ್ಲ ಇಂದಿನ ಪ್ರಪಂಚದ ಹಣಕಾಸಿನ ವ್ಯವಸ್ಥೆಯನ್ನು ವೀಕ್ಷಿಸಿದವರಿಗೆ ಅವನ ಹೇಳಿಕೆ ಬಹಳ ಮೃದುವಾಯಿತೆಂದು ಅನಿಸುತ್ತದೆ. ಗಂಭೀರ ಸ್ಥಿತಿಯನ್ನು ಮುಟ್ಟಿರುವ, ಅಸ್ಥಿರತೆಗೆ ಮತ್ತೊಂದು ಹೆಸರಾಗಿರುವ, ಅನೇಕ ದೇಶಗಳ ಅರ್ಥವ್ಯವಸ್ಥೆಗಳನ್ನು ವಿನಾಶದ ಅಂಚಿಗೆ ತಳ್ಳಿರುವ, ತಳ್ಳುತ್ತಿರುವ ಹಣಕಾಸಿನ ವ್ಯವಸ್ಥೆ ಗಾಬರಿಹುಟ್ಟಿಸುತ್ತದೆ. ತ್ವರಿತ ಸುಧಾರಣಾ ಕಾರ್ಯಕ್ರಮಗಳ ಅಗತ್ಯ ಎಂದಿಗಿಂತಲೂ ಇಂದು ಪ್ರಸ್ತುತವೆನಿಸಿದೆ. ಏಕೆ ಮತ್ತು ಹೇಗೆ ಇಂತಹ ಪರಿಸ್ಥಿತಿ ಬಂದಿತು ?

೧೯೮೦ರ ದಶಕದ ಮಧ್ಯಭಾಗದಲ್ಲಿ ಬ್ರೆಟನ್‌ವುಡ್ಸ್ ಅವಳಿಗಳೆಂದೇ ಜನಜನಿತವಾಗಿರುವ ಜಾಗತಿಕ ಹಣಕಾಸು ನಿಧಿ (ಐ. ಎಂ. ಎಫ್.), ವಿಶ್ವಬ್ಯಾಂಕ್ (ವರ್ಲ್ಡ್ ಬ್ಯಾಂಕ್) ಮತ್ತು ಅಮೆರಿಕನ್ ಟ್ರೆಜರಿ ಈ ಮೂರು ಸಂಸ್ಥೆಗಳ ಮಾನಸಿಕ ಮಂಥನದಿಂದ ಹೊರಹೊಮ್ಮಿದ 'ವಾಷಿಂಗ್‌ಟನ್ ಒಮ್ಮತ' ಸಾದರಪಡಿಸಿದ ಸೂತ್ರಾವಳಿಗಳನ್ನು ಆಧರಿಸಿದ ಪ್ರಾಪಂಚೀಕರಣ ಪ್ರಕ್ರಿಯೆ ಇಂದು ಎಲ್ಲಾ ಸಾರ್ವಭೌಮ ರಾಷ್ಟ್ರಗಳ ಅರ್ಥ ವ್ಯವಸ್ಥೆಗಳ ರೂಪರೇಷೆಗಳನ್ನು ನಿರ್ಧರಿಸುವಲ್ಲಿ ಪ್ರಬಲ ಪ್ರಭಾವವನ್ನು ಬೀರುತ್ತಿರುವುದು ಒಂದು ಜಾಗತಿಕ ಸತ್ಯ. ಜಾಗತೀಕರಣ ಪ್ರಕ್ರಿಯೆ ಅತ್ಯಂತ ಸಂಕೀರ್ಣವಾದ ಬಹುಸ್ತರಗಳ ತಾತ್ವಿಕ ಮತ್ತು ಪ್ರಾಯೋಗಿಕ ಅರ್ಥವ್ಯಾಪ್ತಿಗಳನ್ನು ಪಡೆದುಕೊಂಡಿದೆಯಾದರೂ ಅದರ ಅತ್ಯಂತ ಪ್ರಧಾನ ಮುಖವೆಂದರೆ ಬಂಡವಾಳದ ಜಾಗತೀಕರಣ. ವಾಸ್ತವವಾಗಿ ಈ ಆಯಾಮವೇ ಈ ಪ್ರಕ್ರಿಯೆಯ ಪ್ರಭಾವಕ್ಕೊಳಪಡುವ ಜೀವನದ ಪ್ರತಿಯೊಂದು ವಲಯದ ಆಕಾರವನ್ನು ನಿಶ್ಚಿತಗೊಳಿಸುತ್ತದೆ. ಈ ಪ್ರಕ್ರಿಯೆಯ ನಿರಂತರ ಚಾರಣದ ಸಾರಥ್ಯವನ್ನು, ೧೯೯೫ ರಿಂದೀಚೆಗೆ, ಗ್ಯಾಟ್ ಒಪ್ಪಂದದಿಂದ ಜನ್ಯವಾದ ವಿಶ್ವ ವ್ಯಾಪಾರ ಸಂಘಟನೆ ವಹಿಸಿಕೊಂಡಿದೆ. ವಾಷಿಂಗ್‌ಟನ್ ಒಮ್ಮತದ ನಾಲ್ಕು ಕಟ್ಟಳೆಗಳಲ್ಲಿ ಅತ್ಯಂತ ಪ್ರಮುಖವಾದುದೆಂದರೆ ಹಣಕಾಸಿನ ಉದಾರೀಕರಣ ಮತ್ತು ಜಾಗತೀಕರಣ. ಈ ನಿಬಂಧನೆಯನ್ನು ಕಾರ್ಯರೂಪಕ್ಕೆ ತರುವ ವಿಧಾನವನ್ನು ನಾಣ್ಯದ ಪರಿವರ್ತೀಕರಣವೆಂದು ಕರೆಯಬಹುದು. ಒಂದು ಸಾರ್ವಭೌಮ ರಾಷ್ಟ್ರದ ಆಂತರಿಕ ಹಣಕಾಸಿನ ವ್ಯವಸ್ಥೆಗೆ ಅಡಿಪಾಯವಾದ ದೇಶೀಯ ನಾಣ್ಯ(ಕರೆನ್ಸಿ)ವನ್ನು ಅಂತರರಾಷ್ಟ್ರೀಯ ಹಣಕಾಸಿನ (ಅಂದರೆ ಅಮೆರಿಕನ್ ಡಾಲರ್) ವಲಯದ ಅಂಗಭಾಗವನ್ನಾಗಿಸುವುದೇ ಹಣಕಾಸಿನ ಜಾಗತೀಕರಣ. ಇದರಿಂದ ಅಂತರರಾಷ್ಟ್ರೀಯ ವ್ಯಾಪಾರ ಮತ್ತು ಹೂಡಿಕೆ ವಲಯಗಳಲ್ಲಿ ಬಂಡವಾಳ (ಹಣ)ದ ಸರಾಗ ಚಲನೆಗೆ ಅಡ್ಡಿಯಾಗುವ ಎಲ್ಲಾ ವಿಧವಾದ ನಿರ್ಬಂಧಗಳನ್ನು ತೊಡೆದುಹಾಕಿ ಮುಕ್ತತೆಯನ್ನು ಖಾತ್ರಿಗೊಳಿಸಿದಂತಾಗುತ್ತದೆ. ಇದಕ್ಕಾಗಿ ದೇಶೀಯ ಹಣಕಾಸಿನ ವ್ಯವಸ್ಥೆ ಮತ್ತು ನಡೆವಳಿಕೆಗಳು ಸಂಪೂರ್ಣವಾಗಿ ಮಾರುಕಟ್ಟೆ ಆಧಾರಿತವಾಗಿರಬೇಕು. ಹಣಕಾಸಿನ ವ್ಯವಹಾರದ ವಿವಿಧ ಭಾಗಗಳಾದ ಬಡ್ಡಿ, ಬಡ್ಡಿ ದರ, ಸಾಲ, ಸಾಲಗಳ ಸ್ವರೂಪ, ಸಾಲ ವಿತರಣೆಯ ಮಾರ್ಗಗಳು, ಸಾಲದ ಗೊತ್ತು ಗುರಿಗಳು, ಆದ್ಯತೆಗಳು ಮತ್ತು ಅಗತ್ಯಗಳು ಇವುಗಳನ್ನು ಮಾರುಕಟ್ಟೆಯ ಶಕ್ತಿಗಳೇ ನಿರ್ಧರಿಸಬೇಕೆ ಹೊರತು ಪ್ರಭುತ್ವಗಳಲ್ಲ. ದೇಶೀಯ ನಾಣ್ಯದ ಆಂತರಿಕ ಮತ್ತು ಬಾಹ್ಯ ಚಲನೆಯ ಮೇಲಿನ ಹತೋಟಿ, ಅದರ ಆಂತರಿಕ ಮತ್ತು ಬಾಹ್ಯ ಮೌಲ್ಯಗಳನ್ನು ತೀರ್ಮಾನಿಸುವ ಅಧಿಕಾರ ಮಾರುಕಟ್ಟೆಯಲ್ಲಿ ನೆಲೆಗೊಳ್ಳಬೇಕು; ದೇಶದ ಕೇಂದ್ರ ಬ್ಯಾಂಕ್‌ಗಳಲ್ಲಲ್ಲ. ಹಾಗಾದಾಗ ದೇಶೀಯ ಹಣಕಾಸಿನ ವ್ಯವಸ್ಥೆ ಜಾಗತಿಕ ಹಣಕಾಸಿನ ವ್ಯವಸ್ಥೆಯೊಂದಿಗೆ ಸಂಪೂರ್ಣವಾಗಿ ಸಮೀಕರಣಗೊಂಡಂತೆ. ಇದು ನಾಣ್ಯದ ಪರಿವರ್ತೀಕರಣದ ಸಾರಾಂಶ.

ಹೊಸ ಉದಾರ ನೀತಿಯ ಪ್ರಣಾಳಿಕೆಯಂತಿದ್ದ 'ವಾಷಿಂಗ್‌ಟನ್ ಒಮ್ಮತ' ಮತ್ತು ಸರ್ಕಾರಗಳ ಎಲ್ಲಾ ಆರ್ಥಿಕ ಚಟುವಟಿಕೆಗಳ ಖಾಸಗೀಕರಣ, ಇವು ಆರ್ಥಿಕ ಪುನರ್ ವಿನ್ಯಾಸ ಯೋಜನೆಯ ಅವಿಭಾಜ್ಯ ಅಂಗಗಳಾಗಿದ್ದರಿಂದ ಊಹೆಯ ಕರೆನ್ಸಿ ವ್ಯಾಪಾರದ ಪೆಡಂಭೂತ ತಲೆ ಎತ್ತಿತು. ೧೯೮೦ರ ದಶಕದಲ್ಲಿ ಬ್ರೆಟನ್‌ವುಡ್ಸ್ ಅವಳಿಗಳ ತಾತ್ವಿಕ ಆಲೋಚನೆಗಳಲ್ಲಿ ಉಂಟಾದ ಗುರುತರ ಬದಲಾವಣೆ ಗಮನಾರ್ಹವಾದುದು.

೨೦ನೇ ಶತಮಾನದ ಅರ್ಥಶಾಸ್ತ್ರಜ್ಞನಾದ ಜಾನ್ ಮೇನಾರ್ಡ್ ಕೀನ್ಸ್‌ನ ಚಿಂತನೆಯ ಮೂಸೆಯಲ್ಲಿ ಅರಳಿದ ಆಲೋಚನೆಗಳಾಗಿದ್ದ ಸ್ಥಿರ ವಿನಿಮಯ ದರ, ಹೂಡಿಕೆಯ ಬಂಡವಾಳದ ಮೇಲೆ ತೀವ್ರ ನಿಯಂತ್ರಣ ಮತ್ತು ಸಾಮಗ್ರಿಗಳ ವ್ಯಾಪಾರದಲ್ಲಿ ಪರಸ್ಪರ, ಅನ್ಯೋನ್ಯ ಮುಕ್ತನೀತಿ, ಇವುಗಳಿಗೆ ಅನುಗುಣವಾಗಿ ಬ್ರೆಟನ್‌ವುಡ್ಸ್ ಒಪ್ಪಂದಗಳ ಪರಿಚ್ಛೇದಗಳು ರೂಪಿತಗೊಂಡವು. ಬ್ರಿಟನ್‌ನ ಪ್ರತಿನಿಧಿಯಾಗಿದ್ದ ಕೀನ್ಸ್‌ನ ವಿನಿಮಯ ದರದ ಬಗೆಗಿನ ಅಚಲ ಅಭಿಪ್ರಾಯಕ್ಕೆ ಮಣಿದು ಐ. ಎಂ. ಎಫ್. ತನ್ನ 'ಆರ್ಟಿಕಲ್ಸ್ ಆಫ್ ಅಗ್ರಿಮೆಂಟ್'ಗಳ ಪರಿಚ್ಛೇದ VIರಲ್ಲಿ ಅಂತರರಾಷ್ಟ್ರೀಯ ಬಂಡವಾಳದ ಚಲನೆಯನ್ನು ನಿಯಂತ್ರಿಸಲು ಅಗತ್ಯವಾದ ನಿಯಂತ್ರಣಾವಿಧಿಗಳನ್ನು ಬಳಸುವ ಅಧಿಕಾರವನ್ನು ಸದಸ್ಯ ರಾಷ್ಟ್ರಗಳಿಗೆ ಕೊಟ್ಟಿತು. ಕೀನ್ಸ್‌ನ ಎಲ್ಲಾ ಪರಿಕಲ್ಪನೆಗಳಿಂದ ಈ ಅವಳಿಗಳು ಕಳೆದ ೨೫ ವರ್ಷಗಳಲ್ಲಿ ಬಹಳ ದೂರ ಸರಿದಿವೆ. ವಾಸ್ತವವಾಗಿ ಅವನ ವಿಚಾರಧಾರೆಗಳಿಗೆ ವಿಮುಖವಾಗಿ ವರ್ತಿಸುತ್ತಿವೆ ಎಂದರೆ ಸತ್ಯಕ್ಕೆ ದೂರವಿಲ್ಲ. ಅಮೆರಿಕದ ಟ್ರೆಜರಿ ಸೆಕ್ರೆಟರಿಯ ಮನದಾಳದಲ್ಲಿ ಮಂಥನಗೊಳ್ಳುತ್ತಿದ್ದ ವಿಚಾರವೇ ಬೇರೆಯಾಗಿತ್ತು. ತನ್ನ ದೇಶದ ಕರೆನ್ಸಿಯನ್ನು ಪ್ರಪಂಚದ ಪ್ರಾಥಮಿಕ ಕರೆನ್ಸಿ ಮಾಡಬೇಕೆಂದು ಮತ್ತು ಎರಡು ಸಂಸ್ಥೆಗಳೂ ಅಮೆರಿಕದ ಶ್ರೇಯಸ್ಸನ್ನು ಪ್ರಾಬಲ್ಯವನ್ನು ಪ್ರಪಂಚದಲ್ಲೆಡೆ ಸಾರುವ ಹಾಗೂ ಅದರ ಹಿತಾಸಕ್ತಿಗಳನ್ನು ಎಲ್ಲ ಕಾಲದಲ್ಲೂ ಕಾಪಾಡುವ ಸಂಸ್ಥೆಗಳಾಗಿ ವಿಕಸಿಸಬೇಕೆಂಬುದು ಅವನ ಮಹತ್ವಾಕಾಂಕ್ಷೆಯಾಗಿತ್ತು. ಅವನು ಬಯಸಿದಂತೆ ಡಾಲರ್ ಸ್ಟರ್ಲಿಂಗ್‌ನ ಸ್ಥಾನವನ್ನು ಆಕ್ರಮಿಸಿಕೊಂಡಿತು. ಆಧುನಿಕ ಹಣಕಾಸಿನ ಚರಿತ್ರೆಯಲ್ಲಿ ತಿರುವು ಬಿಂದು ಎಂದು ಕರೆಯಬಹುದಾದ ತೀರ್ಮಾನವೊಂದನ್ನು ಅಮೆರಿಕ ೧೯೭೫ರಲ್ಲಿ ಕೈಗೊಂಡಿತು. ಆ ವರ್ಷದಲ್ಲಿ ಕೀನ್ಸ್‌ನ ಸ್ಥಿರ ವಿನಿಮಯ ತತ್ವದ ಚರಮಗೀತೆಯನ್ನು ಹಾಡಿ ಪ್ರಪಂಚದ ಪ್ರಾಥಮಿಕ ಕರೆನ್ಸಿ ಆಗಿದ್ದ ತನ್ನ ಡಾಲರ್‌ನ್ನು 'ತೇಲುವ ಕರೆನ್ಸಿ' ಎಂದು ಘೋಷಿಸಿತು. ಅಂದರೆ ಅಂತರರಾಷ್ಟ್ರೀಯ ವಿನಿಮಯ ದರಕ್ಕೆ ಸಂಬಂಧಿಸಿದಂತೆ ಹಣಕಾಸು ಮಾರುಕಟ್ಟೆಯಲ್ಲಿ ಡಾಲರ್ ಮೌಲ್ಯ ವ್ಯತ್ಯಾಸವಾಗಲು ಪೂರ್ಣ ಸ್ವಾತಂತ್ರ್ಯವನ್ನು ಡಾಲರ್ ಪಡೆದುಕೊಂಡಿತು. ಅಂದಿನಿಂದ ಅನಿಯಂತ್ರಿತ ಹೂಡಿಕೆಯ ಬಂಡವಾಳದ ಬಾಹುಳ್ಯ ಹೆಚ್ಚುತ್ತಾ ನಡೆಯಿತು. ಅಮೆರಿಕದ ಖಾಸಗಿ ಬ್ಯಾಂಕುಗಳಲ್ಲಿ ತುಂಬಿ ತುಳುಕುತ್ತಿದ್ದ ಪೆಟ್ರೊ ಡಾಲರ್‌ಗಳು ದಕ್ಷಿಣ ಅಮೆರಿಕ ದೇಶಗಳ ಅಭಿಮುಖವಾಗಿ ಸಾಲದ ರೂಪದಲ್ಲಿ ಹರಿಯಲು ಪ್ರಾರಂಭವಾಯಿತು. ಈ ಸಾಲಗಾರರ ಸಾಲಿಗೆ ಆಗ್ನೇಯ ಏಷ್ಯದ ದೊಡ್ಡ ಸಣ್ಣ ರಾಷ್ಟ್ರಗಳು ಸೇರಲು ಪ್ರಾರಂಭಿಸಿದವು. ೮೦ರಲ್ಲಿ ಸೋವಿಯತ್ ಒಕ್ಕೂಟ ಮತ್ತು

ಪೂರ್ವ ಯುರೋಪ್ ದೇಶಗಳನ್ನು ಹೊರತುಪಡಿಸಿ ಪ್ರಪಂಚದೆಲ್ಲೆಡೆ ಬಂಡವಾಳದ ಚಲನೆಯ ಗತಿ ತೀವ್ರ ಮಾರ್ಪಾಟನ್ನು ಕಂಡಿತು. ಬ್ರಿಟನ್‌ನಲ್ಲಿ ಮಾರ್ಗರೇಟ್ ಥ್ಯಾಚರ್, ಅಮೆರಿಕದಲ್ಲಿ ರೊನಾಲ್ಡ್ ರೀಗನ್, ಇವರ ತೀವ್ರಗಾಮಿ ಬಲಪಂಥೀಯ ಆರ್ಥಿಕ ನೀತಿಯಿಂದ ಮುಕ್ತ ವ್ಯಾಪಾರ ಸಿದ್ಧಾಂತ ವಿಶೇಷ ಶಕ್ತಿಯನ್ನು ಗಳಿಸಿಕೊಂಡು ಹೊಸ ಹೊಸ ಅನುಯಾಯಿಗಳನ್ನು ಅರಸಲಾರಂಭಿಸಿತು. ಜಾಗತಿಕ ಬಂಡವಾಳ ಹೂಡಿಕೆಯ ಹಾದಿಯಲ್ಲಿದ್ದ ಪ್ರತಿಬಂಧಕ ಶಕ್ತಿಗಳು ಕರಗಿಹೋಗಿ ಬಂಡವಾಳದ ಹರಿವಿನ ಪರಿಮಾಣದಲ್ಲಿ ಅಗಾಧ ಹೆಚ್ಚಳ ಉಂಟಾಯಿತು. ಕುರಿಯನ್ ಹೇಳುವಂತೆ ''ಲ್ಯಾಟಿನ್ ಅಮೆರಿಕನ್ ರಾಷ್ಟ್ರಗಳಿಗೆ ೧೯೮೦ರ ದಶಕದಲ್ಲಿ ಹರಿದುಬಂದ ಬಂಡವಾಳದ ಮೊತ್ತದ ಶೇಕಡಾವಾರು ಹೆಚ್ಚಳ ೮೦೦. ಅದೆಲ್ಲ ಬಂದದ್ದು ಖಾಸಗಿ ವಾಣಿಜ್ಯ ಬ್ಯಾಂಕ್‌ಗಳಿಂದ. ಅಂದರೆ ೧೯೮೦ರ ದಶಕದಲ್ಲಿ ಖಾಸಗಿ ಬಂಡವಾಳದ ಪ್ರಭುತ್ವ ಸ್ಥಾಪನೆಯಾಗಿ, ೮೦ರ ಕೊನೆಯಲ್ಲಿ ಸೋವಿಯತ್ ಒಕ್ಕೂಟ ವಿಘಟನೆಯ ನಂತರದ ಪ್ರಪಂಚದಲ್ಲಿ, ೯೦ರ ದಶಕದಲ್ಲಿ, ಖಾಸಗಿ ಬಂಡವಾಳದ ಜಾಗತೀಕರಣಕ್ಕೆ ಪ್ರಶಸ್ತ ಸಂದರ್ಭ ನಿರ್ಮಾಣವಾಯಿತು. ಇದರೊಂದಿಗೆ ಊಹೆಯ ಕರೆನ್ಸಿ ವ್ಯಾಪಾರದ ತಾಂಡವ ನೃತ್ಯವು ಆರಂಭವಾಯಿತು. ಹೊಸ ಉದಾರ ನೀತಿ, ಅನಿಯಂತ್ರಿತ ಬಂಡವಾಳ ಹೂಡಿಕೆ, ಕಂಪ್ಯೂಟರ್ ಕ್ರಾಂತಿ - ಈ ಮೂರು ಬೆಳವಣಿಗೆಗಳು ಬ್ಯಾಂಕಿಂಗ್ ಹಣಕಾಸು ಮತ್ತು ಹೂಡಿಕೆ ಕ್ಷೇತ್ರಗಳಲ್ಲಿ ಹಿಂದೆಂದೂ ಕಂಡರಿಯದಂತಹ ಪರಿವರ್ತನೆಯನ್ನು ತಂದಿತು. ಖಾಸಗಿ ಬ್ಯಾಂಕುಗಳ ರಕ್ಷಕರಾಗಿ ಈ ಸಂಸ್ಥೆಗಳು ನಡೆದುಕೊಂಡವು.

ಊಹೆಯ ಕರೆನ್ಸಿ ವ್ಯಾಪಾರವೆಂದರೇನು ಮತ್ತು ಅದು ವ್ಯಕ್ತವಾಗಿರುವ ಬಗೆಗಳಾವುವು ? ಇಂದಿನ ಜಾಗತಿಕ ಹಣಕಾಸಿನ ವ್ಯವಸ್ಥೆಯಲ್ಲಿ ಅತ್ಯಂತ ಪ್ರಬಲ ಪ್ರತ್ಯಕ್ಷತೆಯನ್ನು ಸ್ಥಾಪಿಸಿ ನಿರಂತರ ವಿಸ್ತರಣೆಯನ್ನು ಕಾಣುತ್ತಿರುವ ಕ್ಷೇತ್ರವೆಂದರೆ ವಿದೇಶಿ ವಿನಿಯಮದ ವ್ಯಾಪಾರ. ಅದು ಮೈದೋರುವ ವಾಹಕಗಳೆಂದರೆ ಬಾಂಡ್ಸ್ ಈಕ್ವಿಟಿಗಳು, ಸೆಕ್ಯುರಿಟಿ ಡಿಪಾಸಿಟ್ ಪತ್ರಗಳು ಮತ್ತಿತರ ವಾಣಿಜ್ಯ ಪತ್ರಗಳು, ಸಂಪುಟ ಹೂಡಿಕೆಯ ಕೆಲವು ಅಂಗಗಳು. ಹಣದ ದ್ರವ್ಯ ರೂಪದ ಈ ಮಾರುಕಟ್ಟೆಗೆ ಊಹೆಯ ಮಾರುಕಟ್ಟೆ ಅಥವಾ ಷೇರ್ ಮಾರುಕಟ್ಟೆ ಎಂದು ಕರೆಯಲಾಗಿದೆ.

ಇಲ್ಲಿ ನಾವು ಗಮನಿಸಬೇಕಾದ ಬಹುಮುಖ್ಯ ವಿಷಯವೆಂದರೆ ಹಣವನ್ನು ಗಳಿಸುವ ವಿಧಾನದಲ್ಲಿ ಉಂಟಾಗಿರುವ ಮಹತ್ತರ ಮಾರ್ಪಾಟು. ಹಣ ಗಳಿಕೆಗೆ ದುಡಿತದ ಉತ್ಪಾದನೆ ಮತ್ತು ಮಾರಾಟದಿಂದ ದೊರೆಯುವ ಫಲ ಆಕರವೆಂದು ಸಾಮಾನ್ಯವಾದ ಗ್ರಹಿಕೆ. ಈ ಗ್ರಹಿಕೆಯಲ್ಲಿ ಮೂಲಭೂತ ಬದಲಾವಣೆಯನ್ನು ಊಹೆಯ ವ್ಯಾಪಾರ ತಂದಿದೆ. ಬಂಡವಳಿಗರಿಗೆ ಈ ದ್ರವ್ಯರೂಪದ ಮಾರುಕಟ್ಟೆಗಳೆಂದರೆ ವಿಶೇಷ ಪ್ರೇಮ. ಏಕೆಂದರೆ ಹೂಡಿಕೆಯಿಂದ ದೊರೆಯಬಹುದಾದ ಲಾಭದ ಮೊತ್ತ ಅಗಾಧ ಮತ್ತು ಲಾಭ ಗಳಿಕೆಗೆ ಬೇಕಾಗುವ ಕಾಲ ಅತ್ಯಲ್ಪ. ಉತ್ಪಾದನೆಯಲ್ಲಿ ಹೂಡುವ ಹಣದಿಂದ ತಕ್ಷಣ ಲಾಭ ದೊರೆಯಲು ಸಾಧ್ಯವಿಲ್ಲ. ಬಡ್ಡಿ ದರಗಳು ಮತ್ತು ಕರೆನ್ಸಿ ಮೌಲ್ಯಗಳ ಏರಿಳಿತಗಳ ಮಾರುಕಟ್ಟೆಗಳಲ್ಲಿನ ಷೇರುಗಳು ವಿಷಮಶೀತಜ್ವರವಿದ್ದಂತೆ. ಅವಾಸ್ತವಿಕ ಅತಿರೇಕಕ್ಕೂ ಅಷ್ಟೆ, ಅವಾಸ್ತವಿಕ ಅಧೋಗತಿಗೂ ಅಷ್ಟೆ. ಅತಿರೇಕದ ಕಾಲವನ್ನೇ ಗೂಳಿಗಳ ಪ್ರಭುತ್ವ ಎಂದು ಷೇರ್ ಬ್ರೋಕರ್ ಕರೆಯುವ ಸುವರ್ಣ ಸಂಧಿ. ಈ ಸಂಧಿ ಕಾಲದಲ್ಲಿ ಅಪಾರ ಹಣವನ್ನು ಗಳಿಸುತ್ತಾರೆ.

ಹಣಕಾಸಿನ ಮೇಲಿನ ನಿಯಂತ್ರಣವನ್ನು ತೆಗೆದುಹಾಕುವುದರಿಂದ ಹಣ ಅಂದರೆ ಬಂಡವಾಳ ತನ್ನದೇ ಆದ ಹೊಸ ಹೊಸ ಆಕಾರಗಳನ್ನು ಪಡೆದುಕೊಳ್ಳುತ್ತದೆ. ಇಂದು ಪ್ರಪಂಚದ ಷೇರು ಪೇಟೆಗಳಲ್ಲಿ ಪ್ರಭುತ್ವವನ್ನು ಸ್ಥಾಪಿಸಿರುವ 'ಹೊಸ ಆರ್ಥಿಕತೆ' ಬಂಡವಾಳದ ಹೊಸ ಆಕಾರದ ದ್ಯೋತಕ. ಇಂತಹ ಆಕಾರಗಳನ್ನೇ ಕಾರ್ಲ್ ಮಾರ್ಕ್ಸ್ ಮತ್ತು ಹಿಲ್‌ಫರ್‌ಡಿಂಗ್ ಕೃತಕ ಬಂಡವಾಳ ಎಂದು ಕರೆದಿದ್ದರು. ಹೈಮನ್ ಮಿನ್ಸ್ಕಿ ಇದನ್ನು 'ಪೊಂಜಿ ಫೈನಾನ್ಸ್' ಅಂದರೆ, ದುರ್ಗಂಧದ ದುರ್ನಾತ ಬೀರುವ ಹಣ ಎಂದು ಕರೆದಿದ್ದಾರೆ.

ಊಹಾತ್ಮಕವಾದ ಹೂಡಿಕೆ ಅಸಹಜ. ಅದು ಅನೇಕ ಬಾರಿ ವಿವೇಚನೆಗೂ ನಿಲುಕದ ಅರ್ಥ ವ್ಯವಸ್ಥೆಯಲ್ಲಿ ಅಸ್ಥಿರತೆಯನ್ನುಂಟುಮಾಡುವ ವರ್ಗಕ್ಕೆ ಸೇರಿದುದಾಗಿದೆ. ಈ ನಕಲು ಹಣದ ಆಸ್ತಿಗಳು ನೈಜ ಆರ್ಥಿಕ ಸ್ವತ್ತುಗಳ ಪ್ರತಿರೂಪಗಳಾಗಿಲ್ಲದಿರುವುದರಿಂದ ಆರ್ಥಿಕ ವಹಿವಾಟಿನ ಸಹಜ ಸ್ತರವನ್ನು ಪ್ರತಿನಿಧಿಸುವುದಿಲ್ಲ. ಈ ಕ್ಷೇತ್ರಗಳಲ್ಲಿ ಹಣ ಹೂಡುವ ಊಹೆಗಾರರು ಹಣದಿಂದಲೇ ಹಣ ಮಾಡುತ್ತಾರೆ. ಸೇವೆಗಳಲ್ಲಾಗಲಿ, ಸಾಮಗ್ರಿಗಳ ತಯಾರಿಕೆಯಲ್ಲಾಗಲಿ, ಹೊಸ ಕಾರ್ಖಾನೆಗಳಲ್ಲಾಗಲಿ, ಹೊಸ ಯಂತ್ರೋಪಕರಣಗಳ ತಯಾರಿಕೆಗಳಲ್ಲಾಗಲಿ ಹೂಡಿಕೆಯ ಅಗತ್ಯವೇ ಇಲ್ಲ. ಇವರಿಗೆ ಇವಾವುವೂ ಇಲ್ಲದಿರುವುದರಿಂದ ಹೊಸ ಉದ್ಯೋಗಸೃಷ್ಟಿಯ ಪ್ರಶ್ನೆ ಉದ್ಭವವೇ ಆಗುವುದಿಲ್ಲ. ಕೃತಕ ಹಣಕಾಸಿನ ವಹಿವಾಟು ಆಧಾರಿತ ಹಣಕಾಸಿನ ವ್ಯವಸ್ಥೆ ಯಾವತ್ತೂ ದುರ್ಬಲ ಮತ್ತು ಯಾವ ಕ್ಷಣದಲ್ಲಾದರೂ ಛಿದ್ರ ಛಿದ್ರವಾಗಿ ಹೋಗುವ ಸಾಧ್ಯತೆಗೆ ಸಿಲುಕಿರುತ್ತದೆ. ೧೯೯೭ರ ಮಧ್ಯಭಾಗದಲ್ಲಿ ಥೈಲ್ಯಾಂಡ್‌ನಲ್ಲಿ ಪ್ರಾರಂಭವಾದ ಹಣಕಾಸಿನ ಕ್ಷೋಭೆ, ಆರ್ಥಿಕ ಅವಗಢ ದಾವಾಗ್ನಿಯಂತೆ ಏಷ್ಯಾ ಖಂಡದ ಬಹುಭಾಗವನ್ನು ಆವರಿಸಿಕೊಂಡುದಲ್ಲದೆ ರಷ್ಯನ್ ರೂಬೆಲ್‌ನ ನಾಟಕೀಯ ಕುಸಿತಕ್ಕೆ ಕಾರಣವಾಗಿ, ದಕ್ಷಿಣ ಅಮೆರಿಕಕ್ಕೂ ಹರಡಿ ಎಲ್ಲೆಡೆಯಲ್ಲೂ ಅಪಾರ ಜನಸಮೂಹಗಳ ಆರ್ಥಿಕ ಸಾಮಾಜಿಕ ಜೀವನವನ್ನು ದಾರುಣ ಸ್ಥಿತಿಗೆ ತಳ್ಳಿತು. ಆ ಕ್ಷೋಭೆಯ ಜ್ವಾಲೆ ಇನ್ನೂ ಸಂಪೂರ್ಣವಾಗಿ ಆರಿಲ್ಲವಾದ್ದರಿಂದ ಊಹೆಯ ಕರೆನ್ಸಿ ವ್ಯಾಪಾರದ ಅಪಾಯಗಳು ಎಂದಾದರೂ ಉಲ್ಬಣಗೊಳ್ಳಬಹುದಾಗಿದೆ. ಏಕೆಂದರೆ ಊಹೆಯ ವ್ಯಾಪಾರ ನೈಜ ಆರ್ಥಿಕ ವ್ಯವಸ್ಥೆಯ (ಕಾರ್ಖಾನೆ, ಕೈಗಾರಿಕೆ ಇತ್ಯಾದಿ) ವಿರುದ್ಧ, ಪ್ರಭುತ್ವಗಳ ಪರಮಾಧಿಕಾರದ ವಿರುದ್ಧ ಗಳಿಸಿರುವ ಪ್ರಚಂಡ ವಿಜಯವನ್ನು ಸಂಕೇತಿಸುತ್ತದೆ. ಅಂತೆಯೇ ಮೂರನೇ ಪ್ರಪಂಚದ ದುರ್ಬಲ ಪ್ರಭುತ್ವಗಳ, ಬಡ ರಾಷ್ಟ್ರಗಳ ವಿರುದ್ಧ ರಾಷ್ಟ್ರೋತ್ತರ ಹಣಕಾಸಿನ ಮತ್ತು ಬಲ್ಲಿದ ರಾಷ್ಟ್ರಗಳ ವಿಜಯವನ್ನೂ ಸಂಕೇತಿಸುತ್ತದೆ.

**ಸುಳಿಯ ಮೇಲಿನ ಸವಾರಿ**

ಊಹೆಯ ವ್ಯಾಪಾರದ ತವರಾಗಿರುವ ಜಾಗತಿಕ ಹಣಕಾಸಿನ, ಕೀನ್ಸ್ ಹೇಳಿದ 'ಕ್ಯಾಸಿನೋ ಕ್ಯಾಪಿಟಲಿಸಂ'ನ, ಕರಾಳ ಮುಖದ ಸದ್ಯದ ಸ್ವರೂಪವನ್ನು ಅನಾವರಣಗೊಳಿಸುವ ಅಂಕಿ ಅಂಶಗಳನ್ನು ನೋಡಿ : ೧೯೯೮ರಲ್ಲಿ ವಾಣಿಜ್ಯ ಸರಕು ಮತ್ತು ಸೇವೆಗಳಲ್ಲಿನ ಜಾಗತಿಕ ವಾರ್ಷಿಕ ವ್ಯಾಪಾರ ೬.೫ ಶತಕೋಟಿಗಳಿದ್ದಿತು. ಈ ಮೊತ್ತ ವಿದೇಶಿ ವಿನಿಮಯದ ಮಾರುಕಟ್ಟೆಯ ೩,೪ ದಿನಗಳ ವಹಿವಾಟಿಗೆ ಸಮನಾದುದಾಗಿತ್ತು. ಅದೇ ವರ್ಷ ಪ್ರಪಂಚದ ಎಲ್ಲಾ ಸರ್ಕಾರಗಳ ವಿದೇಶಿ ವಿನಿಮಯದ ಒಟ್ಟು ಶೇಖರಣೆ ೧.೬ ಟ್ರಿಲಿಯನ್ (ಒಂದು ಸಾವಿರ ದಶಕೋಟಿಗಳು = ೧ ಟ್ರಿಲಿಯನ್) ಗಳಷ್ಟಿದ್ದಿತು. ಈ ಮೊತ್ತ ವಿದೇಶಿ ವಿನಿಮಯದ ವ್ಯಾಪಾರ ವಹಿವಾಟಿನ ಕೇವಲ ಒಂದೇ ಒಂದು ದಿನದ ಮೊತ್ತಕ್ಕೆ ಸಮವಾದುದಾಗಿತ್ತು. ಒಂದು ಅಧಿಕೃತ ಅಧ್ಯಯನದ ಪ್ರಕಾರ ೧.೫ ಟ್ರಿಲಿಯನ್ ಮೊತ್ತದ ಶೇಕಡಾ ೯೫ರಷ್ಟು ಅಲ್ಪಾವಧಿ ಊಹೆಯ ವಹಿವಾಟಿನದಾಗಿತ್ತು. ಅಲ್ಪಾವಧಿ ಕಾಲವೆಂದರೆ : ಶೇಕಡಾ ೮೦ರಷ್ಟು ಒಂದು ವಾರದೊಳಗೂ, ಶೇ. ೪೦ರಷ್ಟು ೨ ದಿನಗಳೊಳಗೂ ನಡೆಯುತ್ತದೆ. ಬಡ ರಾಷ್ಟ್ರಗಳಿಗೆ ಖಾಸಗಿ ವಲಯದ ಹಣಕಾಸಿನ ಒಳಹರಿವು ೧೯೯೦ರಲ್ಲಿ ೪೪ ಶತಕೋಟಿಗಳಷ್ಟಿದ್ದಿತು. ಅದು ೧೯೯೭ರಲ್ಲಿ ೨೫೬ ಶತಕೋಟಿಗೆ ಏರಿತ್ತು. ಈ ರೇಖಾ ಚಿತ್ರವನ್ನು ನೋಡಿ:




*ವಿದೇಶಿ ವಿನಿಮಯದ ಮಾರುಕಟ್ಟೆಗಳ ಬೆಳವಣಿಗೆಯ ಪ್ರಮಾಣ - ವಿದೇಶಿ ವಿನಿಮಯದ ದೈನಂದಿನ ವಹಿವಾಟಿನ ಅಂಕಿ ಸಂಖ್ಯೆಯ ಚಿತ್ರ.*
(ಗಣನೆ : ಶತಕೋಟಿ ಡಾಲರ್‌ಗಳಲ್ಲಿ)

ಊಹೆಯ ಕರೆನ್ಸಿ ವ್ಯಾಪಾರದ ದೊಡ್ಡ ಆಟದಲ್ಲಿ ಅಂತರರಾಷ್ಟ್ರೀಯ ಹೂಡಿಕೆಯ ಖಾಸಗಿ ಬ್ಯಾಂಕುಗಳು ಮತ್ತು ಬೆರಳೆಣಿಕೆಯಷ್ಟು ಖಾಸಗಿ ಬಂಡವಾಳಿಗರದೆ ಸಂಪೂರ್ಣ ಪ್ರಭುತ್ವ.

ರಾಷ್ಟ್ರೀಯ ಅರ್ಥವ್ಯವಸ್ಥೆಗಳು ಹೆಚ್ಚು ಹೆಚ್ಚಾಗಿ ಉದಾರೀಕರಣಗೊಂಡಂತೆ ಜಾಗತಿಕ ಹಣಕಾಸಿನ ಜಾಲದಲ್ಲಿ ಬಂದಿಗಳಾಗುವುದು ನಿಶ್ಚಿತ. ಜಾಗತಿಕ ಹಣಕಾಸಿನ ವಿನ್ಯಾಸದಲ್ಲಿ ತ್ವರಿತಗತಿಯಲ್ಲಿ ಬದಲಾವಣೆಗಳನ್ನು ತಾರದಿದ್ದರೆ ಮೇಲೆ ವಿವರಿಸಿದ ಹಣಕಾಸಿನ ಕ್ಷೋಭೆಗಳು ಅನಿವಾರ್ಯವಾಗುವುದು ಅಷ್ಟೇ ನಿಶ್ಚಿತ.

**ಟೋಜನ್ ತೆರಿಗೆ : ಸುಧಾರಣೆಯೆಡೆಗೆ ಒಂದು ದೊಡ್ಡ ಹೆಜ್ಜೆ**

ಜೇಮ್ಸ್ ಟೋಜನ್ ಅಮೆರಿಕದ ಹೆಸರಾಂತ ಅರ್ಥಶಾಸ್ತ್ರಜ್ಞ. ೧೯೭೮ರಲ್ಲಿ ನೊಬೆಲ್ ಪಾರಿತೋಷಕವನ್ನು ಪಡೆದ ಮೇಧಾವಿ. ಮೂರನೆ ಪ್ರಪಂಚದ ಅಭಿವೃದ್ಧಿಯ ಬಗ್ಗೆ ನಿಜವಾದ ಕಾಳಜಿಯನ್ನು ಹೊಂದಿರುವ, ತನ್ನ ದೇಶದ ಕೆಲವು ಆರ್ಥಿಕ ನೀತಿಗಳನ್ನು ನಿರ್ಭಯದಿಂದ ಟೀಕಿಸುವ, ನೈತಿಕ ಮತ್ತು ಬೌದ್ಧಿಕ ಸ್ಥೈರ್ಯವನ್ನು ಧ್ವನಿಸುವ ಅವರ ಬರವಣಿಗೆಗಳು ಹಲವಾರು. ೧೯೯೭ರಲ್ಲಿ ಆಗ್ನೇಯ ಏಷ್ಯಾದಲ್ಲಿ ಘಟಿಸಿದ ಆರ್ಥಿಕ ಕ್ಷೋಭೆಯಿಂದ ಜನತೆಗುಂಟಾದ ಕಷ್ಟನಷ್ಟದ ಬಗ್ಗೆ ಮಮ್ಮಲ ಮರುಗಿದ ಟೋಜನ್ ಆ ಘಟನಾವಳಿಗಳ ನಿಗೂಢತೆಯನ್ನು ವ್ಯಾಖ್ಯಾನಿಸುತ್ತ ಹೀಗೆ ಹೇಳಿದ್ದಾರೆ : ''ಅಮೆರಿಕದ ಬಹುರಾಷ್ಟ್ರೀಯ ಕಂಪೆನಿಗಳಿಗೆ ಅನುಕೂಲವಾಗುವಂತಹ ವ್ಯಾಪಾರಿ ರಿಯಾಯಿತಿಗಳನ್ನು ಗಳಿಸಲು ಮತ್ತು ವಿದೇಶಿ ಬಂಡವಾಳ ಹೂಡಿಕೆಯನ್ನು ವಿಸ್ತಾರಗೊಳಿಸುವ ಸಾಧ್ಯತೆಗಳನ್ನು ಸಾಧಿಸುವುದಕ್ಕಾಗಿ ಈ ವಿಪ್ಲವವನ್ನು ಬಳಸಿಕೊಳ್ಳುವುದೇ ಅಮೆರಿಕದ ಆಂತರ್ಯದ ಯೋಜನೆ ಎನ್ನುವ ಅನುಮಾನಕ್ಕೆ ಎಡೆಮಾಡುತ್ತದೆ.''

ಆ ವಿಪ್ಲವಕ್ಕೆ ಕಾರಣವಾದ ಊಹೆಯ ಕರೆನ್ಸಿ ವ್ಯಾಪಾರಗಳ ನಡತೆಯನ್ನು ನಿಗ್ರಹಿಸುವ, ಅದರ ಚಂಚಲ ಪ್ರವೃತ್ತಿಗೆ ಕಡಿವಾಣವನ್ನು ಹಾಕುವ, ಜಾಗತಿಕ ಹಣಕಾಸಿನ ವ್ಯವಸ್ಥೆಯ ನ್ಯೂನತೆಗಳನ್ನು ಸರಿಪಡಿಸುವ, ಅದು ಸೃಷ್ಟಿಸಿರುವ ಅಸಮಾನತೆಯ ಕಂದರವನ್ನು ಭರಿಸುವ, ಊಹೆಯ ವ್ಯಾಪಾರ ಆಧಾರಿತ ಹಣದ ಹರಿವಿನ ರಭಸವನ್ನು ತಗ್ಗಿಸುವ ಮಹದುದ್ದೇಶದಿಂದ ಯೋಜನೆಯೊಂದನ್ನು ಅವರು ಸೂಚಿಸಿದ್ದಾರೆ. ಅದು ಹೀಗಿದೆ : ವಿದೇಶಿ ವಿನಿಮಯದ ವಹಿವಾಟಿನ ಮೇಲೆ ಸಣ್ಣ ಪ್ರಮಾಣದ ತೆರಿಗೆಯನ್ನು ವಿಧಿಸುವುದು. ಪ್ರಪಂಚದಾದ್ಯಂತ ಜಾರಿಯಾಗಬೇಕಾದ ಈ ತೆರಿಗೆಯ ಮೊತ್ತ ಒಂದು ಪರ್‌ಸೆಂಟ್‌ನ ಅರ್ಧಭಾಗಕ್ಕಿಂತಲೂ ಕಡಿಮೆಯಾಗಿರುತ್ತದೆ. ಸಬಲ ರಾಷ್ಟ್ರಗಳು ಈ ತೆರಿಗೆಯನ್ನು ವಿದೇಶಿ ವಿನಿಮಯದ ವಹಿವಾಟಿನ ಮೇಲೆ ಸಾರ್ವತ್ರಿಕವಾಗಿ ಜಾರಿಗೆ ಬರುವಂತೆ ವಿಧಿಸಬೇಕು. ಇಂತಹ ತೆರಿಗೆಯನ್ನು ಅಲ್ಪ ಮೊತ್ತಕ್ಕೆ ಸೀಮಿತಗೊಳಿಸುವುದರ ತರ್ಕವೇನು ? ಅದು ಬಹಳ ಸರಳವಾದುದು. ಕರೆನ್ಸಿ ಒಂದರ ವಹಿವಾಟು ಲಾಭದಾಯಕವಾಗಿರಬೇಕಾದರೆ, ಕರೆನ್ಸಿಯ ಮೌಲ್ಯದ ಪರಿವರ್ತನೆಯ ಬೆಲೆ ಸೂಚಿತ ತೆರಿಗೆಯ ಮೊತ್ತಕ್ಕಿಂತ ಹೆಚ್ಚಿರಬೇಕಾಗುತ್ತದೆ. ಊಹೆಯ ಕರೆನ್ಸಿ ವ್ಯಾಪಾರ ವಹಿವಾಟಿನಲ್ಲಿ ಹೂಡಿಕೆಯ ಮೊತ್ತಕ್ಕೂ, ದೊರೆಯುವ ಲಾಭಾಂಶಕ್ಕೂ ಅಂತರ ಸಾಮಾನ್ಯವಾಗಿ ಕಡಿಮೆ ಇರುತ್ತದೆ. ಟೋಜನ್ ತೆರಿಗೆಯ ಪ್ರಮುಖ ಉದ್ದೇಶವೇನೆಂದು ಮೇಲೆ ಹೇಳಿದೆ. ಈ ತೆರಿಗೆ ಕರೆನ್ಸಿ ವಹಿವಾಟಿನಿಂದ ಬರಬಹುದಾದ ಲಾಭಾಂಶವನ್ನು ಸಂಪೂರ್ಣ ತೊಡೆದುಹಾಕದಿದ್ದರೂ, ಗಣನೀಯವಾಗಿ ತಗ್ಗಿಸುವುದು ಖಂಡಿತ. ಲಾಭಾಂಶವೇ ಇಲ್ಲದಿದ್ದರೆ ಅಥವಾ ಲಾಭಾಂಶ ಅತಿ ಕಡಿಮೆಯಾದರೆ ಊಹೆಯ ವ್ಯಾಪಾರದಲ್ಲಿ ತೊಡಗುವವರ ಸಂಖ್ಯೆ ಕಡಿಮೆಯಾಗಿ ಅದು ನಗಣ್ಯವಾಗುತ್ತದೆ. ಹಾಗಾದಲ್ಲಿ ಊಹೆಯ ವ್ಯಾಪಾರ ವಹಿವಾಟಿನಿಂದ ಸಂಭವಿಸಬಹುದಾದ ಅಪಾಯದ ಪ್ರಮಾಣವೂ ನಗಣ್ಯವಾಗುತ್ತದೆ. ಊಹೆಯ ವ್ಯಾಪಾರದ ವಹಿವಾಟಿನ ಬಾಹುಳ್ಯ ಕಡಿತಗೊಂಡರೆ ವಿನಿಮಯ ದರದಲ್ಲಿ ಸ್ಥಿರತೆ ಉಂಟಾಗುವ ಸ್ಪಷ್ಟ ಸಾಧ್ಯತೆಗಳಿವೆ. ಈ ತೆರಿಗೆಯಿಂದ ಸಾಮಗ್ರಿಗಳ ಸೇವೆಗಳ ವ್ಯಾಪಾರದ ಮೇಲಾಗಲಿ ಅಥವಾ ದೀರ್ಘಾವಧಿ ಹೂಡಿಕೆಯ ಚಟುವಟಿಕೆಗಳ ಮೇಲಾಗಲಿ ದುಷ್ಪರಿಣಾಮವಾಗಬಾರದೆಂಬ ದೃಷ್ಟಿಯಿಂದ ಈ ತೆರಿಗೆಯ ದರ ಅಲ್ಪ ಪ್ರಮಾಣದ್ದಾಗಿರುವುದಕ್ಕೆ ಮತ್ತೊಂದು ಮುಖ್ಯ ಕಾರಣ.

ವಿನಿಮಯ ದರ ಸ್ಥಿರವಾದರೆ ಜಾಗತಿಕ ವ್ಯಾಪಾರ ವರ್ಧಿಸುತ್ತದೆ. ಎರ್‍ರಾಬಿರ್‍ರಿಯಾಗಿ ಏರಿಳಿತಗಳ ಒತ್ತಡಕ್ಕೆ ಒಳಗಾದ ವಿನಿಮಯ ದರ ವಿದೇಶಿ ವಿನಿಮಯಾಧಾರಿತ ವ್ಯಾಪಾರಗಳನ್ನು ಬುಡಮೇಲು ಮಾಡುತ್ತವೆ. ಆಮದುದಾರರಿಗೆ, ರಫ್ತುದಾರರಿಗೆ ಅವರು ವ್ಯಾಪಾರದಲ್ಲಿ ತೊಡಗಿಸುವ ಹಣದ ವಿನಿಮಯ ಮೌಲ್ಯದ ಬಗ್ಗೆ ಖಾತ್ರಿ, ದೃಢತೆ, ನೆಚ್ಚಿಕೆ ಇಲ್ಲದಿದ್ದರೆ ಅವರ ಆರ್ಥಿಕ ಯೋಜನೆಗಳು, ಉದ್ಯೋಗಗಳ ಸೃಜನೆಯೂ ಸೇರಿದಂತೆ, ತಲೆಕೆಳಗಾಗುವುದು ಖಂಡಿತ. ವಿನಿಮಯ ದರದಲ್ಲಿ ವ್ಯತ್ಯಾಸಗಳ ತೀವ್ರತೆ ಕಡಿಮೆಯಾದರೆ ವ್ಯಾಪಾರಸ್ಥರು ಸಂಭವನೀಯ ನಷ್ಟದ ವಿರುದ್ಧದ ರಕ್ಷಣೆಗಾಗಿ ತಕ್ಷಣದ ಭವಿಷ್ಯದಲ್ಲಿ ಕರೆನ್ಸಿಗಳ ಮೌಲ್ಯ ಬದಲಾವಣೆಯನ್ನು ನಿರೀಕ್ಷಿಸಿ ಅವುಗಳನ್ನು ಪ್ರಸ್ತುತ ದರದಲ್ಲಿ ಕೊಳ್ಳಿಟ್ಟುಕೊಳ್ಳಬೇಕಾದ ಖರ್ಚನ್ನು ಉಳಿಸಿದಂತಾಗುವುದು. ಆ ರೀತಿಯಾಗಿ ಉಳಿಕೆಯಾದ ಬಂಡವಾಳವನ್ನು ಹೊಸ ಉತ್ಪಾದನಾ ಘಟಕಗಳಲ್ಲಿ ತೊಡಗಿಸಬಹುದು.

ದೇಶೀಯ ಹಣಕಾಸು ಮಾರುಕಟ್ಟೆಗಳ ಸ್ವಾಸ್ಥ್ಯವನ್ನು ನಿರ್ಧರಿಸುವಲ್ಲಿ ಜಾಗತಿಕ ಹಣಕಾಸು ಹೂಡಿಕೆಯ ಸಂಸ್ಥೆಗಳ ಮತ್ತು ಸಬಲ ಬಂಡವಾಳಿಗರ ಪಾತ್ರ ೯೦ ರಿಂದೀಚೆಗೆ ನಿರ್ಣಾಯಕ ಮಟ್ಟವನ್ನು ಮುಟ್ಟಿರುವುದು ಸಾಮಾನ್ಯಜ್ಞಾನ. ಈ ದೇಶೀಯ ನಾಣ್ಯಗಳ ಪರಿವರ್ತನೆಯ ಪ್ರಕ್ರಿಯೆ ಸಂಪೂರ್ಣಗೊಂಡಿರುವ ರಾಷ್ಟ್ರಗಳಲ್ಲಿ ಈ ಅಂಶ ವಿಶೇಷವಾಗಿ ವ್ಯಕ್ತವಾಗುತ್ತದೆ. ನಾಣ್ಯ ಪರಿವರ್ತನೆಯನ್ನು ಮಾಡದಿದ್ದ ದೇಶಗಳು ಪೂರ್ವ ಮತ್ತು ಆಗ್ನೇಯ ಏಷ್ಯಾ ಖಂಡದ ದೇಶಗಳಲ್ಲಿ ಉಂಟಾದ ವಿಪ್ಲವದ ಘಾತಕ ಪರಿಣಾಮಗಳಿಂದ ತಪ್ಪಿಸಿಕೊಂಡದ್ದು ಈಗ ಇತಿಹಾಸ. ಅದರಲ್ಲಿ ಭಾರತವೂ ಒಂದು. ಇಂದಿಗೂ ಭಾರತದ ಬಂಡವಾಳ ಖಾತೆಯ ಪರಿವರ್ತೀಕರಣವನ್ನು ಜಾರಿಗೊಳಿಸಿಲ್ಲದಿರುವುದು ಅತ್ಯಂತ ಹರ್ಷದಾಯಕದ ವಿಚಾರ. ಆದರೂ ಭಾರತದ ಇಂದಿನ 'ಸ್ವದೇಶಿ' ಸರ್ಕಾರ ಅದರೆಡೆಗೆ ವೇಗದಲ್ಲಿ ಚಲಿಸುತ್ತಿರುವಂತೆ ಭಾಸವಾಗುತ್ತದೆ. ಇದಕ್ಕೆ ನಿದರ್ಶನಗಳೆಂದರೆ ಮೂರು ತೀರ್ಮಾನಗಳು : ಭಾರತದ ಕಂಪೆನಿಗಳು ಈಗ ವಿಶ್ವ ಮಾರುಕಟ್ಟೆಯಲ್ಲಿ ಬಂಡವಾಳವನ್ನು ಎತ್ತಬಹುದು. ಅದಕ್ಕಾಗಿ 'ಗ್ಲೋಬಲ್ ಡಿಪಾಸಿಟ್ ರೆಸೀಟ್ಸ್' ಅನ್ನುವ ಬಂಡವಾಳ ಪತ್ರಗಳಿಗೆ ಅವಕಾಶ ಕಲ್ಪಿಸಿದೆ. ಅಲ್ಲದೆ ಅಪಾರ ಹಣದ ಆಗರವಾದ ಅಮೆರಿಕೆಯ ಬಂಡವಾಳದ ಮಾರುಕಟ್ಟೆಗಳಲ್ಲಿ ಹಣ ಎತ್ತಲು 'ಅಮೆರಿಕದ ಡಿಪಾಸಿಟರಿ ರೆಸೀಟ್ಸ್' ಅನ್ನುವ ಪತ್ರಗಳಿಗೂ ಅವಕಾಶ ಕಲ್ಪಿಸಿದೆ.

ಅಲ್ಲದೆ ಇಂದು ನಮ್ಮ ಕಂಪೆನಿಗಳು ಅದರಲ್ಲೂ 'ಹೊಸ ಆರ್ಥಿಕತೆ'ಯ ಸಂಕೇತಗಳಾದ 'ಜ್ಞಾನ ಕೈಗಾರಿಕೆ' (ಶ್ರಮದ ಪಾತ್ರವೇ ಇಲ್ಲವೆನ್ನುವ ಭಾವನೆಯನ್ನು ತರುವ ಈ ಪದಗುಚ್ಛ ಪದಗಳ ಅತ್ಯಂತ ಹೊಲಸು ಅಪಪ್ರಯೋಗ) ಕಂಪೆನಿಗಳು. ಅದರ ಹೆಸರು 'ನಾಸದಾಕ್'. ಅಮೆರಿಕ ಷೇರ್‌ಬಜಾರ್‌ನಲ್ಲಿ ನೋಂದಣಿ ಮಾಡುವ ಅವಕಾಶ ಸಿಕ್ಕಿರುವುದು ನಮ್ಮ ಆರ್ಥಿಕತೆಯ ಬಗ್ಗೆ ತಪ್ಪು ತಿಳುವಳಿಕೆಯನ್ನುಂಟುಮಾಡುವ ಪ್ರಚಾರಕ್ಕೆ ಎಡೆ ಮಾಡಿದೆ. ಈ ತಪ್ಪು ತಿಳುವಳಿಕೆಯ ಭ್ರಮೆಯಲ್ಲೇ ಇಂಡಿಯನ್ನರು ಸದಾ ಮುಳುಗಿರಲೆಂಬ ವ್ಯವಸ್ಥಿತ ದುರುದ್ದೇಶದಿಂದ ಅಮೆರಿಕ 'ಭಾರತ ಇನ್ನು ಹತ್ತು ವರ್ಷಗಳಲ್ಲಿ ಒಂದು ಆರ್ಥಿಕ ಸೂಪರ್ ಪವರ್ ಆಗುವುದೆಂದು' ಪ್ರಚಾರ ಮಾಡುತ್ತಿದೆ. ಆದರೆ ನಮ್ಮ ಮಾರುಕಟ್ಟೆಗಳಲ್ಲಿ ಸೂಕ್ಷ್ಮ ಸೂಚ್ಯಾಂಕ ೧೬ ತಿಂಗಳ ಹಿಂದಿದ್ದ ಅಧೋಗತಿಯನ್ನು ಮುಟ್ಟಿ ಒಂದೇ ದಿನದಲ್ಲಿ (೧೧-೧೦-೨೦೦೦) ಸಾವಿರಾರು ಕೋಟಿ ರೂಪಾಯಿಗಳ ನಷ್ಟ ಉಂಟಾಗಿರುವುದಕ್ಕೆ ಮೇಲೆ ವಿವರಿಸಿದ ಸರ್ಕಾರದ ನೀತಿಗಳೇ ಕಾರಣ. ಇದಕ್ಕಿಂತಲೂ ಗಾಬರಿಗೊಳಿಸುತ್ತಿರುವ ಸಮಾಚಾರವೆಂದರೆ ನಮ್ಮ ರೂಪಾಯಿಯ ಬೆಲೆ ಡಾಲರ್ ಎದುರಿಗೆ, ಇಳಿಜಾರಿನ ಹಾದಿಯನ್ನು ಹಿಡಿದಿರುವುದು. ಇದಕ್ಕೆ ಪ್ರಮುಖ ಕಾರಣವೆಂದರೆ ವಿದೇಶೀ ಸಾಂಸ್ಥಿತ ಹೂಡಿಕೆದಾರರು ನಮ್ಮ ಮಾರುಕಟ್ಟೆಗಳಲ್ಲಿ, ನಮ್ಮ ರೂಪಾಯಿ ಮೌಲ್ಯದ ಬಗ್ಗೆ ತೊಡಗಿರುವ ಚೆಲ್ಲಾಟ. ಇಂತಹ ಸಂದರ್ಭಗಳು ಸೃಷ್ಟಿಯಾಗುವ ಬಗೆ ಎಂದರೆ ಈ ವಿದೇಶೀಯರು ತಮ್ಮಲ್ಲಿಯ ಸ್ಟಾಕ್‌ಗಳನ್ನು ಸಂಪೂರ್ಣವಾಗಿ ಅಥವಾ ಅತಿ ಹೆಚ್ಚು ಸಂಖ್ಯೆಯಲ್ಲಿ ಮಾರಾಟ ಮಾಡಿ ದೇಶೀಯ ಕರೆನ್ಸಿಯ ಮೌಲ್ಯವನ್ನು ಡಾಲರ್‌ಗೆ ವಿರುದ್ಧ ತೀವ್ರ ಪ್ರಮಾಣದಲ್ಲಿ ತಗ್ಗಿಸಬಹುದು. ರೂಪಾಯಿ ತಳಹತ್ತಿದರೆ ಹೇಳತೀರದ ಆರ್ಥಿಕ ಸಂಕಷ್ಟಗಳಿಗೆ ಜನತೆ ಗುರಿಯಾಗುವುದು ಖಂಡಿತ. ಅಂತಹ ಸಂದರ್ಭದಲ್ಲಿ ಕೇಂದ್ರ ಬ್ಯಾಂಕ್ (ನಮ್ಮಲ್ಲಿ ರಿಸರ್ವ್ ಬ್ಯಾಂಕ್) ಕರೆನ್ಸಿ ಮೌಲ್ಯ ಕಾಪಾಡಲು ಮಧ್ಯ ಪ್ರವೇಶಿಸುವ ಶಕ್ತಿ ವಿದೇಶಿ ವಿನಿಮಯದ ನಗದು ಮೊತ್ತದ ಗಾತ್ರವನ್ನು ನೇರವಾಗಿ ಅವಲಂಬಿಸಿರುತ್ತದೆ. ೧೨ ವರ್ಷಗಳ ಹಿಂದೆ ಮೇಲೆ ಹೇಳಿದ ರೀತಿಯ ಕರೆನ್ಸಿ ಮೇಲೆ 'ಧಾಳಿ' ನಡೆದಾಗ ಉದ್ಭವವಾಗುವ ಸಂಕೀರ್ಣ ಅಪಾಯಕಾರಿ ಸಂದರ್ಭವನ್ನು ಯಶಸ್ವಿಯಾಗಿ ನಿಭಾಯಿಸುವಷ್ಟು ವಿದೇಶಿ ಕರೆನ್ಸಿಯ ನಗದು ಇರುತ್ತಿತ್ತು. ಆದರೆ ೧೯೯೨ರಿಂದೀಚೆಗೆ ಪರಿಸ್ಥಿತಿ ತೀವ್ರ ಬದಲಾವಣೆಯಾಗಿದೆ. ಇಂದು ಪ್ರಪಂಚದ ಎಲ್ಲಾ ಕೇಂದ್ರ ಬ್ಯಾಂಕ್‌ಗಳಲ್ಲಿರುವ ಸಮಗ್ರ ಮೊತ್ತದ ನಾಲ್ಕು ಪಟ್ಟು ಮೀರಿದ ನಗದು ಹಣ ಊಹೆಯ ವ್ಯಾಪಾರಿಗಳೆಡೆ ಸಂಗ್ರಹವಾಗಿದೆ. ಇಂದಿನ ಅಧಿಕೃತ ಜಾಗತಿಕ ನಗದು ಹಣ ಅಂತರರಾಷ್ಟ್ರೀಯ ವಿದೇಶಿ ವಿನಿಮಯದ ದೈನಂದಿನ ವಹಿವಾಟಿನ ಅರ್ಧಭಾಗದಷ್ಟು

ಮಾತ್ರ ಎಂಬುದನ್ನು ಮನಗಂಡರೆ ಊಹೆಯ ವ್ಯಾಪಾರಿಗಳೆಡೆ ಇರುವ ನಗದು ಹಣದ ವಿರಾಟ ರೂಪದ ದರ್ಶನವಾದಂತೆ.

ಟೋಜನ್ ತೆರಿಗೆಯನ್ನು ಹೇರಿದರೆ ವಿದೇಶಿ ವಿನಿಮಯದ ವಹಿವಾಟಿನಲ್ಲಿ ಹೂಡುವ ಸಮಗ್ರ ಮೊತ್ತದ ಗಾತ್ರ ಕಡಿಮೆಯಾಗುತ್ತದೆ. ಹಾಗಾದಾಗ ಕೇಂದ್ರ ಬ್ಯಾಂಕುಗಳು ತಮ್ಮ ಕರೆನ್ಸಿಯ ಮೌಲ್ಯವನ್ನು ರಕ್ಷಿಸಿಕೊಳ್ಳಲು ಬಹು ಹೆಚ್ಚಿನ ನಗದು ಹಣದ ಅಗತ್ಯವಿರುವುದಿಲ್ಲ. ದೇಶೀಯ ಸರ್ಕಾರಗಳು ಕೈಗೊಳ್ಳುವ ವಿತ್ತೀಯ ಮತ್ತು ಹಣಕಾಸಿನ ನೀತಿ ನಿರ್ಧಾರಗಳು ಚಂಚಲ ಹಣಕಾಸು ಮಾರುಕಟ್ಟೆಗಳ ಒತ್ತಡಕ್ಕೆ ಮಣಿಯುವುದು ತಪ್ಪಿ ತಮ್ಮದೇ ಆದ ಆರ್ಥಿಕ ಅಭಿವೃದ್ಧಿಯ ಪರಿಕಲ್ಪನೆಯ ಪಥದಲ್ಲಿ ಚಲಿಸುವ ಸ್ವಾತಂತ್ರ್ಯವನ್ನು ಪಡೆದುಕೊಂಡಂತಾಗುತ್ತದೆ. ಈ ಪ್ರಕಾರ ರಾಷ್ಟ್ರೀಯ ಸರ್ಕಾರಗಳನ್ನು ಒಂದು ಗುರುತರ ಒತ್ತಡದಿಂದ ಬಿಡುಗಡೆ ಮಾಡುವ ಶಕ್ತಿಯನ್ನು ಟೋಜನ್ ತೆರಿಗೆ ಹೊಂದಿದೆ.

ಇಂದು ಮೂರನೇ ಪ್ರಪಂಚದಲ್ಲಿ ತಾಂಡವವಾಡುತ್ತಿರುವ ಭೀಕರ ಬಡತನವನ್ನು ನಿರ್ಮೂಲ ಮಾಡಲು, ಸುವ್ಯಕ್ತ ಉಪಭೋಗಕ್ಕೆ ಜೋತುಬಿದ್ದು ನೈಸರ್ಗಿಕ ಸಂಪನ್ಮೂಲಗಳನ್ನು ಬರಿದು ಮಾಡಿರುವ ಮಾನವನ ಏಕೈಕ ಆವಾಸಸ್ಥಾನವಾದ ಈ ಇಳೆಯ ಆರ್ತ ರೋದನೆಗೆ ಸ್ಪಂದಿಸಿ ಅದರ ಸ್ವಾಸ್ಥ್ಯವನ್ನು ಪೂರ್ವಸ್ಥಿತಿಗೆ ತರಲು ತಗಲುವ ವಾರ್ಷಿಕ ವೆಚ್ಚ, ವಿಶ್ವಸಂಸ್ಥೆಯ ಅಧಿಕೃತ ಅಂದಾಜಿನ ಪ್ರಕಾರ ೨೨೫ ಶತಕೋಟಿಗಳು. ಅಧಿಕೃತ ಅಂದಾಜೊಂದರ ಆಧಾರದ ಅಂಕಿ ಅಂಶಗಳನ್ನು ಅವಲೋಕಿಸಿದರೆ ಟೋಜನ್ ತೆರಿಗೆಯಿಂದ ಹರಿದುಬರುವ ವಾರ್ಷಿಕ ಆದಾಯದ ಆಕರ ೧೫೦ ರಿಂದ ೩೦೦ ಶತಕೋಟಿಗಳಷ್ಟು !

ವಿದೇಶಿ ವಿನಿಮಯದ ವ್ಯಾಪಾರದಲ್ಲಿ ಪ್ರಭುತ್ವವನ್ನು ಸ್ಥಾಪಿಸುವ ಪ್ರಪಂಚದ ನೂರು ಬೃಹತ್ ಬ್ಯಾಂಕುಗಳ ಮೇಲೆ ಮಾತ್ರ ಈ ತೆರಿಗೆಯ 'ಹೊರೆ' ಬೀಳಲಿದೆ. ಈ ನೂರು ಬ್ಯಾಂಕ್‌ಗಳಲ್ಲಿ ಸಮಗ್ರ ವಹಿವಾಟಿನ ಮೊತ್ತದ ಶೇಕಡಾ ೫೮ರಷ್ಟನ್ನು ೧೦ ಬ್ಯಾಂಕುಗಳು ತಮ್ಮದನ್ನಾಗಿಸಿಕೊಂಡಿವೆ. ಈ ಪಟ್ಟಿಯನ್ನು ಪರಿಶೀಲಿಸಿ :

**ಊಹೆಯ ವ್ಯಾಪಾರದ ಹಣದ ಆಕರ**

ವಿದೇಶಿ ವಿನಿಮಯದ ಮಾರುಕಟ್ಟೆಗಳ ಜೂಜಾಟದಲ್ಲಿ ತೊಡಗಿರುವ ಜಾಗತಿಕ ಬ್ಯಾಂಕುಗಳ ಶ್ರೇಣಿಯ ಯಾದಿ

| ಶ್ರೇಣಿ (೧೯೯೯) | ಶೇ.ವಾರು ಪಾಲಿನ ಅಂದಾಜು |
|---|---|
| ೧. ಸಿಟಿಗ್ರೂಪ್ | ೭.೭೫ |
| ೨. ಡಾಯಿಷ್ ಬ್ಯಾಂಕ್ | ೭.೧೨ |
| ೩. ಚೇಸ್ ಮನ್‌ಹಾಟನ್ | ೭.೦೯ |
| ೪. ವಾರ್‌ಬರ್ಗ್ ಡಿಲಾನ್ ರೀಡ್ | ೬.೪೪ |
| ೫. ಗೋಲ್ಡಮನ್ ಸಾಕ್ಸ್ | ೪.೮೬ |
| ೬. ಬ್ಯಾಂಕ್ ಆಫ್ ಅಮೆರಿಕ | ೪.೩೯ |
| ೭. ಜೆ. ಪಿ. ಮೋರ್‌ಗನ್ | ೪.೦೦ |
| ೮. ಹೆಚ್. ಎಸ್. ಬಿ. ಸಿ. ಮಿಡ್‌ಲ್ಯಾಂಡ್ ಬ್ಯಾಂಕ್ | ೩.೭೫ |
| ೯. ಎ. ಬಿ. ಎನ್. ಆ್ಯಮ್ರೊ | ೩.೩೭ |
| ೧೦. ಮೆರಿಲ್ ಲಿಂಚ್ | ೩.೨೭ |
| ೧೧. ಕ್ರೆಡಿಟ್ ಸ್ಯೂಸ್ಸೆ ಫಸ್ಟ್ ಬೋಸ್ಟನ್ | ೩.೧೧ |
| ೧೨. ಎಸ್. ಈ. ಬಿ. | ೨.೬೮ |
| ೧೩. ನಾಟವೆಸ್ಟ ಗ್ಲೋಬಲ್ ಫೈನಾನ್ಸಿಯಲ್ | ೨.೬೩ |
| ೧೪. ರಾಯಲ್ ಬ್ಯಾಂಕ್ ಆಫ್ ಕೆನಡ | ೨.೬೦ |
| ೧೫. ಮೋರ್‌ಗನ್ ಸ್ಟಾನಲೀ ಡೀನ್ ವಿಟ್ಟರ್ | ೨.೯೦ |

ಮೂಲ : *ಗ್ಲೋಬಲ್ ಗ್ಯಾಂಬ್ಲರ್ಸ್ / ವಾರ್ ಆನ್ ವಾಂಟ್.*

ಇದರಲ್ಲಿನ ಮೊದಲ ಹತ್ತು ಬ್ಯಾಂಕುಗಳು ಅಮೆರಿಕ, ಜರ್ಮನಿ ಮತ್ತು ಬ್ರಿಟನ್‌ನ ತಾಣದವು. ಈ ಹಾದಿಯಲ್ಲಿ ಸಿಟಿಗ್ರೂಪ್ ಎನ್ನುವ ಅಮೆರಿಕನ್ ಬ್ಯಾಂಕಿಗೆ ಅಗ್ರಸ್ಥಾನ. ೧೯೯೮ರ ವಿದೇಶಿ ವಿನಿಮಯದ ಸಮಗ್ರ ಮೊತ್ತದಲ್ಲಿ ಈ ಬ್ಯಾಂಕಿನ ಪಾಲು ೮.೫ ಟ್ರಿಲಿಯನ್ ಡಾಲರ್‌ಗಳಾಗಿತ್ತು. ಈ ಮೊತ್ತ ಐಶ್ವರ್ಯದ ಖನಿಯಾದ ಅಮೆರಿಕದ ಸಮಗ್ರ ಆಂತರಿಕ ಉತ್ಪನ್ನದ ಎರಡು ಪಟ್ಟು ಹೆಚ್ಚು. ಸ್ವಹಿತ ದೃಷ್ಟಿ ಈ ಬ್ಯಾಂಕುಗಳ ವ್ಯವಹಾರದ ಕೇಂದ್ರಬಿಂದು. ದೊಡ್ಡ ಕಾರ್ಪೊರೇಟ್‌ಗಳು, ಖಾಸಗಿ ಹೂಡಿಕೆದಾರರು, ವಿಮಾ ಕಂಪೆನಿಗಳು, ಹೆಡ್ ನಿಧಿಗಳು ಮತ್ತು ಪೆನ್‌ಷನ್ ನಿಧಿಗಳು ಈ ಬ್ಯಾಂಕಿನ ಗಿರಾಕಿಗಳು.

ಮುಖ್ಯವಾಗಿ ಅಥವಾ ಅವಶ್ಯವಾಗಿ ಈ ತೆರಿಗೆ ಊಹೆಯ ವ್ಯಾಪಾರಕ್ಕೆ ಸಿಮೀತವಾಗಿರುತ್ತದೆ ಎಂದು ಆಗಲೇ ಹೇಳಿಯಾಗಿದೆ.

ಊಹೆಯ ವ್ಯಾಪಾರಿಗಳು ಈ ತೆರಿಗೆಯಿಂದ ನುಣುಚಿಕೊಳ್ಳುವ ಪ್ರಯತ್ನಗಳನ್ನು ಮಾಡುವುದಿಲ್ಲವೇ ?

ತೆರಿಗೆಯನ್ನು ತಪ್ಪಿಸಿಕೊಳ್ಳುವುದು ಒಂದು ಸಾರ್ವತ್ರಿಕ ಸಮಸ್ಯೆ. ಊಹೆಯ ವ್ಯಾಪಾರಿಗಳು ತಮ್ಮ ಚಾತುರ್ಯವನ್ನೆಲ್ಲಾ ಬಳಸಿ ಈ ಕರಭಾರದಿಂದ ಕಳಚಿಕೊಳ್ಳುವ ಪ್ರಯತ್ನ ನಡೆಸಿದರೂ ಟೋಜನ್ ತೆರಿಗೆಯನ್ನು ನಿರರ್ಥಕಗೊಳಿಸುವುದು ಅಷ್ಟು ಸುಲಭವಲ್ಲ. ಏಕೆಂದರೆ ಕರೆನ್ಸಿಯ ಪ್ರತಿ ವ್ಯವಹಾರವನ್ನು ಕಂಪ್ಯೂಟರ್‌ಗಳು ದಾಖಲಿಸುತ್ತವೆ. ಅಲ್ಲದೆ ಈ ವ್ಯಾಪಾರದಲ್ಲಿ ಹಣದ ವಹಿವಾಟು ಅಗಾಧವಾದರೂ ವ್ಯಾಪಾರ ಕೇಂದ್ರಗಳ ಸಂಖ್ಯೆ ಮತ್ತು ವ್ಯಾಪಾರಸ್ಥರ ಸಂಖ್ಯೆ ಬೆರಳೆಣಿಕೆಯಷ್ಟಾದ್ದರಿಂದ ತೆರಿಗೆಯನ್ನು ಸಲ್ಲಿಸಬೇಕಾದವರ ಜಾಡನ್ನು ಗುರುತಿಸುವುದು ಸುಲಭ. ಶೇ. ೮೦ರಷ್ಟು ವಿದೇಶಿ ವಿನಿಮಯದ ವ್ಯಾಪಾರ ಕೇವಲ ಏಳು ನಗರಗಳಲ್ಲಿ ನಡೆಯುತ್ತದೆ. ಇಂದಿನ ಕಂಪ್ಯೂಟರ್ ಜಾಲದ ಯುಗದಲ್ಲಿ ವ್ಯಾಪಾರ ವಹಿವಾಟುಗಳಿಗೆ ಸಂಬಂಧಿಸಿದ ಮಾಹಿತಿಯನ್ನು ಮುಚ್ಚಿಡುವುದಾಗಲಿ, ಮರೆಮಾಚುವುದಾಗಲಿ ಅತ್ಯಂತ ಕಷ್ಟಕರವಾದುದು. ಅಸಾಧ್ಯವೆಂದೇ ಹೇಳಿದರೂ ಅವಾಸ್ತವವಾಗಲಾರದು.

ಈ ತೆರಿಗೆಯನ್ನು ಜಾರಿಗೊಳಿಸುವುದಕ್ಕೆ ತಾಂತ್ರಿಕ ಅಥವಾ ಆಡಳಿತಾತ್ಮಕ ತೊಡಕುಗಳಾವುದೂ ಇಲ್ಲ. ತೊಡಕಿರುವುದು ರಾಜಕೀಯ ಇಚ್ಛಾಶಕ್ತಿಯ ತೀವ್ರ ಅಭಾವದಲ್ಲಿ. ಈ ಕೊರತೆಗೆ ಪ್ರಮುಖ ಕಾರಣವೆಂದರೆ ಅಪಾರ ಐಶ್ವರ್ಯದ ಒಡೆಯರಿಂದ ಎದ್ದಿರುವ ವಿರೋಧ. ಆ ವಿರೋಧದ ಎದಿರು ಸರ್ಕಾರಗಳು ನಿಷ್ಕ್ರಿಯವಾಗಿವೆ. ಆದುದರಿಂದ ಟೋಜನ್ನರ ಪರಿಕಲ್ಪನೆಯನ್ನು ವಾಸ್ತವೀಕರಣಗೊಳಿಸಬೇಕಾದರೆ ಎಲ್ಲಾ ಶಕ್ತಿಗಳಿಗಿಂತಲೂ ಮಿಗಿಲಾದ ಸಂಘಟಿತ ಲೋಕಶಕ್ತಿಯಿಂದ ಮಾತ್ರ ಸಾಧ್ಯ. ಹಣಕಾಸಿನ ಮುಕ್ತ ಮಾರುಕಟ್ಟೆಯ ಮಾರಕ ಅನುಭವಗಳನ್ನು ಉಂಡು ಬಸವಳಿದ ಜನಸಮೂಹಗಳಿಂದಲ್ಲದೆ 'ಟೋಜನ್ ಕರ ಚಳುವಳಿ'ಗೆ ದಶದಿಕ್ಕುಗಳಿಂದ ಪ್ರೋತ್ಸಾಹ ದೊರೆಯುತ್ತಿದೆ.

ಅಂತರರಾಷ್ಟ್ರೀಯ ಟ್ರೇಡ್ ಯೂನಿಯನ್ ಆಂದೋಲನ, ಕೆನಡಾ ದೇಶದ ಸಂಸತ್ತು, ಫ್ರಾನ್ಸ್‌ನ ಅಟ್ಟಾಕ, ಇಂಗ್ಲೆಂಡ್‌ನ ವಾರ್ ಆನ್ ವಾಂಟ್ - ಇವುಗಳೆಲ್ಲ ಒಗ್ಗೂಡಿ ದಿ ಇಂಟರ್‌ನ್ಯಾಷನಲ್ ಟೋಜನ್ ಟ್ಯಾಕ್ಸ್ ನೆಟ್‌ವರ್ಕ್‌ನ್ನು ಸ್ಥಾಪಿಸಿವೆ. ಈಗ ವ್ಯಕ್ತವಾಗುತ್ತಿರುವ ಸಾರ್ವತ್ರಿಕ ಬೆಂಬಲವನ್ನು ವಿಸ್ತರಿಸಿ ಈ ತೆರಿಗೆ ಕಾರ್ಯರೂಪನ್ನು ಪಡೆಯುವಂತೆ ಮಾಡುವುದೇ ಈ ನೆಟ್‌ವರ್ಕ್‌ನ ಉದ್ದೇಶ.

ಈ ಸಂದರ್ಭದಲ್ಲಿ ಒಂದು ಆಶ್ಚರ್ಯಕರವಾದ ಆದರೆ ಹರ್ಷದಾಯಕವಾದ ಬೆಳವಣಿಗೆ ಒಂದನ್ನು ಓದುಗರ ಗಮನಕ್ಕೆ ತರುವುದು ಉಚಿತ. ೧೯೯೭ರಲ್ಲಿ ಆಗ್ನೇಯ ಏಷ್ಯವನ್ನು ಆವರಿಸಿದ ಆರ್ಥಿಕ ಅವಗಢದಿಂದ ಪಾರಾಗಲು ಮಲೇಶಿಯ ಕೈಬಿಟ್ಟಿದ್ದ ಬಂಡವಾಳದ ಚಲನೆಯ ಮೇಲಿನ ನಿಯಂತ್ರಣವನ್ನು ಪುನರ್‌ಸ್ಥಾಪಿಸಿತು. ಮಲೇಶಿಯಾದ ಈ ನೀತಿಯನ್ನು ಖಂಡತುಂಡವಾಗಿ ಖಂಡಿಸಿದ ಐ. ಎಂ. ಎಫ್. ಮತ್ತು ವಿಶ್ವಬ್ಯಾಂಕ್ ಇಂದು ಮಲೇಶಿಯಾದ ಬಂಡವಾಳ ನಿಯಂತ್ರಣ ನೀತಿಯನ್ನು ಒಪ್ಪಿರುವುದಲ್ಲದೆ ನಿಯಂತ್ರಣ ನೀತಿಯ ಅಗತ್ಯವನ್ನು ಮನಗಂಡಿರುವಂತೆ ಕಾಣುತ್ತದೆ. ಮಾರುಕಟ್ಟೆಯನ್ನು ಧ್ರುವೀಕರಿಸಿರುವ ಈ ಸಂಸ್ಥೆಗಳ ಪ್ರಜ್ಞೆಯಲ್ಲಿ 'ಜನಹಿತ ಮಾರುಕಟ್ಟೆಗಿಂತಲೂ ಮಿಗಿಲಾದುದು' ಎನ್ನುವ ಭಾವನೆ ಮೂಡುವುದಾದರೆ ಟೋಜನ್ ತೆರಿಗೆಯ ವಾಸ್ತವೀಕರಣ ಅನತಿ ಕಾಲದಲ್ಲೇ ಸಾಧ್ಯವೆನಿಸುತ್ತದೆ.

ದೇಶ ದೇಶಗಳ ನಡುವಿನ, ದೇಶಗಳ ಆಂತರಿಕ ಸಾಮಾಜಿಕ ಮತ್ತು ಆರ್ಥಿಕ ವ್ಯವಸ್ಥೆಗಳಲ್ಲಿ ಅಸಮಾನತೆಯ ಕಂದರ ಹಿಗ್ಗುತ್ತಿರುವ ಈ ಸಂದಿಗ್ಧ ಸಮಯದಲ್ಲಿ ತೆರಿಗೆಯ ಪರಿಧಿಯಿಂದ ಹೊರಗುಳಿದಿರುವ ಈ ಅಪಾರ ಐಶ್ವರ್ಯದ ಗಣಿಯಿಂದ ಸಾರ್ವಜನಿಕ ಒಳಿತಿಗೆ ಹಣವನ್ನು ಸಂಗ್ರಹಿಸಲು ಟೋಜನ್ ತೆರಿಗೆ ಒಂದು ಅಪೂರ್ವ ಅವಕಾಶವನ್ನು ಕಲ್ಪಿಸಿದೆ. ಇದನ್ನು ಕಾರ್ಯರೂಪಕ್ಕೆ ತರಲೇಬೇಕಲ್ಲವೆ ?

**ಮ. ಮಹೇಶನ್**
೧೬೮೯, ೧೫ನೇ ಮುಖ್ಯ ರಸ್ತೆ ೩೧ನೇ ಅಡ್ಡ ರಸ್ತೆ, ಬನಶಂಕರಿ ೨ನೇ ಹಂತ, ಬೆಂಗಳೂರು - ೫೬೦ ೦೭೦



# ರಕ್ತಬೀಜಾಸುರ

**ಡಾ॥ ಕೆ. ವೈ. ನಾರಾಯಣಸ್ವಾಮಿ**

*(ಹಾಡಿನೊಂದಿಗೆ ನಟರು ರಂಗಕ್ಕೆ ಪ್ರವೇಶ)*

**ಅದಿಗೋ ! ಅದಿಗೋ! ಬಂದಾನು ಬಂದ**
**ಧಿಂಗಿಡುತ ಧಿಂಗಿಡುತ ರಕ್ತರಾಕ್ಷಸ ಬಂದ**
**ಅಲಲಲೋ ಕಿಲಿಲೀ ಕಿಲಿಲೀ.........**
**ಜೀವ ವೃಕ್ಷದ ಬೇರು ಕತ್ತರಿಸುತಾ**
**ಭೂಗೋಲವನ್ನೆ ಬುಗುರಿಯಂತಾಡಿಸುತಾ**
**ಮಾಯಕದ ದಂಡದಲಿ ಜೀವಗಳ ಈಡಾಡಿ**
**ಅಲ್ಲೋಲ ಕಲ್ಲೋಲ ಬಾಳೆಂಬ ಕಡಲು**
**ಉರಿದೋ ಬರಿದೊ ಭೂತಾಯ ಮಡಿಲು**
**ಬಂದಾನೋ ಬಂದ ರಕ್ತರಾಕ್ಷಸ ಬಂದ ॥**

(ನಟರು ಹಾಡಿನ ತಲ್ಲಣವನ್ನು ನಾಟ್ಯೀಕರಿಸಿ ಹಿಂದೆ ಸರಿಯುತ್ತಿರುವಂತೆ ಬೇತಾಳ ಕಾಣಿಸಿಕೊಳ್ಳುತ್ತಾನೆ. ಅವನ ಹಿಂದೆ ರಾಜ ಮತ್ತು ಅವನ ಬೆಂಗಾವಲಿನವರು ರಂಗದ ಮಧ್ಯಕ್ಕೆ ಬರುತ್ತಾರೆ. ಬೇತಾಳ ತಪ್ಪಿಸಿಕೊಳ್ಳುವುದನ್ನು ನಟಿಸುತ್ತಾನೆ. ರಾಜ ಅವನನ್ನು ಬಂಧಿಸುತ್ತಾನೆ. ರಾಜನ ಸಹಾಯಕರು ತಲೆಕೆಳಗಾಗಿ ಬೇತಾಳನನ್ನು ಹೊತ್ತು ನಡೆಯುತ್ತಾರೆ. ರಾಜ ಕತ್ತಿಹಿಡಿದು ಮುನ್ನಡೆಯುತ್ತಾನೆ).

**ಬೇತಾಳ** : ಎಲ್ಲೈ ರಾಜನ್, ಅಯ್ಯ ವಿಕ್ರಮನೆ, ಎಲವ್ರೋ ಏ ನರಮನುಷ್ಯನೆ ಎಷ್ಟೋ ವರ್ಷಗಳಿಂದ ಹೀಗೆ ಹಗಲೆನ್ನದೆ ಇರುಳೆನ್ನದೆ ನನ್ನ ಬೆನ್ನ ಹಿಂದೆ ಬಿದ್ದಿರುವ ನಿನ್ನ ಹುಚ್ಚನ್ನು ಕಂಡರೆ ಪ್ರತಿಬಾರಿ ಎಲೆಕ್ಷನ್‌ನಲ್ಲಿ ಅಧಿಕಾರಕ್ಕಾಗಿ ಆಸೆಪಟ್ಟು ಮಣ್ಣುಮುಕ್ಕುವ ರಾಜಕಾರಣಿ ನೆನಪಾಗುತ್ತಾನೆ. ಹೂ... ನಿನ್ನ ಈ ಕಡು ಕಷ್ಟ ನೋಡಿದ್ರೆ ನನಗೆ ಹೃದಯ ಅನ್ನೋದು ಇದ್ದು ಅದರಲ್ಲಿ ಕರುಣೆ ಎಂಬ ದ್ರವ ಏನಾದರೂ ಇದ್ದಿದ್ದರೆ ಎಂದೋ ಬೆಂಕಿಯ ಮೇಲಿನ ಬೆಣ್ಣೆಯಂತೆ ಕರಗುತ್ತಿತ್ತು ಎಂದು ಮಾತ್ರ ಹೇಳಬಲ್ಲೆ. ಈ ಹುಟ್ಟು ಸಾವಿನ ಹಾದಿಯಲ್ಲಿ ನಡೆದು ನಡೆದು ದಣಿದಿರೊ ನಿನಗೆ ಮತ್ತಷ್ಟು ಆಯಾಸ ಆಗದ ಹಾಗೆ ಒಂದು ಕತೆ ಹೇಳುತ್ತೇನೆ...ದಾರಿ ಸುಗಮವಾಗಿ ಸಾಗೊ ಹಾಗೆ ಮಾತ್ರ ನೀ ನೋಡಿಕೋ....

**ಬೆಂ. ಭಟರು** : (ಬೇತಾಳನನ್ನು ಹೊತ್ತು ನಡೆಯುತ್ತಿದ್ದವರು ದಢ್ಣನೆ ಅವನನ್ನು ಕುಕ್ಕಿ) ಹಾ ಕಥೆ....

**ಭಟ ೧** : ಇನ್ನೊಂದು ಕಥೆ ! ...ಅಯ್ಯೋ ಬೇಡ ಬೇಡ...

**ಭಟ ೨** : ಇನ್ನೊಂದು ಸಾರಿ ತಪ್ಪಿಸಿಕೊಳ್ಳುವ ಕುತಂತ್ರದ ದಾರಿ ಹುಡುಕಬೇಡ....

**ಭಟ ೩** : ಮಾತಿನಲ್ಲೇ ಎಷ್ಟೊಂದು ಮೋಸ!

**ಭಟ ೪** : ಏಯ್ ದುಷ್ಟ ಬೇತಾಳ! ನಿನ್ನನ್ನು ಹೊತ್ತು ಹೊತ್ತು ನಮ್ಮ ಬೆನ್ನು ಗಾಣದ ಎತ್ತಿನ ಹೆಗಲಾಗಿಹೋಗಿದೆ ನೋಡು...

**ಭಟ ೨** : ಎಷ್ಟೋ ಸಾವಿರ ವರ್ಷಗಳಿಂದ ಈ ದೊರೆ ನಿನ್ನ ಹಿಂದೆ ನಾವು ಅವನ ಹಿಂದೆ, ನೀನೊ ನಿನ್ನ ಕಟ್ಟು ಕಥೆಗಳ ಹಿಂದೆ.

**ಭಟ ೪** : ಕಥೆ ಹೇಳೋದು, ಪ್ರಶ್ನೆ ಕೇಳೋದು, ಮಾತಾಡದಿದ್ರೆ ತಲೆ ಒಡೆಯುತ್ತೆ ಅಂತ ಹೆದ್ರಿಸೋದು ನೀನು ಹುಟ್ಟಿಸುವ ಭೀತಿಯಿಂದ.

**ಭಟ ೧** : ಈ ರಾಜ ತನ್ನ ಪ್ರಾಣ ಎಲ್ಲಿ ಹೋಗುತ್ತೋ ಅಂತ ಮೌನ ಮುರಿಯೋದು, ನೀನು ಅಲಕ್ಕನೆ ಕಾಡುಸೇರುವುದು.

**ಭಟ ೩** : ನಾವು ಕತ್ತೆಗಳ ಹಾಗೆ ನಿನ್ನನ್ನು ಮತ್ತೆ ಮತ್ತೆ ಹೊರೋದು.

**ಬೇತಾಳ** : ಇದು ನಾನು ಬೇಕು ಅಂತ ಮಾಡ್ತಾ ಇರೋ ತಂತ್ರ ಅಲ್ರಯ್ಯಾ! ತಪ್ಪಿಸಿಕೊಳ್ಳೋದು ಅಂದ್ರೆ ನನಗೆ ಜೀವನ್ಮರಣದ ಪ್ರಶ್ನೆ. ಕಥೆ ಹೇಳಿ ನಾನು ತಪ್ಪಿಸಿಕೊಳ್ಳದೇ ಹೋದ್ರೆ ನಾನು ಸಾಯ್ತೀನಿ! ಇದು ನಿಮ್ಮ ಹಣೆಬರಹ, ನನ್ನನ್ನು ಅಂದು ಪಾಪ ಕಟ್ಟಿಕೋಬೇಡಿ. ಕರ್ಮಣ್ಣೇವ ವಾದಿಕಾರಸ್ತೆ.... ಕೇಳಿಲ್ಲವೇ ನೀವು.

**ಭಟ ೧** : ಏ ಸಾಕು ನಿಲ್ಲಿಸಯ್ಯ ನಿನ್ನ ವೇದಾಂತ. ನಿನಗೂ ನಮ್ಮಂತೆ ಹೆಂಡಿರು ಮಕ್ಕಳು ಮನೆ ಗಿನೆ ಇದ್ದಿದ್ದರೆ ಗೊತ್ತಾಗಿರೋದು ಕಷ್ಟ ಏನು ಅಂತ ? ಎಷ್ಟೋ ವರ್ಷಗಳಿಂದ ಇದೇ ದಾರಿಯಲ್ಲಿ ನಡೆದು ನಡೆದು ನೋಡು, ನಮ್ಮ ಪಾದಗಳೇ ಸವೆದು ಮೊಂಡು ಗೂಟಗಳಾಗಿಹೋಗಿವೆ !

**ಭಟ ೨** : ವಿಶ್ರಾಂತಿಯ ಕನಸು ಕೂಡ ಬೀಳ್ತಾ ಇಲ್ಲ ಗೊತ್ತೇನಯ್ಯಾ ನಿನಗೆ.

**ಭಟ ೩** : ನನ್ನ ಕೈಯಲ್ಲಿ ಒಂದು ಚೂಪಾಗಿರೋ ಕತ್ತಿ ಇದ್ದಿದ್ದರೆ ನಿನ್ನ ಕಥೆ ಹೇಳೋ ನಿನ್ನ ನಾಲಿಗೆಯನ್ನ ಕೊಯ್ದುಬಿಡ್ತಾ ಇದ್ದೆ.

**ಭಟ ೪** : ನನ್ನ ಹತ್ತಿರ ದೊಡ್ಡದೊಂದು ಸೂಜಿ ಇದ್ದಿದ್ದರೆ ನಿನ್ನ ಕಥೆಗಳ ಕಣಜ ಆಗಿರೋ ನಿನ್ನ ಬಾಯನ್ನ ಎಂದೋ ಹೊಲಿದುಬಿಡುತ್ತಿದ್ದೆ.

**ಬೇತಾಳ** : ಆ.... ನೋಡಿದ್ರ, ನೀವು ಮಾತ್ರ ಈ ಕರ್ಮದಿಂದಾ ಬಿಡಿಸಿಕೋಬೇಕಂತ ಎಷ್ಟು ಆರಾಟ ಪಡ್ತಿದ್ದೀರ, ನಾನ್ ತಪ್ಪಿಸಿಕೊಂಡ್ರೆ, ಮಾತ್ರ ಹೊಟ್ಟೆ ಉರಿಪಡುತ್ತೀರ. ನಿಮಗೆ ಬಿಡುಗಡೆ ಬೇಕಾ?

**ಇಬ್ಬರೂ** : ಹೌದು... ಹೌದು... ಹೇಳು ಬಿಡುಗಡೆ ಹೇಗೆ !

**ಬೇತಾಳ** : ಬಿಡುಗಡೆಗಾಗಿಯೇ ನಾನು ಕಥೆ ಹೇಳೋದು !

**ಭಟ ೧** : ಮತ್ತೆ ಮೋಸ ! ಈ ಸಾರಿ ಕಥೆ ಹೇಳಿದ್ರೆ, ಈ ಸಾರಿ ಕಥೆ ಹೇಳಿದ್ರೆ ನಿನ್ನ ಏನ್ ಮಾಡಲಿ. ಏನಾದರೂ ಮಾಡಲೇಬೇಕು. ನಮಗೆ ಸಾಕಾಗಿ ಹೋಗಿದೆ.... ! ನಾವು ಏನ್ ಮಾಡ್ತಿವ್ರೋ ನಮಗೇ ಗೊತ್ತಿಲ್ಲ !

**ಬೇತಾಳ** : ಅಂದ್ರೆ !

**ಭಟ ೩** : ನೀನೆ ಹೇಳಿದ್ದೆಯಲ್ಲಾ ಇಂದಿರಾ ಗಾಂಧಿ ಕಥೆ ! ಆಕೆ ಹೆಂಗೆ ಸತ್ಲು ಅಂತ ಗೊತ್ತಲ್ಲ ?

**ಬೇತಾಳ** : ಏಯ್ ಬೆಪ್ಪು ತಕ್ಕಡಿಗಳೇ, ಎಷ್ಟು ದಡ್ಡರಯ್ಯಾ ನೀವು. ಕಥೆ ಹೇಳೋದನ್ನ ಯಾರು ಬೇಕಾದರೂ ತಡೆಯಬಹುದು, ಆದರೆ ಕಥೆ ನಡೆಯೋದನ್ನ ಯಾರಿಂದಲೂ ತಡೆಯಕ್ಕೆ ಆಗಲ್ಲ. ನಿಮ್ಮನ್ನು ಹುಟ್ಟಿಸಿದ ಭಗವಂತನಿಗೂ ಕಥೆ ನಡೆಯುವುದನ್ನ ತಡೆಯಕ್ಕೆ ಆಗಲ್ಲ.

(ಅಷ್ಟರಲ್ಲಿ ಸುಂಟರಗಾಳಿಯಂತೆ ಒಂದು ಭೂತದ ಪ್ರವೇಶ : ಅಯ್ಯೋ ಕಾಪಾಡಿ, ಈ ಬಲೆಯಿಂದ ಬಿಡಿಸಿ, ಈ ಜೇಡನ ಕೈಗಳಿಂದ ರಕ್ಷಿಸಿ ಎಂದು ಕಿರುಚುತ್ತಾ ತಿರುಗುತ್ತಾನೆ. ಭಟರು ಅಪ್ರತಿಭರಾಗುತ್ತಾರೆ. ರಾಜ ಮೂಕವಾಗಿ ನೋಡುತ್ತಾನೆ. ಭೂತವು ಮೂರು ಮುಖವಾಡಗಳನ್ನು ಧರಿಸಿರುತ್ತದೆ. ಮೈಯೆಲ್ಲಾ ಬಲೆಯಲ್ಲಿ ಸಿಕ್ಕಿಹಾಕಿಕೊಂಡಿರುತ್ತದೆ).

**ಬೇತಾಳ** : ನೋಡಿದ್ರೇನಪ್ಪಾ ! ನಾನು ಕಥೆ ಹೇಳದಿದ್ರೆ ಏನಾಯ್ತು, ಕಥೆ ತಾನಾಗೇ ನಿಮ್ಮ ಮುಂದೆ ಪ್ರತ್ಯಕ್ಷ ಆಗಿದೆ. ಈಗೇನು ಮಾಡ್ತೀರಾ ? ಈ ಕಥೆ ಅನ್ನೋದು ಹುಟ್ಟಿದ್ದಂಗೆ, ಸಾವಿದ್ದಂಗೆ. ಅದ್ರಿಂದ ಹರಿಹರಾದಿಗಳೂ ತಪ್ಪಿಸಿಕೊಳ್ಳುವುದಕ್ಕೆ ಸಾಧ್ಯವಿಲ್ಲಾ. ಹುಂ, ಕೇಳ್ರಿ.

**ಭೂತ** : ಅಯ್ಯೋ ಯಾರಾದರೂ ದಯೇ ಇದ್ದವರು, ಕಾಸಿನಷ್ಟು ಕನಿಕರ ಇದ್ದವರು ನನ್ನನ್ನು ಈ ಬಲೆಯಿಂದ ಬಿಡಿಸಿ! ಈ ಗಂಟುಗಳ ಸಿಕ್ಕುಗಳಿಂದ ಬಿಡಿಸಿ ! ಅಯ್ಯೋ ಅಯ್ಯೋ ಈ ಕಠೋರ ಜೇಡದ ಉರುಳಿನಿಂದ ಬಿಡಿಸುವ ಕರುಣೆಯ ಯಾವ ಕೈ ಇಲ್ಲವೇ ? ಈ ಸಿಕ್ಕುಗಳೂ, ಗಂಟುಗಳು (ಭೂತ ಒದ್ದಾಡುತ್ತಾನೆ, ಭಟರು ಹೆದರಿ ನಿಲ್ಲುತ್ತಾರೆ).

**ಬೇತಾಳ** : ಯಾರಯ್ಯಾ ನೀನು ? ಯಾವ ದೇಶದವನು? ನಿನ್ನ ಹೆಸರೇನು ? ಮೋಸಗಾರನೋ, ವೇಷಗಾರನೋ, ಅಥವಾ ಅಕ್ರಮವಾಗಿ ನುಗ್ಗಿರುವ ಗಡಿ ಆಕ್ರಮಣಕಾರನೋ, ಉಗ್ರಗಾಮಿಯೋ, ಅಥವಾ ಶಾಪಗ್ರಸ್ತನೋ... ?

**ಭೂತ** : ನಿಮಗೋ ಕುಶಲ ವಿಚಾರಿಸುವ ಕುತೂಹಲ. ಅಯ್ಯೋ ಮತ್ತೊಂದು ಗಂಟು. ಇದೋ ಸಾವಿನ ಮತ್ತೊಂದು ಸಿಕ್ಕು. ಏನು ಹೇಳಲಿ ಸ್ವಾಮಿ ನನ್ನ ದೌರ್ಭಾಗ್ಯ. ನಾನು ಮಾಡಿದ ತಪ್ಪಿನ ಫಲವನ್ನ ನಾನೇ ತಿನ್ನುತ್ತಾ ಇದ್ದೇನೆ. ಈ ಜಗತ್ತಿನ ಪಾಪದ ಹೊರೆಯನ್ನು ಹೊತ್ತು ಕುಸಿದುಹೋಗುತ್ತಿದ್ದೇನೆ. ಪ್ರತಿ ಘಳಿಗೆ ನಿಮಿಷ ಆ ಕರಾಳ ಜೇಡನು ನೇಯುವ ಬಲೆಯ ಕಣ್ಣುಗಳಲ್ಲಿ ಮುದುರಿಹೋಗುತ್ತಾ ಇದ್ದೇನೆ. ರಕ್ಷಿಸಿ ಅಯ್ಯೋ.... ಕಾಪಾಡಿ.

**ಬೇತಾಳ** : (ರಾ. ಭ. ಉದ್ದೇಶಿಸಿ) ಬನ್ನಿ ಅಪ್ಪ ನಿಮ್ಮ ರಾಜನಂತೂ ಮೌನ

ಮುರಿಯುವುದಿಲ್ಲ. ನೀವಾದರೂ ಆತನಿಗೆ ಸಹಾಯ ಮಾಡಿ (ರಾಜಭಟರು ಅವನನ್ನು ಬಲೆಯಿಂದ ಬಿಡಿಸಲು ಪ್ರಯತ್ನಿಸುತ್ತಾರೆ, ಮೇಳ ಹಾಡನ್ನು ಹಾಡುತ್ತಾರೆ).

**ಎಂಥ ಮಾಯದ ಬಲೆಯೋ ಏನು ಜೀವದ ಕೊಲೆಯೋ**
**ಕಣ್ಣ ದೀಪದ ಕೆಳಗೆ ನೂರು ಕಥೆಗಳ ಗಣಿಯೋ**
**ಎಷ್ಟೊಂದು ದಾಳಗಳು, ಎಂತೆಂಥ ಗಾಳಗಳೋ**
**ಬಲಿಯ ಪೀಠದ ಮೇಲೆ ಕಾಮನ ಬಿಲ್ಲೋ !**
**ವಿಧಿಯ ಕೈಯಲ್ಲಿ ನರ ಕವಣೆಯ ಕಲ್ಲೋ !**

*(ರಾಜಭಟರು ಸುಸ್ತಾಗಿ ಬೀಳುತ್ತಾರೆ)*

**ಭಟ ೧** : ಅಮ್ಮಮ್ಮ ! ಇದು ಯಾವ ಸೀಮೆಯ ಬಲೆಯಪ್ಪ ! ಸೀಗೆ ಪೊದೆ ಜಗ್ಗಿದ ಹಾಗೆ ಇದೆ. ಬಿಡಿಸುತ್ತಾ ಹೋದರೆ ಮತ್ತೆ ಸುತ್ತಿಕೊಂಡು ಬರುತ್ತಿದೆ.

**ಭೂತ** : ಅಯ್ಯೋ ನಿಲ್ಲಿಸಿ ! ಅದು ತೊಟ್ಟರೋ ವೇಷ ಅಲ್ಲಪ್ಪ ಬಿಚ್ಚೋದಿಕ್ಕೆ; ಇದೋ ನನ್ನ ಕರ್ಮಫಲ ಘೋರ ಶಾಪ.

**ಬೇತಾಳ** : ನನ್ನ ಮೈ ರೋಮುಗಳಷ್ಟು ಕಥೆಗಳನ್ನ ನಾನು ಬಲ್ಲೆ. ಯಾವ ಕಥೆಗಳಲ್ಲೂ ದೇವ ರಾಕ್ಷಸ ಕಿಂಪುರುಷ ಯಾರೂ ಇಂಥ ಶಾಪ ಕೊಟ್ಟ ಉದಾಹರಣೆಯೇ ಇಲ್ವಲ್ಲಾ.

**ಭೂತ** : ಈ ಘೋರ ಶಾಪ ಕೊಟ್ಟವರು ಒಬ್ಬ ಮಹರ್ಷಿಗಳು. ನಾನು ಒಬ್ಬ ರಾಜನ ಮಗನಾಗಿದ್ದೆ. ವಿದ್ಯಾಭ್ಯಾಸಕ್ಕಂತ ಸಕಲ ವಿದ್ಯಾಪಾರಂಗತರಾದ ಮಹರ್ಷಿಗಳ ಆಶ್ರಮಕ್ಕೆ ನನ್ನನ್ನ ಕಳುಹಿಸಿದರು. ನಾನು ಆಶ್ರಮ ತಲುಪುವ ವೇಳೆಗೆ ಅವರು ಭೀಕರ ಖಾಯಿಲೆಯಿಂದ ಮಲಗಿದ್ದರು. ಅವರ ಆರೈಕೆ ಮಾಡುತ್ತಿದ್ದ ಹೆಣ್ಣಿನ ಸೌಂದರ್ಯಕ್ಕೆ ಪ್ರಥಮ ನೋಟದಲ್ಲೇ ನಾನು ಮಾರುಹೋದೆ.

(ದೃಶ್ಯ ಬದಲಾಗುವುದು) (ಆಶ್ರಮದ ಗುಡಿಸಿಲಿನ ಹಾಗೆ ಕೆಲ ನಟರು ನಿಲ್ಲುವರು. ಒಂದು ಕಡೆ ಋಷಿ ಕೆಮ್ಮುತ್ತಾ ಮಲಗಿದ್ದಾರೆ. ಅಲ್ಲಿರುವ ಸ್ತ್ರೀ ಯಾರದೋ ನಿರೀಕ್ಷೆಯಲ್ಲಿ ಇರುವಂತಿದೆ)

**ಋಷಿ ಪತ್ನಿ** : ಸ್ವಾಮಿ ದೇವಲೋಕದಿಂದ ಧನ್ವಂತರಿಗಳು ಇನ್ನೂ ಬರಲಿಲ್ಲವೇಕೆ? (ಆಕೆ ಆತಂಕದಿಂದ ಅತ್ತಿಂದಿತ್ತ, ಓಡಾಡಿ ಹಾದಿ ನೋಡುತ್ತಾಳೆ)

**ಋಷಿ** : ಇನ್ನೇನು ಬರುತ್ತಾರೆ ಬಿಡು (ಕೆಮ್ಮು).

**ಧನ್ವಂತ್ರಿ** : (ಪ್ರವೇಶ) ಮಹರ್ಷಿಗಳಿಗೆ ನಮಸ್ಕಾರ.

**ಋಷಿ** : ನಿಮ್ಮ ದಾರಿ ಕಾಯುತ್ತಿದ್ದೆ ಬನ್ನಿ.

**ಧನ್ವಂತರಿ** : (ಪರೀಕ್ಷಿಸುತ್ತಾ) ಖಾಯಿಲೆ ಸ್ವಲ್ಪ ಬಲೀತಿದೆ. ಆದರೂ ಹೆದರುವ ಪ್ರಮೇಯವೇನೂ ಇಲ್ಲ. ಗುಣವಾಗಲಿಕ್ಕೆ ಸ್ವಲ್ಪ ಹೆಚ್ಚು ಕಾಲ ಹಿಡಿಯಬಹುದು.

**ಋಷಿ** : ಧನ್ವಂತರಿಗಳೇ ನಮಗೆ ಸಾಧ್ಯವಾದಷ್ಟು ಶೀಘ್ರ ಬಿಡುಗಡೆ ಬೇಕು. ಈ ಬಾಧೆಯಿಂದ ಆದರೂ ಸರಿ, ಅಥವಾ (ಕೆಮ್ಮುತ್ತಾ) ಈ ದೇಹದಿಂದ ಆದರೂ ಸರಿ.

**ಋಷಿ ಪತ್ನಿ** : ಶಿವ ಶಿವಾ... ! ಎಂಥ ಮಾತನಾಡ್ತೀರ ! ಬಿಡ್ತು ಅನ್ನಿ. ಧನ್ವಂತ್ರಿಗಳ ದಯೆಯಿಂದ ಎಲ್ಲ ಸರಿಹೋಗುವುದು.

**ಋಷಿ** : (ನಕ್ಕು) ಸಾವಿನ ಭಯದಿಂದ ಮಹರ್ಷಿಗಳ ಪತ್ನಿಯರೂ ಮುಕ್ತರಾಗಿರುವುದಿಲ್ಲ. ಈ ಬದುಕು ಎಷ್ಟು ವಿಚಿತ್ರ ಧನ್ವಂತ್ರಿಗಳೇ.

*(ದೃಶ್ಯ ಬದಲಾಗುವುದು)*

**ಭೂತ** : ಆ ವೈದ್ಯ ನನಗೆ ಕೆಲ ಮೂಲಿಕೆಗಳನ್ನು ತೋರಿಸಿ ಅವುಗಳಿಂದ ಔಷಧಿಗಳನ್ನು ತಯಾರಿಸಿ ಋಷಿಗೆ ನೀಡಲು ತಿಳಿಸಿ ತೆರಳಿದರು. ಆದರೆ ನಾನು ಆ ಋಷಿ ಪತ್ನಿಯಲ್ಲಿ ಅನುರಕ್ತನಾಗಿದ್ದೆ. ಆಕೆಯ ಕಣ್ಣುಗಳಲ್ಲಿದ್ದ ಹಸಿವು ನನ್ನನ್ನು ಕಂಡು ಘರ್ಜಿಸಿತು. ನಾನು ಒಂದು ಬ್ರಹ್ಮಹತ್ಯೆಗೆ ಕೈ ಹಾಕಿದೆ, ಅದೊಂದು ಘೋರ ವಿಶ್ವಾಸದ್ರೋಹ. ಆಕೆ ನನ್ನ ಆಸೆಗೆ ಸ್ಪಂದಿಸಿದಳೋ ಅಥವಾ ನಾನೇ ಬಲಾತ್ಕಾರ ಮಾಡಿದೆನೋ ನಾನು ಅರಿಯೆ. ಒಟ್ಟಿನಲ್ಲಿ ಆಕೆಗೂ ಆಶ್ರಮದ ಪೊರೆಯಿಂದ ಹೊರಬರಬೇಕಿತ್ತು ಅಂತಾ ಕಾಣುತ್ತೆ. ನಾನು ಯಾವ ಯಾವುದೋ ಕೈಗೆ ಸಿಕ್ಕ ಸೊಪ್ಪುಗಳನ್ನು ಅರೆದು ಔಷಧಿ ಎಂದು ಋಷಿಗೆ ನೀಡಿದೆ. ಕೆಲದಿನ ಕಳೆದ ನಂತರ ರೋಗ ಉಲ್ಬಣಗೊಂಡು ಋಷಿಗೆ ಅನುಮಾನ ಬಂತು. ನನ್ನನ್ನು ಕೇಳಿದರೂ ಕೂಡ. ನಾನು ಇದು ಮದ್ದಿರದ ಖಾಯಿಲೆ ಎಂದು ಧನ್ವಂತ್ರಿ ನನಗೆ ತಿಳಿಸಿದ್ದಾಗಿ ಸುಳ್ಳು ಹೇಳಿದೆ. ಆದರೆ ಋಷಿಗಳಿಗೆ ನಮ್ಮ ಮಾತಿನಲ್ಲಿ ನಂಬಿಕೆ ಇರಲಿಲ್ಲ. ಕೊನೆಗೊಂದು ದಿನ

ಆತನಿಗೆ ಎಲ್ಲಾ ತಿಳಿದುಹೋಯಿತು. ಆತ ನನ್ನ ದ್ರೋಹವನ್ನು ಕ್ಷಮಿಸಲಿಲ್ಲ. ಸಾಯುವ ಮುನ್ನ ಘೋರವಾಗಿ ಶಪಿಸಿದ.

**ಬೇತಾಳ** : ಶಾಪ ! ಏನು ಶಾಪ ಅದು.... !

**ಭೂತ** : ಮದ್ದಿರದ ಖಾಯಿಲೆ ಎಂದು ಸುಳ್ಳು ಹೇಳಿದ ನನಗೆ ಅಂಥಹುದೇ ರೋಗ ನಿರಂತರ ಬಾಧಿಸಲಿ ಎಂದ. ಅಪವಿತ್ರ ಮೈತ್ರಿಯಲ್ಲಿ ಈ ರೋಗ ಹುಟ್ಟಲಿ ಎಂದ. ನೀನು ಭೂಲೋಕದಲ್ಲಿ ರಕ್ತಬೀಜಾಸುರನಾಗಿ ಬಾಳು ಎಂದು ಶಾಪವಿತ್ತು ಸತ್ತ.

**ಭಟ ೧** : ಛೇ, ಛೇ...ಅಯ್ಯೋ ಪಾಪ!

**ಭಟ ೨** : ಹೀಗಾಗಬಾರದಿತ್ತು.

**ಭೂತ** : ಅಷ್ಟೇ ಆಗಿದ್ದರೆ ಈ ರೋಗದಿಂದ ನರಳಿ ಒಂದು ದಿನ ಸತ್ತು ಬಹುಶಃ ಈ ನೋವುಗಳಿಂದ ಮುಕ್ತಿ ಪಡೆಯುತ್ತಿದ್ದೆ. ಆದರೆ ಆತ ಎಷ್ಟು ನಿಷ್ಕರುಣಿಯಾಗಿದ್ದ ಅಂದ್ರೆ ಸಾಯುವ ಮುನ್ನ ಕೊನೆಗಳಿಗೆಯಲ್ಲಿ ಭೂಲೋಕದಲ್ಲಿ ನಿನ್ನ ಹಾಗೆ ವಿಶ್ವಾಸ ದ್ರೋಹ ಬಗೆದವರು, ಅಕ್ರಮ ಸಂಬಂಧ ಹೊಂದುವ ಜನ ಕೂಡಾ ಈ ರೋಗಕ್ಕೆ ತುತ್ತಾಗಲಿ ಎಂದ. ಒಬ್ಬೊಬ್ಬರಿಗೂ ರೋಗ ಹೆಚ್ಚಾದಂತೆ ನಿನ್ನ ಸುತ್ತ ಸಾವಿನ ಬಲೆಯ ಒಂದೊಂದು ಗಂಟು ಹೆಚ್ಚಾಗಲೆಂದು ಶಾಪ ಕೊಟ್ಟು ಸತ್ತ, ನನಗೆ ಸಾವಿಲ್ಲದೆ ಮಾಡಿದ. ಅಯ್ಯೋ ಕಾಪಾಡಿ.

**ಬೇತಾಳ** : ಇದು ನಾನು ಕಂಡು ಕೇಳರಿಯದ ಕಠೋರ ಶಾಪ ! ನೀನು ಪರಿಹಾರ ಕೇಳಲಿಲ್ಲವೆ ?

**ಭೂತ** : ಕೇಳಿದೆ ಸ್ವಾಮಿ, ಕೇಳಿದೆ. ಜನರು ವಿಕಾರಗಳನ್ನು ಜೈಸಿದಾಗ, ಅನೈತಿಕ ಬದುಕಿನಿಂದ ಶುಭ್ರ ಜೀವನಕ್ಕೆ ತಿರುಗಿದಾಗ ನಿನಗೆ ಮುಕ್ತಿ ಎಂದ. ಒಬ್ಬೊಬ್ಬ ಮನುಷ್ಯನೂ ಮನೋವಿಕಾರವನ್ನು ಗೆಲ್ಲುತ್ತಿದ್ದಂತೆ ಒಂದೊಂದು ಕಟ್ಟು ಬಿಚ್ಚಿಕೊಳ್ಳುತ್ತದೆ ಎಂದ ! ಅಯ್ಯೋ ಕಾಪಾಡಿ....

**ಭಟ** : ಅಯ್ಯ ! ಭೂತ, ನಿನಗೆ ಏಕೆ ಈ ಮೂರು ಮುಖಗಳು? ಇದೂ ಶಾಪವಾ ! ಅಥವಾ (ಆಗ ಭೂತವು ಸುಮ್ಮನೆ ನಿಂತಿರುತ್ತದೆ. ಒಬ್ಬ ನಟ ಸುಂಟರಗಾಳಿಯಂತೆ ಭೂತದ ಹತ್ತಿರ ಬಂದು ಅವನಿಂದ ಮುಖವಾಡವನ್ನು ಪಡೆದು ತೊಟ್ಟುಕೊಂಡು ಮಾತನಾಡತೊಡಗುತ್ತಾನೆ)

**ಬೇತಾಳ** : ಯಾರಪ್ಪ ನೀನು? ನಿನ್ನದೇನು ಕಥೆ ?......

**ಮುಖವಾಡ ೧** : ನಾನು ಒಬ್ಬ ಶ್ರೀಮಂತ ಮನೆತನದ ಹುಡುಗ, ನತದೃಷ್ಟ. ನನಗೆ ಯಾವುದಕ್ಕೂ ಕೊರತೆ ಇರಲಿಲ್ಲ. ಅಪ್ಪ ಅಮ್ಮ ತಿನ್ನಲು ಬೇಕಾದಷ್ಟು ಸಂಪಾದಿಸಿ ಇಟ್ಟಿದ್ದರು. ಗೆಳೆಯರ ಸಹವಾಸದಲ್ಲಿ ಮತ್ತೇರಿಸುವ ಉದ್ದೀಪನ ಮದ್ದಿನ ಬೆನ್ನು ಬಿದ್ದೆ. ಆ ಹುಚ್ಚಿನಲ್ಲಿ ಸಿಕ್ಕ ಸಿಕ್ಕವರಿಂದ ಪಡೆದ ಸೂಜಿಗಳಿಂದ ನನ್ನ ಮೈಯನ್ನೇ ನಾನು ತೂತುತೂತಾಗಿ ಕೊರೆದುಕೊಂಡೆ. ನನ್ನ ಬದುಕು ಜರಡಿಯಲ್ಲಿ ಹಿಡಿದಿಟ್ಟ ನೀರಾಗಿಹೋಯಿತು. ನನಗೆ ಇದರ ಜೊತೆ ಹೆಣ್ಣಿನ ಹುಚ್ಚು, ಖಯಾಲಿ. ದಿನಕ್ಕೊಂದು ಹೊಸ ರುಚಿಯ ಹಣ್ಣು ಸವಿಯುತ್ತಾ ಹೋದೆ. ನನ್ನ ರಾತ್ರಿಯ ಕತ್ತಲು ದೀರ್ಘವಾಗುತ್ತಾ ಹೋಯ್ತು. ಒಂದು ದಿನ ಬೆಳಕಾಯ್ತು. ನಾನು ನರಕಕೂಪದಲ್ಲಿದ್ದೆ. ನನ್ನನ್ನು ಔಷಧಿಯೇ ಇಲ್ಲದ ವ್ಯಾಧಿ ನುಂಗಿತ್ತು . ಪರೀಕ್ಷೆ ಮಾಡಿದ ವೈದ್ಯರು,..ಅದನ್ನು ಯಾವ ಬಾಯಿಂದ ಹೇಳಲಿ... ಅದನ್ನು ಏಡ್ಸ್‌ರೋಗ ಅಂತ ಕರೆದು ಕೈಚೆಲ್ಲಿದರು. ಸಮಾಜ ನನ್ನನ್ನು ಬಹಿಷ್ಕರಿಸಿತು. ಜನ ತಿರಸ್ಕರಿಸಿದರು. ಅಂದಿನಿಂದ ಈ ಬಲೆಯಲ್ಲಿ ಸಿಕ್ಕಿಬಿದ್ದೆ...ಅಯ್ಯೋ...ಮಾಯೆಯ ಕೈಗಳು ಸಾವಿರ ಭರ್ಜಿಗಳಿಂದ ನನ್ನ ತಿವಿಯುತ್ತಿವೆ.

(ಆತ ಸುಂಟರಗಾಳಿಯಂತೆ ಹೊರಹೋಗುತ್ತಾನೆ. ಅದೇ ವೇಳೆ ಮತ್ತೊಬ್ಬ ಪ್ರವೇಶ, ಮತ್ತೊಂದು ಮುಖವಾಡ ಪಡೆದುಕೊಂಡು ಮಾತನಾಡುತ್ತಾನೆ)

**ಬೇತಾಳ** : ನೀನು ಯಾರೋ ವಯಸ್ಸಾದವನ ಹಾಗೆ ಕಾಣ್ತಿಯ !? ನಿನ್ನದೇನು ಶಾಪವೊ, ವಿದ್ರೋಹವೋ !

**ಮುಖವಾಡ** : ನಾನು ಮಾಡಿದ ಪಾಪ ಏನು ಅಂತ ನನಗೆ ಅರಿವಿಲ್ಲ ಸ್ವಾಮಿ. ನಾನೊಬ್ಬ ಕಡುಬಡವನಿದ್ದೆ. ಹಗಲು ರಾತ್ರಿಗಳನ್ನು ಲೆಕ್ಕಿಸದೆ ದುಡಿದು ಹೆಂಡತಿ ಮಕ್ಕಳನ್ನು ಪೋಷಿಸುತ್ತಿದ್ದೆ. ಒಂದು ದಿನ ಕೆಲಸದ ಸಂದರ್ಭದಲ್ಲಿ ಯಂತ್ರಕ್ಕೆ ಸಿಕ್ಕಿ ನನ್ನ ಕೈ ಕತ್ತರಿಸಿ ಹೋಯ್ತು. ಆಗ ಪ್ರಜ್ಞೆ ತಪ್ಪಿತು. ಎಚ್ಚೆತ್ತುಕೊಂಡಾಗ ಆಸ್ಪತ್ರೆಯಲ್ಲಿದ್ದೆ. ಯಾರೋ ಪುಣ್ಯಾತ್ಮರೋ ಪಾಪಾತ್ಮರೋ ರಕ್ತ ನೀಡಿ ಪ್ರಾಣ ಉಳಿಸಿದ್ರಂತೆ ! ಆದರೆ ನನ್ನ ವಿಧಿ, ಅವರು ಕೊಟ್ಟ ರಕ್ತದಲ್ಲಿ ಮದ್ದಿರದ ರಕ್ಕಸ ಕಾಯಿಲೆ ಏಡ್ಸ್ ಸೋಂಕು ಇತ್ತಂತೆ. ಅಂದಿನಿಂದ ಈ ನರಕದ ಕೂಪ ಈ ಜೇಡರ ಬಲೆಯಲ್ಲಿ ನಾನು ಬಂಧಿ. ಅಯ್ಯೋ ಮತ್ತೊಂದು ಗಂಟು. ಬಿಡಿಸಿ.... ಈ ಲೋಕದಲ್ಲಿ ಶಿಕ್ಷೆ ಅನುಭವಿಸುವುದಕ್ಕೆ ತಪ್ಪೇ ಮಾಡಿರಬೇಕಿಲ್ಲ ಸ್ವಾಮಿ.

*(ಅವನೂ ಕೂಡ ಹಿಂದಿನವನಂತೆ ನಿರ್ಗಮನ. ಆಗ ಮತ್ತೊಬ್ಬನ ಪ್ರವೇಶ)*

**ಬೇತಾಳ** : ಅರೆ ಹುಡುಗ !! ನೀನು ಯಾವ ತಂದೆ ತಾಯಿಗಳ ಮಗ ! ನಿನ್ನ ದುಃಖ ಯಾವುದು ?

**ಮುಖವಾಡ ೩** : ನಾನು ಕೂಡಾ ಈ ಕ್ರೂರ ಬಲೆಯ ಬಂದಿಯೇ ಸ್ವಾಮಿ. ನನಗೆ ಈ ಸೋಂಕು ಹೇಗೆ ಬಂತೋ ನಾ ಕಾಣೆ. ನನ್ನ ಬಾಳಿನ ಸೂರ್ಯನಿಗೆ ಹುಟ್ಟುವ ಮುನ್ನವೇ ಗ್ರಹಣವಾಗಿತ್ತು. ಒಟ್ಟಿನಲ್ಲಿ ಆಡುವ ನಲಿಯುವ ವಯಸ್ಸಿನಲ್ಲಿ ನಾನು ಕನಸುಗಳ ಕಳೆದುಕೊಂಡು ಭವಿಷ್ಯವಿಲ್ಲದ ಭೂತವಾಗಿದ್ದೆ. ನಾನು ಆ ದೇವರಲ್ಲಿ ಅನೇಕ ಸಾರಿ ಕೇಳಿದ್ದೇನೆ. ನನ್ನ ತಪ್ಪು ಯಾವುದು ? ಯಾವ ದ್ರೋಹಕ್ಕೆ ಈ ಶಿಕ್ಷೆ? ಆ ಕಲ್ಲು ದೇವರು ಮಾತನಾಡಲಿಲ್ಲ. ನೀವು ಮನುಷ್ಯರು. ನೀವಾದ್ರೂ ಹೇಳಿ, ನನ್ನದೇನು ತಪ್ಪು ? ನನಗೆ ನನ್ನ ಬಾಲ್ಯ ಕೊಡಿ ನನ್ನ ನಾಳೆ ಕೊಡಿ....(ಭೂತಕ್ಕೆ ಮುಖವಾಡ ತೊಡಿಸಿ ಮರೆಯಾಗುವನು)

**ಭೂತ** : ಇನ್ನೆಷ್ಟು ವರ್ಷ, ಯುಗ, ಕಲ್ಪ, ಕಾಲ ಈ ಪಾಪದ ಭಾರ, ಅಯ್ಯೋ ಬಿಡಿಸಿ ! ಕಾಪಾಡಿ ದೈವಗಳೇ, ನರ ಮನುಷ್ಯರೇ, ರಾಕ್ಷಸರೇ, ಯಾರಾದರೂ ಸರಿ ಈ ನೋವಿನ ಪಾತಾಳದಿಂದ ನನ್ನನ್ನು ಮೇಲೆತ್ತಿ. ಈ ಸಾವಿನ ಕಣ್ಣುಗಳ ಬಲೆಯಿಂದ ಬಿಡಿಸಿ.

**ಬೇತಾಳ** : ರಾಜಾ ! ತ್ರಿವಿಕ್ರಮ; ಈ ಪ್ರಶ್ನೆಗೆ ಉತ್ತರ ಕಂಡುಹಿಡಿಯೋದು ರಾಜನಾಗಿ ನಿನ್ನ ಧರ್ಮ ?

**ವಿಕ್ರಮ** : (ಇಷ್ಟು ಹೊತ್ತು ಪ್ರಯತ್ನಪೂರ್ವಕವಾಗಿ ಸುಮ್ಮನಿದ್ದ ರಾಜ) ಈ ಬಲೆಯ ಗಂಟುಗಳನ್ನು ಬಿಡಿಸಲು ಸಾಧ್ಯವಿಲ್ಲವೆ ? ಮನುಕುಲವನ್ನು ಈ ಸೋಂಕಿನ ಧಾಳಿಯಿಂದ ಉಳಿಸುವ ಮಾರ್ಗವಿಲ್ಲವೆ ? ಬೇತಾಳ, ನೀನೇ ದಾರಿ ತೋರು. ಎಲ್ಲ ಜನರೂ ಈ ರೋಗ ಪೀಡಿತರಾದರೆ, ಭೂಮಂಡಲ ಮೃತ್ಯುಮಂಡಲವಾದರೆ ನಾನು ಯಾರ ಸುಖಕ್ಕಾಗಿ ಸಾವಿರಾರು ವರ್ಷಗಳಿಂದ ನಿನ್ನ ಪ್ರಚಂಡ ಶಕ್ತಿಯ ಪ್ರಯೋಜನ ಪಡೆಯಲು ಪ್ರಯತ್ನಿಸುತ್ತಿದ್ದೇನೋ ಅದೆಲ್ಲವೂ ವ್ಯರ್ಥವಾಗುವುದು. ಈ ಅಭಾಗ್ಯರ ದುಃಖವನ್ನು ನಾ ಸಹಿಸಲಾರೆ. ಇದಕ್ಕೆ ಪರಿಹಾರವೇನು ?

**ಬೇತಾಳ** : (ನಗುತ್ತಾ) ನಾನು ಬಿಡುಗಡೆ ಪಡೆದೆ! ರಾಜಾ ನಿನ್ನ ಮೌನ ಭಂಗವಾಯಿತು. ನಾನೀಗ ಸ್ವತಂತ್ರ.

**ಭಟರು** : ಅಯ್ಯೋ ಮತ್ತೇ ಅದೇ ದಾರೀ ! ಬೇತಾಳನ ಹಿಂದೆ ಹೀಗೆ ಸಾವನ್ನು ಬೆನ್ನಟ್ಟುವ ವ್ಯಥೆಯಿಂದ ನಮಗೂ ಬಿಡುಗಡೆ ಬೇಕು, ಅಯ್ಯೋ...

**ಭೂತ** : ಅಯ್ಯೋ ಕಾಪಾಡಿ. ಬಲೆಯ ಕಣ್ಣುಗಳು ನನ್ನ ಶ್ವಾಸಕೋಶಗಳನ್ನು ಸುತ್ತುವರೆದು ಉಸಿರು ಕುಡಿಯುತ್ತಿವೆ. ನನ್ನನ್ನು ಈ ಹಿಂಸೆಯಿಂದ ತಪ್ಪಿಸಿ (ಅಂಗಲಾಚುತ್ತಾನೆ).

**ಮುಖವಾಡ ೧** : ನನ್ನ ಈ ದುರಂತಕ್ಕೆ ಮುಕ್ತಿ ಇಲ್ಲವೆ?

**ಮುಖವಾಡ ೨** : ಈ ಮನುಷ್ಯವಿಕಾರಗಳಿಗೆ ಕೊನೆ ಇಲ್ಲವೆ ?

**ಮುಖವಾಡ ೩** : ನನಗೆ ನಾಳೆ ಎಂಬುದು ಇಲ್ಲವೆ ?

**ರಾಜ** : ದೈವ ಅಷ್ಟು ನಿಷ್ಕರುಣಿಯಲ್ಲ! ಅಯ್ಯ ಬೇತಾಳ, ನಾನು ಮತ್ತೆ ನಿನ್ನ ಬೆನ್ನು ಹತ್ತುವುದಿಲ್ಲ ಅಂತ ನಿನಗೆ ವಚನ ಕೊಡುತ್ತೇನೆ. ಆದರೆ ಈ ಜೇಡನ ಬಲೆಯಿಂದ ಈ ಜೀವಿಗಳನ್ನು ಉಳಿಸಿಕೊಳ್ಳುವ ಮಾರ್ಗ ತೋರು. ಜೀವ ವೃಕ್ಷ ಒಣಗದೆ ಇರಲು ಉಪಾಯ ಯಾವುದು? ಹೇಳು ಬೇತಾಳ ಹೇಳು ? (ಪ್ರಾರ್ಥಿಸುತ್ತಾ)

**ಬೇತಾಳ** : (ಒಂದು ಮೂಲೆಯಿಂದ ಮತ್ತೊಂದು ಮೂಲೆಗೆ ಹಾರುವಂತೆ ನಟಿಸುತ್ತಾ) ಪರಿಹಾರವೇನೋ ಇದೆ. ಆದರೆ ಆಡುವ ಮಾತಿಗೂ ಮಾಡುವ ಕೆಲಸಕ್ಕೂ ತಾಳೆಯಿಲ್ಲದ ಈ ನರಮನುಷ್ಯರನ್ನು ಈ ಬಲೆಯಿಂದ ಬಿಡಿಸುವುದು ಹೇಗೆ ?

**ಭೂತ** : ಅಂದರೆ ನನಗೆ ಈ ಸಂಕಟಗಳಿಂದ ಬಿಡುಗಡೆ ಇಲ್ಲವೆ? ಅಯ್ಯೋ ಸಾವಿರದ ನನ್ನ ಬಾಳೆ ?

**ಬೇತಾಳ** : ಪ್ರಯತ್ನಿಸಿದರೆ ಒಂದು ಉಪಾಯ ಉಂಟು.

**ರಾಜ** : ಏನದು ಉಪಾಯ ? ಹೇಳು ತಡವೇಕೆ.

**ಭೂತ** : ಉಪಾಯ ! ಎಷ್ಟೋ ದಿನಗಳ ಮೇಲೆ ನನ್ನ ಕಿವಿಗಳು ಈ ಪದವನ್ನು ಕೇಳಿ ಪುಳಕಗೊಂಡವು. ಆ ಪದವೆಷ್ಟು ಚೆನ್ನ. ನನ್ನ ಮೈಯ ಕಬ್ಬಿಣದ ಸಲಾಕೆಗಳಾಗಿದ್ದ ಈ ರೋಮಗಳು ಮತ್ತೆ ಉಪಾಯ ಎಂಬ ಪದಕ್ಕೆ ಜೀವ ಪಡೆದಂತೆ ಕಂಪಿಸುತ್ತವೆ. ನಿಮಿರುತ್ತವೆ ! ಹೇಳು.....ಹೇಳು.

**ಬೇತಾಳ** : ಅದು ತುಂಬಾ ಸರಳ ಹಾದಿ, ಆದರೆ ನಡಿಗೆ ಮಾತ್ರ ಕಠಿಣ. ಉಪಾಯ ಒಂದೇ : ಶುಭ್ರ ಜೀವನ! ಅಂದರೆ ಅಕ್ರಮ ಲೈಂಗಿಕ ವಿಕಾರಗಳಿಂದ ಮನುಷ್ಯ ದೂರವಿರಬೇಕು ಮತ್ತು ಅಪರಿಚಿತರೊಡನೆ ಏರ್ಪಡುವ ಸಂಬಂಧದ ಸಮಯದಲ್ಲಿ ಸುರಕ್ಷಿತ ಮಾರ್ಗವನ್ನು ಅನುಸರಿಸಬೇಕು.

**ಭೂತ** : ಏನಿದು ಸೋಜಿಗ. ನನ್ನ ಬೆನ್ನ ಮೇಲಿದ್ದ ಭಾರದ ಕಲ್ಲುಗಳು ಒಂದೊಂದೇ ಉರುಳಿಹೋದಂತೆ, ಹಗುರವಾದಂತೆ ! ಇದು ಸ್ವಪ್ನ ಅಲ್ಲ ತಾನೆ ?

**ಬೇತಾಳ** : ರಕ್ತ ಪಡೆಯುವಾಗ ಸೋಂಕು ಇರದ ಪ್ರಾಮಾಣಿಸಿದ ರಕ್ತ ಮಾತ್ರ ಪಡೆಯಬೇಕು !

**ಭೂತ** : ನನ್ನ ಕೊರಳು ಬಿಗಿದಿದ್ದ ಕಾಳಿಂಗ ಸರ್ಪ ಕಟ್ಟು ಸಡಲುತ್ತಿದೆ ಉಸಿರು ಸಿಕ್ಕುತ್ತಿದೆ!

**ಬೇತಾಳ** : ಉದ್ದೀಪನಗೊಳಿಸಿ ದಾರಿತಪ್ಪಿಸುವ ಮದ್ದುಗಳಿಂದ ದೂರ....

**ಭೂತ** : ನನ್ನ ಸುತ್ತಿದ್ದ ಕಠೋರ ಜೇಡರ ಬಲೆಯ ಕಪ್ಪುಗಳು ಸಡಲುತ್ತಿವೆ !

**ಬೇತಾಳ** : ಸೋಂಕು ಪೀಡಿತನು ಬಳಸಿದ ಬ್ಲೇಡು, ಸೂಜಿ, ಸಿರಿಂಜ್, ಮುಂತಾದವನ್ನು ಮತ್ತೆ ಬಳಸಕೂಡದು. ಈ ಸೂತ್ರಗಳನ್ನು ಪರಿಪಾಲಿಸಿದರೆ ಈ ರಕ್ತ ರಾಕ್ಷಸನಿಂದ ಪಾರಾಗಬಹುದು. ನಾನಿನ್ನು ಬರುತ್ತೇನೆ, ಸಾಧ್ಯವಾದರೆ ಮನುಕುಲಕ್ಕೆ ಒಳ್ಳೆಯದಾಗಲಿ. (ಬರ್ರನೆ ಹೋಗುತ್ತಾನೆ)

**ಭೂತ** : ಅದೋ ನನ್ನ ಕರಾಳ ರಾತ್ರಿ ಮುಗಿಯಿತು. ನನ್ನ ಗತ ಸಮಾಧಿಗಳಿಂದ ಸೂರ್ಯ ಮೂಡುತ್ತಿದ್ದಾನೆ. ಬದುಕಿದೆ....ಬದುಕಿದೆ.

**ರಾಜ** : ಬದುಕಿದ್ದು ನೀನು ಮಾತ್ರ ಅಲ್ಲ ! ಇಡೀ ಮಾನವಕುಲ... ಜೀವವೃಕ್ಷದ ಬೇರು ನಂಜಾಗಿ ಕೊಳೆತುಹೋಗುವ ಮುನ್ನ ಅದನ್ನು ಕಾಪಾಡುವ ಹೊಣೆ ಈಗ ನಿನ್ನದು.

**ಭೂತ** : ಬನ್ನಿ ಮಿತ್ರರೆ ನನ್ನನ್ನು ಅಪ್ಪಿ ಅಭಿನಂದಿಸಿ ! ಈ ಸಂತೋಷ ತಾಳಲಾರೆ.

**ಭಟರು** : ಬಿಡುಗಡೆ ನಮಗೂ ಕೂಡ ! ಹಾಂ... ಅಲ್ಲೆ ನಿಲ್ಲು. ನಾವು ಇಲ್ಲಿಂದಲೇ ಅಭಿನಂದಿಸುತ್ತೇವೆ (ದೂರ ಸರಿವರು)

**ಭೂತ** : ಶಂಕೆ ಬೇಡ ಗೆಳೆಯರೆ, ಈ ಸೋಂಕು ಕೈ ಕುಲುಕುವುದರಿಂದ, ಜೊತೆಯಲ್ಲಿ ಉಣ್ಣುವುದರಿಂದ, ಜೊತೆಗೆ ಇರುವುದರಿಂದ, ಒಟ್ಟಿಗೆ ಇರುವುದರಿಂದ ಹಬ್ಬುವುದಿಲ್ಲ. ಕೇವಲ ರಕ್ತ ಸಂಪರ್ಕದಿಂದ ಮಾತ್ರ,... ಹೆದರದಿರಿ... ಬನ್ನಿ ಶುಭ ಹಾರೈಸಿ ನನಗೆ !!!

**ಭಟರು** : ನಿನ್ನ ಮನ ನೋಯಿಸಿದೆವು. ನಮ್ಮನ್ನು ಕ್ಷಮಿಸು ಮಿತ್ರ.

*(ಅಪ್ಪಿಕೊಂಡು ಅಭಿನಂದಿಸುತ್ತಾರೆ)*

**ಭೂತ** : ಮಹಾಪ್ರಭು, ಬೇತಾಳನಷ್ಟೆ ನಾನೂ ಕೂಡ ಶಕ್ತಿವಂತ. ನಾನು ಏನು ಮಾಡಲಿ ಹೇಳಿ, ಇನ್ನು ನಾನು ನಿಮ್ಮ ದಾಸ !

**ರಾಜ** : ಅಯ್ಯ... ನಿನ್ನನ್ನು ಏನೆಂದು ಸಂಬೋಧಿಸಬೇಕೊ ತಿಳಿಯುತ್ತಿಲ್ಲ. ಈ ರಕ್ತಬೀಜಾಸುರನ ಸೋಂಕಿನ ಸುಳಿಯಲ್ಲಿ ಮನುಕುಲ ಸಿಕ್ಕಿಬೀಳದಂತೆ ಅವರನ್ನು ತಡೆಯುವುದು ನಮ್ಮ ಆದ್ಯ ಕರ್ತವ್ಯ. ನೀನು ಊರೂರು ತಿರುಗಿ ದೇಶ ಖಂಡಾಂತರಗಳಲ್ಲಿ ಸಂಚರಿಸಿ ಜನರಿಗೆ ಈ ಮಾರಕ ಮೃತ್ಯು ಕೂಪದ ಪರಿಣಾಮಗಳನ್ನು ವಿವರಿಸು. ಶುಭ್ರ ಜೀವನದ ಸೂತ್ರ ಪಾಲಿಸುವಂತೆ ಎಚ್ಚರಿಸು. ಇದು ರಾಜಾಜ್ಞೆ.

**ಭೂತ** : ಆಗಲಿ ಪ್ರಭು, ಮನುಕುಲದ ರಕ್ಷಣೆ ಇನ್ನು ನನ್ನ ಹೊಣೆ.

*(ಮಾಯವಾಗುತ್ತಾನೆ)*

**ಭಟರು** : ಪ್ರಭು ಕೊನೆಯಲ್ಲಿ ನಮಗೊಂದು ಅನುಮಾನ.... (ಅನುಮಾನಿಸುತ್ತಾರೆ)

**ರಾಜ** : ನಿಮಗೆ... ಬೇತಾಳನ ಸೋಂಕು ತಗುಲಿದಂತಿದೆ.

**ಭಟರು** : ಮಹಾಪ್ರಭು ! ಈ ಏಡ್ಸ್ ಎಂದರೇನು ?

*(ಹಾಡಿನೊಂದಿಗೆ ಮುಕ್ತಾಯ)*

**ಹೂವು ಯಾವುದೋ ದುಂಬಿ ಯಾವುದೋ ಯಾವುದೋ ಈ ಪರಾಗ**
**ಪ್ರಸಾರಗೊಂಡಿದೆ ಎಲ್ಲೆಡೆ ಇಂದು ಏಡ್ಸ್ ಎಂಬ ರೋಗ**
**ಭೀಕರ ಮಾರಕ ರೋಗ ಇದು ರಕ್ತ ಬೀಜ ಮಾಯಾವಿ**
**ಕಾಮಾಂಧರ ಪಾಲಿಗೆ ಕೋವಿ ಮಕ್ಕಳು ಮರಿ ಸಹ ಲೆಕ್ಕಕ್ಕಿಲ್ಲ ಜೀವ ಇದಕ್ಕೆ ಸೋವಿ**
**ಇದು ಕದ್ದು ಅಡಗಿರುವ ಜೇಡ ಇದು ತೋರದು ತನ್ನ ಜಾಡ**
**ಸಿಕ್ಕಿಬೀಳುವರು ಇದರ ಜಾಲಕ್ಕೆ ಅಮಾಯಕರು ಕೂಡ**
**ಸಾಕಿನ್ನು ಸ್ವಚ್ಛಂದ ಕಾಮ ಬೇಕೀಗ ಸುರಕ್ಷೆ ನೇಮ**
**ತಿಳುವಳಿಕೆಯೊಂದೆ ದಾರಿ ಏಡ್ಸ್‌ಗೆ ಹಾಕಲು ಪೂರ್ಣ ವಿರಾಮ!**

*(ಇದು ಬಿ. ಆರ್. ಲಕ್ಷ್ಮಣರಾವ್ ಅವರ ಹಾಡು)*

**ಡಾ|| ಕೆ. ವೈ. ನಾರಾಯಣಸ್ವಾಮಿ**
ಕನ್ನಡ ಅಧ್ಯಾಪಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಚಿಂತಾಮಣಿ, ಕೋಲಾರ ಜಿಲ್ಲೆ.

# ಹಂಪಿ ಶಿವಾನಂದ ಆಶ್ರಮದ ಸದಾಶಿವಯೋಗಿ

*ಕಳೆದ ಅಕ್ಟೋಬರ್ ೨೮ರಂದು 'ಹೊಸತು' ಪರವಾಗಿ ಲೇಖಕರಾದ ಶ್ರೀ ವೆಂಕಟಯ್ಯ ಅಪ್ಪಗೆರೆ ಅವರು ಶ್ರೀ ಸದಾಶಿವಯೋಗಿಗಳನ್ನು ಆಶ್ರಮದಲ್ಲಿ ಸಂದರ್ಶಿಸಿದರು. ಅವರ ಕಿರು ಪರಿಚಯವನ್ನು ನೀಡಿ ಲೇಖಕರು ಸಂದರ್ಶನದ ಕೆಲವು ಭಾಗಗಳನ್ನು ಇಲ್ಲಿ ಪ್ರಸ್ತುತಪಡಿಸಿದ್ದಾರೆ.*

### ಸದಾಶಿವಯೋಗಿವರ್ಯರ ಕಿರುಪರಿಚಯ

ಅರವತ್ತಾರು ವರ್ಷಗಳ ಜ್ಞಾನವೃದ್ಧರಾದ ಸದಾಶಿವರು ಪೂರ್ವಾಶ್ರಮದಲ್ಲಿ ತುಮಕೂರು ಜಿಲ್ಲೆಯ ಗುಬ್ಬಿ ಕ್ಷೇತ್ರಕ್ಕೆ ಸೇರಿದವರು.

ಪರಮ ಶಿವಭಕ್ತ ಮಾರ್ಕಂಡೇಯನಂತಾಗಬೇಕೆಂದು ವಿವಾಹಕ್ಕೆ ವಿಮುಕ್ತರಾಗಿ ತಮ್ಮ ಇಪ್ಪತ್ತನೆಯ ವಯಸ್ಸಿನಲ್ಲಿ ಕದಳಿವನದಲ್ಲಿ ತಪಸ್ಸುಗೈಯಲು ಶ್ರೀಶೈಲಕ್ಕೆ ತೆರಳಿದರು. ನಂತರ ಹಿಮಾಲಯ, ವಾರಣಾಸಿ, ಕಲ್ಕತ್ತಾ, ಮಹಾರಾಷ್ಟ್ರ, ಗುಜರಾತ್, ಕಾಶಿ ವಿಶ್ವವಿದ್ಯಾಲಯಗಳಲ್ಲಿ ತಿರುಗಾಟ. ಸ್ವಾಮಿ, ಬಾಬಾ, ಯೋಗಿ ಮತ್ತು ಸಾಧುಸಂತರ ಒಡನಾಟ. ಸತ್ಯಾನ್ವೇಷಣೆಯ ನಿರಂತರ ಹುಡುಕಾಟ. ದೀರ್ಘಾನುಭವದಲ್ಲಿ ಸಾಧಕನಾದದ್ದು ವಾಸ್ತವವಾದಿಯಾಗಿ.

ಅವರ ಈ ಅನ್ವೇಷಣ ಕಥನ ಅತ್ಯಂತ ರೋಮಾಂಚಕಾರಿ. ಅಘೋರಿಗಳ ಕೈಗೆ ಸಿಕ್ಕಿ, ಹಿಮದ ಪ್ರಪಾತಕ್ಕೆ ಸಿಲುಕಿ, ನದಿಯ ನಡುನೀರಿನಲ್ಲಿ ನಿಂತು ಪ್ರೇತವಶದ ವಿಧಿಯಲ್ಲಿ ತನ್ನನ್ನೇ ಬಲಿ ತೆಗೆಯುವರೆಂದು ತಿಳಿದು ಮಂತ್ರವಾದಿಯ ಕಣ್ಣಿಗೆ ಹರಿಷಿಣ - ಕುಂಕುಮ ಎರಚಿ ಪರಾರಿಯಾದ ಅನೇಕ ಮೈನವಿರೇಳುವ ಅನುಭವಗಳು. ಕೊನೆಗೂ ಸಿದ್ಧಿಸಿದ್ದು ಸೊನ್ನೆ. ನಿಸರ್ಗದ ಉತ್ಪನ್ನವಾದ ಮಾನವ ಜೀವಿ ಶರೀರಧರ್ಮವನ್ನು ಬಿಡಲಾರ, ಬಿಡಲಾಗದು. ಬಿಡಬೇಕೆನ್ನುವ ಸಿದ್ಧಾಂತ ಜನವಿರೋಧಿಯಾಗುತ್ತದೆ. ಯಾವ 'ಸಾಧಕ'ನೆನಿಸಿಕೊಂಡವನೂ ಶರೀರಧರ್ಮದ ಹಸಿವನ್ನು ಜಯಿಸಲಾರ. ಸಿದ್ಧಿ - ಸಾಧನೆ ಇವೆಲ್ಲಾ ಢೋಂಗಿ ಎನ್ನುತ್ತಾರೆ. ಅಮಾಯಕರಿಗೆ ದೈವದ ಅಮಲು ಏರಿಸಿ ಸ್ವಾರ್ಥ, ವಂಚನೆ. ಪವಾಡವೆಂಬುದು ಮೋಸದಾಟ. ಇವುಗಳ ನಗ್ನತೆಯ ಸ್ಪಷ್ಟತೆ ತಿಳಿದು ಯಥಾರ್ಥ ಬೋಧನೆಗಾಗಿ ೨೫ ವರ್ಷಗಳ ಹಿಂದೆ ಹಂಪಿಯಲ್ಲಿ ಆಶ್ರಮ ಸ್ಥಾಪನೆ ಮಾಡಿದರು. ಈಗ ಗಿಡಮೂಲಿಕೆಗಳಿಂದ ತಯಾರಿಸಿದ ಔಷಧಿ ನೀಡುವಿಕೆ, ವೈಭವೀಕರಣವಿಲ್ಲದ ವಾಸ್ತವ ಯೋಗ ತರಗತಿಗಳು ; ಅಯಸ್ಕಾಂತ ಚಿಕಿತ್ಸಾ ವಿಧಾನ ತಿಳುವಳಿಕೆ; ವಾಸ್ತವವಾದ ಪ್ರಸಾರ ಮತ್ತು ಮನೋಮಂಡಲದ ವೈಜ್ಞಾನಿಕ ವಿಶ್ಲೇಷಣೆ; ಜೊತೆಗೆ ವೈಚಾರಿಕ ಕೃತಿ ರಚನೆಯಲ್ಲಿ ತೊಡಗಿದ್ದಾರೆ. ವಿದೇಶ ಪ್ರಯಾಣಗಳಲ್ಲಿಯೂ ತಮ್ಮ ವಿಚಾರವನ್ನು ಹಂಚಿಕೊಂಡಿರುವ ಇವರು ತಮ್ಮ ವಾದಕ್ಕೆ ವೈಜ್ಞಾನಿಕ ಸಮರ್ಥನೆಯನ್ನು ಪರಿಣಾಮಕಾರಿಯಾಗಿ ನೀಡುವರು.

ಸುಮಾರು ಆರು ತಿಂಗಳ ಕಾಲ ವಿರುಪಾಕ್ಷ ದೇವಸ್ಥಾನದ ಎದುರು ಯಾರಿಗೂ ಕೈಯೊಡ್ಡದೆ ಭಕ್ತಾದಿಗಳು ತಿಂದು ಎಸೆದ ಬಾಳೆಹಣ್ಣಿನ ಸಿಪ್ಪೆ ಸಂಗ್ರಹಿಸಿ ತಿಂದು ಜೊತೆಗೆ ಗರಿಕೆ ಹುಲ್ಲು ತಿಂದು ಹಸಿವು ನೀಗಿಸಿಕೊಂಡು ಆಶ್ರಮ ಕಟ್ಟಿದ್ದಾರೆ. ಪ್ರಖಂಡ ವಿಚಾರವಾದದಿಂದ ಕೂಡಿದ 'ಭಾರತೀಯರಿಗೆ ಭಗವಂತರೆಷ್ಟು ? 'ಜ್ಞಾನಿ ಯಾರು' ಎಂಬ ಕೃತಿಗಳನ್ನು ಈಗಾಗಲೇ ರಚಿಸಿದ್ದು, 'ಜಗತ್ ಪ್ರಾಣಶಕ್ತಿ' ಮತ್ತು 'ಸಿದ್ಧಾನುಭವ' ಮುಂತಾದ ಕೃತಿಗಳ ರಚನೆಯಲ್ಲಿ ತೊಡಗಿದ್ದಾರೆ ತರ್ಕಬದ್ಧ ಆಲೋಚನೆಯ ಅಪರೂಪದ ಸ್ವಾಮೀಜಿಗಳು. ಅದಕ್ಕೆಂದೇ ಅವರೊಂದಿಗಿನ ಈ ವಿಶೇಷ ಸಂದರ್ಶನವನ್ನು ವಾಚಕರಿಗೆ ನೀಡುತ್ತಿದ್ದೇನೆ.

**ಸಂದರ್ಶಕರು** : ಇಲ್ಲದ ದೇವರಿಗೆ ಸಲ್ಲದ ಪೂಜೆ, ಎಂಬ ನಿಮ್ಮ ವಿಚಾರವನ್ನು ಒಪ್ಪದ ಆಸ್ತಿಕರು ಪೂಜೆ ಎಂಬುದು ಪಂಚೇಂದ್ರಿಯಗಳ ಸಂಗಮಕ್ರಿಯೆ, ಎಂದು ವಾದಿಸುತ್ತಾರೆ. ಇದಕ್ಕೆ ನಿಮ್ಮ ಪ್ರತಿಕ್ರಿಯೆ ಏನು ?

**ಸ್ವಾಮೀಜಿ** : ಪೂಜೆ ಎಂಬ ಕ್ರಿಯೆಯಲ್ಲಿ ಭಾವಪೂರ್ಣವಾದ ತನ್ಮಯತೆ, ಅರ್ಪಣಭಾವ ಉಂಟಾಗುವುದು ಮನಸ್ಸಿನ ಚಿತ್ತವಿಕಾರಕ್ಕೆ ತುಸು ಗಳಿಗೆಯ ವಿರಾಮ. ಸಮಾಧಾನ. ಇದು ಭೌತಿಕ ಫಲಶ್ರುತಿ ಪೂಜೆಯಿಂದ.

ಆಧ್ಯಾತ್ಮಿಕವಾಗಿ ಪ್ರದಕ್ಷಿಣೆ, ಆರತಿ ಬೆಳಗುವುದು ಇವು ನಮ್ಮ ಆಕಾಶಕಾಯಗಳ ಸುತ್ತುವಿಕೆಯನ್ನು ಸಂಕೇತಿಸುವುದು. ವಿಶ್ವಪರ್ಯಟನೆಯ ಅಭಿಲಾಷೆಯನ್ನು ಸೂಚಿಸುವುದು.

ಆದರೆ ಫಲಾಪೇಕ್ಷೆ, ಇಷ್ಟಾರ್ಥಗಳ ಈಡೇರಿಕೆ ಇವೆಲ್ಲ ಶುದ್ಧ ಸುಳ್ಳು. ಅಮಾಯಕ ಮನಸ್ಸುಗಳನ್ನು ದೈವದ ಅಮಲಿಗೆ ಒಳಪಡಿಸಿ ಮಾಡುವ ವಂಚನೆ. 'ದೇವರಿಗೆ ಸಲ್ಲುವುದು' ಎಂಬ ಮಾತೆಲ್ಲಾ ಭ್ರಮೆ. ಮೌಢ್ಯದ ಬೆಳವಣಿಗೆ. ಪೂಜಾರಿ ಮೂಲಕ ಮಾಡಿಸುವ ಪೂಜೆಯ ಫಲ ಪೂಜಾರಿಗೆ ದೊರೆಯಬೇಕಲ್ಲದೆ, ಅದು ಭಕ್ತನಿಗೆ ಹೇಗೆ ರವಾನಿಸುವುದು ? ಭಕ್ತ ದೇವನ ಮಧ್ಯೆಯ ವ್ಯವಹಾರಕ್ಕೆ 'ಏಜೆಂಟ್'ನ ಅವಶ್ಯಕತೆ ಏಕೆ ? ಇದೇನು ವ್ಯಾಪಾರ ದಂಧೆಯೆ ? ದೇವರು ಕೊಟ್ಟ ವರವನ್ನು ಪೂಜಾರಿ ಭಕ್ತನಿಗೆ ಎಂಡಾರ್ಸ್ ಮಾಡಲು ಅದೇನು 'ಪ್ರೋನೋಟ್'ನ ವ್ಯವಹಾರವೆ ?

ಪಂಚೇಂದ್ರಿಯಗಳ ಸಂಗಮಕ್ರಿಯೆ ಪೂಜೆಗಿಂತಲೂ ಮಿಗಿಲಾಗಿ 'ಪ್ರಕೃತಿ-ಪುರುಷ'ರ ಸಮ್ಮಿಲನದ ಸಮಾಗಮದಲ್ಲಿ ಗರಿಷ್ಠ ಪ್ರಮಾಣದಲ್ಲಿ ಜರುಗುವುದು. ವ್ಯಾಕುಲ ಮನಸ್ಸಿನ ಶಾಂತಿಗೆ ಮತ್ತು ಏಕಾಗ್ರತೆಗೆ ಪೂಜೆಗಿಂತ ಪ್ರಾರ್ಥನೆ ಮೇಲು ಎಂಬುದು ನನ್ನ ಅಭಿಪ್ರಾಯ. ಆದರೆ ಆ ಎರಡೂ ಕ್ರಿಯಾವಿಧಾನಗಳು ದೇವರಿಗೆ ಸಲ್ಲುವುದು ಎಂಬ ವಿಶ್ವಾಸ ನನಗಿಲ್ಲ. ಈ ಬಗ್ಗೆ ಅನೇಕ ಆಧ್ಯಾತ್ಮಿಕರ ವಿಚಾರಗಳನ್ನು ಉದಾಹರಿಸಬಲ್ಲೆ. ಇನ್ನು ಮನೆಯಲ್ಲೇ ದೇವರಿಟ್ಟು ಪೂಜಿಸುವರ ಬಗ್ಗೆ, ನಮ್ಮ ಸರ್ವಜ್ಞನಂತೆ ಜನಪರ ಯೋಗಿವರ್ಯರಾದ ವೇಮನರು ಹೇಳಿರುವಂತೆ :

ವೆಂಕಟಯ್ಯ ಅಪ್ಪಗೆರೆ



*ಶ್ರೀ ಸದಾಶಿವಯೋಗಿಗಳೊಡನೆ ಲೇಖಕ ಶ್ರೀ ವೆಂಕಟಯ್ಯ ಅಪ್ಪಗೆರೆ (ಇಲ್ಲೂ ಡಾಲರ್ ಭರಾಟೆಯೇ ಎಂದು ಹುಬ್ಬೇರಿಸಬೇಡಿ)*

*ಇಂಟ ದೈವಾನಿಕಂಟೆ ಚಂಟ ಕುಕ್ಕ ತಾ ಮೇಲು.*

(ಮನೆಯಲ್ಲಿ ದೇವರಿಟ್ಟು ಪೂಜಿಸುವುದಕ್ಕಿಂತಲೂ ಸಣ್ಣ ನಾಯಿಮರಿ ಇಟ್ಟು ಸಾಕುವುದು ಉಪಯೋಗಕರ)

ದಾರಿ ಅರಿಯದೆ ಊರು ತಲುಪಲು ಸಾಧ್ಯವಿಲ್ಲ, ರೋಗ ಅರಿಯದೆ ಔಷಧಿ ಕೊಡಲು ಸಾಧ್ಯವಿಲ್ಲ, ಕಾರಣ ಅರಿಯದೆ ಕಾರ್ಯ ಸಾಧಿಸಲು ಸಾಧ್ಯವಿಲ್ಲ, ವ್ಯಕ್ತಿ ಅರಿಯದೇ ವ್ಯವಹರಿಸಲು ಸಾಧ್ಯವಿಲ್ಲ. ಹಾಗೆಯೇ, ದೇವರನ್ನು ಅರಿಯದೆ ಪೂಜಿಸಲು ಸಾಧ್ಯವಿಲ್ಲ.

**ಸಂ** : ಪೆರಿಯಾರ್‌ರವರು 'ಭರತಖಂಡದ ಸಕಲ ಸಮಸ್ಯೆಗಳಿಗೆ ವೈಚಾರಿಕ ಅಭಾವವೇ ಕಾರಣ'ವೆನ್ನುತ್ತಾರೆ. ಎಷ್ಟರಮಟ್ಟಿಗೆ ಇದು ಸತ್ಯ ?

**ಸ್ವಾಮಿ** : ಇದನ್ನು ಒಪ್ಪುತ್ತೇನೆ. ತರ್ಕವಿಲ್ಲದೆ ಸತ್ಯವಿಲ್ಲ. ಗುಡ್ಡದ ಮೇಲೊಂದು ತೊಟ್ಟಿಯ ಕಟ್ಟಿದರೆ ಮಳೆ ನೀರನ್ನು ಸಂಗ್ರಹಿಸಿ ಹತ್ತಾರು ಎಕರೆ ಭೂಮಿಗೆ ನೀರುಣಿಸಿ ಆಹಾರ ಧಾನ್ಯ ಬೆಳೆಯಬಹುದು. ಅದು ಬಿಟ್ಟು ಗುಡ್ಡದ ಮೇಲೆ ಗುಡಿಯನೊಂದು ಕಟ್ಟಿದರೆ ಅದು ನಿರರ್ಥಕ. ಅದೇ ರೀತಿ ಕೆರೆ - ಕಟ್ಟೆ, ಜಲಾಶಯಗಳನ್ನು ಕಟ್ಟುವುದರಿಂದ ಕೃಷಿ ಆಧಾರಿತ ಅಭಿವೃದ್ಧಿಶೀಲ ರಾಷ್ಟ್ರವಾದ ನಮ್ಮ ದೇಶ ಅಭಿವೃದ್ಧಿ ಹೊಂದುತ್ತದೆ. ಬಡತನ ನೀಗುತ್ತದೆ. ಅದಕ್ಕೆಂದೇ ಪೆರಿಯಾರ್‌ರವರು ಜಲಾಶಯಗಳನ್ನು ಅನ್ನದೇಗುಲಗಳೆಂದರು. ಭಾಕ್ರಾ ನಂಗಲ್ ಜಲಾಶಯದ ಉದ್ಘಾಟನೆಯನ್ನು ಮಾಡುತ್ತಾ ಪಂಡಿತ ಜವಹರ್‌ಲಾಲ್ ನೆಹರೂರವರು ನಿಜದ ಗುಡಿಯನೊಂದನ್ನು ದೇಶಕ್ಕೆ ಅರ್ಪಿಸುತ್ತಿರುವೆ; ಜನಕ್ಕೆ ಅನ್ನ ನೀಡುವ ಈ ಜಲಾಶಯದಲ್ಲಿ ದೇವರು ಸಾಕ್ಷಾತ್ಕಾರವಾಗಿದ್ದಾನೆ ಎಂದರು. ಸಾವಿರಾರು ವರ್ಷಗಳಿಂದ ದೇವರ ಮೂರ್ತಿಗಳ ಮೇಲೆ ಹೊದಿಸಿರುವ ರತ್ನಖಚಿತ ವಜ್ರವೈಢೂರ್ಯಗಳು, ಗುಡಿಯ ಗೋಪುರದ ಕಳಶಗಳಿಗೆ ತೊಡಿಸಿರುವ ಚಿನ್ನದ ಪ್ರಮಾಣ ಇವೆಲ್ಲಾ ನಿಷ್ಫಲ ಆಸ್ತಿ ಅಥವಾ ಅನುತ್ಪಾದಕ ಬಂಡವಾಳ ಎಂದ ಪೆರಿಯಾರ್‌ರ ವಿಚಾರವನ್ನು ನಾನು ಒಪ್ಪುತ್ತೇನೆ. ಅವುಗಳನ್ನು ಜನಸೇವೆಗೆ ವಿನಿಯೋಗಿಸಿದಾಗ ಒಂದು ಆಧ್ಯಾತ್ಮಿಕ ಅರ್ಥ ಬರುತ್ತದೆ. ದೇಶದ ಅರ್ಥವ್ಯವಸ್ಥೆಗೆ ಅನುಕೂಲವಾಗುತ್ತದೆ.

**ಸಂ** : ಧರ್ಮಶಾಸ್ತ್ರವು ಅನುಕೂಲಶಾಸ್ತ್ರವೆನ್ನುವ ನಿಮಗೆ ಅದು ಮಾನವಧರ್ಮ ಪ್ರಸಾರಕವೂ ಹೌದು ಎನ್ನಿಸದೆ ?

**ಸ್ವಾಮಿ** : ಧರ್ಮ ಸಂರಕ್ಷರು, ಧರ್ಮ ಸುಧಾರಕರು ಎನ್ನುವವರಿಗೆ ನಾನು ಹೇಳುವುದಿಷ್ಟೆ : ನಮಗೆ ಸುಧಾರಕರು ಬೇಕಿಲ್ಲ, ಸುಧಾರಿಸಿದವರು ಬೇಕು. ಆಚಾರ್ಯರಿಗಿಂತ ಆಚರಣೆಗಾರರು ಮುಖ್ಯ. ಪಠಣಕಾರರು ಅಥವಾ ಪ್ರವಚನಕಾರರಿಗಿಂತ ಫ್ಯಾಕ್ಟರಿ ವರ್ಕರ್ಸ್ ಮುಖ್ಯ. ದೇಶದ ಉತ್ಪನ್ನ ತಯಾರಕರಿಗೆ ಹೆಚ್ಚಿನ ಪ್ರಾಮುಖ್ಯತೆ ದೊರೆಯಬೇಕು. ಧರ್ಮದ ಹೆಸರಿನಲ್ಲಿ ದೇಶದ ಉತ್ಪನ್ನಗಳನ್ನು ಅಪವ್ಯಯ ಮಾಡುವವರು ದೇಶದ್ರೋಹಿಗಳು. ಜನವಿರೋಧಿಗಳು. ಮಾನವಧರ್ಮ ಬಾಹಿರರು. ಧರ್ಮಪಾಲನೆಯೆಂದು ಯಾಗ ಹೋಮಗಳಲ್ಲಿ ನಿತ್ಯೋಪಯೋಗಿ ವಸ್ತುಗಳನ್ನು, ದೇಶದ ಆಸ್ತಿಯಾದ ಚಲಾವಣೆ ನೋಟು - ನಾಣ್ಯಗಳನ್ನು



ಸುಡುವುದು, ದೇಶದ ಉತ್ಪನ್ನಗಳಾದ ತೈಲ, ಬೆಣ್ಣೆ, ತುಪ್ಪ, ಹಾಲು ಇತ್ಯಾದಿಗಳನ್ನು ಸುರಿದು ಅಪವ್ಯಯ ಮಾಡುವುದನ್ನು ಮತ್ತು ಕೃಷಿ ಉತ್ಪನ್ನವಾದ ಬೂದುಗುಂಬಳಕಾಯಿ, ನಿಂಬೆಹಣ್ಣುಗಳನ್ನು ಒಡೆದು ಮಣ್ಣುಪಾಲು ಮಾಡುವುದನ್ನು ಉಗ್ರವಾಗಿ ಖಂಡಿಸುತ್ತೇನೆ. ನಾನು ಪ್ರಾರಂಭದಿಂದಲೂ ಪಾದಪೂಜೆ, ಪಲ್ಲಕ್ಕಿ ಉತ್ಸವಗಳ ಕಡು ವಿರೋಧಿ. ಇವೆಲ್ಲವೂ ಅಮಾನವೀಯ ಕ್ರಿಯೆಗಳು. ಈ ಸಂದರ್ಭದಲ್ಲಿ ಪ್ರಭುದೇವರ ವಿಮರ್ಶೆ ನನಗೆ ನೆನಪಾಗುತ್ತದೆ. ''ಶಾಸ್ತ್ರವೆಂಬುದು ಸಂತೆಯ ಸುದ್ದಿ. ವೇದವೆಂಬುದು ಓದಿನ ಮಾತು. ಪುರಾಣವೆಂಬುದು ಪುಂಡರ ಗೋಷ್ಠಿ.''

ಧರ್ಮಶಾಸ್ತ್ರವು ಸ್ವಾರ್ಥಿಗಳಿಂದ ಅನುಕೂಲ ಶಾಸ್ತ್ರವಾಗಿ ಬುಡಬುಡಿಕೆ ಶಾಸ್ತ್ರದಂತೆ; ಅಂದರೆ, ಅದು ಶಬ್ದ ಮಾಡುವುದೇ ಒಂದಾದರೆ ಇವನು ಅದನ್ನು ತರ್ಜುಮೆ ಮಾಡಿ ಹೇಳುವುದೇ ಬೇರೆ. ಈ ವಿಧ ಪ್ರಸಾರವಾಗುವ ಅಸತ್ಯದ ಕಳೆಯನ್ನು ಕಿತ್ತುಹಾಕಿ ಜನತೆಗೆ ಯಥಾರ್ಥ ಸತ್ಯವನ್ನು ಬೋಧಿಸಬೇಕಾಗಿದೆ.

**ಸಂ** : ಬ್ರಹ್ಮಚರ್ಯೆ ಜೀವವಿಕಾಸ ಪ್ರಕ್ರಿಯೆಯ ವಿರೋಧವಲ್ಲವೆ ?

**ಸ್ವಾಮಿ** : 'ಸೆಲಿಬೆಸಿ' ಎಂಬುದೊಂದು ಹುಚ್ಚು. ಅದು ಕೇವಲ ಪಲಾಯನವಾದವಲ್ಲ, ಅದೊಂದು ವಿಲಕ್ಷಣ ಮನೋಭಾವ. ಬ್ರಹ್ಮಚರ್ಯೆಯನ್ನು ನಾನು ಭ್ರಮೆ ಚರ್ಯೆ ಎನ್ನುತ್ತೇನೆ. ಒಂದಾಗಿ ಉಳಿಯುವುದು ಕಾಮ. ಎರಡಾಗಿ ಬಾಳುವುದು ಸಮಾಗಮ. ಪ್ರಕೃತಿ ಅಂಶವಾದ ಪ್ರತಿ ಜೀವಿ, ಅದೇ ಪ್ರಕೃತಿಯ ಪ್ರಕ್ರಿಯೆಯ ವಿರೋಧವಾಗುವುದು ವ್ಯತಿರಿಕ್ತ ಜೀವನಕ್ಕೆ ಮೂಲ. ಅದು ವಿಕೃತ ಜೀವನ. ನಿಗ್ರಹದಿಂದ ನಿರ್ವಾಣವೆಂಬುದು ಬರೀ ಭ್ರಾಮಕತೆ. ನಿಸರ್ಗ ಜೀವನದಿಂದ ನಿರ್ವಾಣ ಸಹಜ. ಯೋಗಕ್ಕೆ ಭೋಗವೇ ಆಧಾರ.

ಆದ್ದರಿಂದ ಕಟ್ಟಾ ಬ್ರಹ್ಮಚಾರಿಗಳೂ ಸಹ ಇತರರಿಗೆ ಬ್ರಹ್ಮಚರ್ಯೆ ಅನುಸರಿಸಲು ಬೋಧಿಸರು. ಕಾರಣಾಂತರಗಳಿಂದ ಬ್ರಹ್ಮಚಾರಿಗಳಾದ ನಮ್ಮ ಪರಿಪಾಟಲು ಇತರರಿಗೆ ಬೇಡವೆನ್ನುತ್ತಾರೆ. ಅರವತ್ತು ಸಂವತ್ಸರ ಜನನ ವೃತ್ತಾಂತದಿಂದ ಆಜನ್ಮ ಬ್ರಹ್ಮಚಾರಿಯಾದ ನಾರದರಿಗೂ ಬ್ರಹ್ಮಚರ್ಯೆ ಮುರಿಯಬೇಕಾಯಿತು. ಆದಿ ಶಂಕರಾಚಾರ್ಯರೂ ಸಹ ಬ್ರಹ್ಮಚರ್ಯೆಯಿಂದ ಬೇಸತ್ತು ಕಾಶಿರಾಜನ ವಿಧವೆ ರಾಣಿಯೊಂದಿಗಿನ ಸಮಾಗಮದ ಅನುಭವ ಪಡೆಯಬೇಕಾಯಿತು: ಪರಕಾಯ ಪ್ರವೇಶದ ವಿವರಣೆ ಏನೇ ಇರಲಿ. ಅದೇ ರೀತಿ ನಮ್ಮ ಆದರ್ಶವೆನ್ನುವ ಯಾವ ದೇವಾನುದೇವತೆಗಳೂ ಬ್ರಹ್ಮಚಾರಿಗಳಾಗಿಲ್ಲ. ನಿಸರ್ಗ ನಿಯಮದಲ್ಲಿ ಅದಕ್ಕೆ ಅವಕಾಶವಿಲ್ಲ: ಅಂಗವೈಫಲ್ಯದ ಅನಿವಾರ್ಯ ಪ್ರಸಂಗಗಳ ಹೊರತಾಗಿ.

ಇಲ್ಲಿ ಜನಪರವಾದ ನುಡಿಗಟ್ಟೊಂದು ನೆನಪಾಗುತ್ತದೆ.

*'ಶಿಲೆಗಳ್ ಮೇಲಿರ್ಪ ಭೋಗಿಗಳುಂಟು*

*ಮೊಲೆಗಳ್ ಮೇಲಿರ್ಪ ಯೋಗಿಗಳುಂಟು.*

ವಿಜಯನಗರ ಕಾಲದ ರಸಿಕತೆ ಉತ್ತುಂಗ ಸ್ತರದಲ್ಲಿತ್ತು. ಅಂದಿನ ಜನಮಾನಸದಲ್ಲಿ ರಸಿಕತೆಗೆಷ್ಟು ಪ್ರಾಮುಖ್ಯತೆ ನೀಡುತ್ತಿದ್ದರೋ ಅಷ್ಟೇ ಪ್ರಾಮುಖ್ಯತೆ ವಯೋಧರ್ಮಕ್ಕೆ ತಕ್ಕಂತೆ ವಾನಪ್ರಸ್ಥ, ಸಂಗ ಪರಿತ್ಯಾಗ ಮುಂತಾದ ಯೋಗ ನಿಷ್ಠೆಗಳಿಗೂ ನೀಡುತ್ತಿದ್ದರು. ಅಂದರೆ ಬ್ರಹ್ಮಚರ್ಯೆ ಯೋಗಕ್ಕೆ ಕಡ್ಡಾಯವಿರಬೇಕಿಲ್ಲ.

**ಸಂ** : ನಿಮ್ಮ ಅನ್ವೇಷಣೆ ಹಾಗೂ ತಿರುಗಾಟದ ಹಿನ್ನೆಲೆ ನೋಡಿದರೆ ಮಿಥ್ಯವನ್ನೇ ಸತ್ಯವೆಂದು ಗಾಢವಾಗಿ ನಂಬಬೇಕಾದವರು ನೀವು. ಆದರೆ ಈ ವೈಚಾರಿಕತೆ ಅಥವಾ ಯಥಾರ್ಥದ ಪ್ರತಿಪಾದನೆ ನಿಮ್ಮಲ್ಲಿ ಹೇಗೆ ಉಂಟಾಯಿತು ?

**ಸ್ವಾಮಿ** : ನಾನು ಚಿಕ್ಕಂದಿನಿಂದಲೂ ಪ್ರಶ್ನಿಸಮಾಡುವ ಮನೋಭಾವವನ್ನು ಬೆಳೆಸಿಕೊಂಡಿದ್ದೆ. ಅತಾರ್ಕಿಕ ಎನ್ನುವ ವಿಷಯವನ್ನು ನೇರವಾಗಿ ಪ್ರಶ್ನಿಸುತ್ತಿದ್ದೆ. ಸಮಾಧಾನಕರ ಉತ್ತರ ದೊರೆಯದಿಲ್ಲವೆಂದರೆ ಅವನ್ನು ಒಪ್ಪುತ್ತಿರಲಿಲ್ಲ. ಪ್ರಾಥಮಿಕ ಶಾಲಾಭ್ಯಾಸದಲ್ಲೇ ಭೂಮಿ ಗುಂಡಾಗಿರುವ ಮತ್ತು ಸುತ್ತುತ್ತಿರುವ ಬಗ್ಗೆ; ರಾಮನು ತ್ರಿಕಾಲದರ್ಶಿಯಾಗಿದ್ದರೂ ಸೀತೆಯನ್ನು ಹುಡುಕಲು ಕಾಡು-ಮೇಡು ಅಲೆದನು ಏಕೆ; ಅಮೂಲ್ಯವಾದ ರಾಮಬಾಣವಿದ್ದರೂ ವಾನರ ಸೈನ್ಯದ ನೆರವನ್ನು ಪಡೆದನು ಏಕೆ; ಈ ರೀತಿ ಪ್ರಶ್ನೆ ಮಾಡಿ ಬೇರೆಯವರ ನಿಂದನೆಗೆ ಒಳಗಾಗುತ್ತಿದ್ದೆ. ನನ್ನ ಸಂದೇಹಾತ್ಮಕ ಪ್ರಶ್ನೆಗಳಿಗೆ ಸಮಂಜಸ ಉತ್ತರ ನೀಡಲಾರದವರು 'ತರ್ಕವಾದಿ', 'ವಿತಂಡವಾದಿ' ಎಂದು ನನ್ನನ್ನು ಜರಿಯುತ್ತಿದ್ದರು.

ಯಥಾರ್ಥ ಸತ್ಯ ಮುಖ್ಯ. ಇಲ್ಲವಾದರೆ ನಾಲ್ಕು ಜನ ಕುರುಡರು ಸೇರಿ ಆನೆಯನ್ನು ಮುಟ್ಟಿ ಬಗೆ ಬಗೆಯಾಗಿ ವರ್ಣಿಸುವಂತಾಗಿ ಅಸಲಿತನ ಬಿಟ್ಟುಹೋಗುತ್ತದೆ. ನಮ್ಮಲ್ಲಿ ಗೋಚರವಾಗಿರುವುದನ್ನು ಬಿಟ್ಟು, ಅಗೋಚರ-ಅತಾರ್ಕಿಕ ವಿಷಯದ ಬಗ್ಗೆ ತಲೆಕೆಡಿಸಿಕೊಳ್ಳುವವರ ಸಂಖ್ಯೆ ಹೆಚ್ಚು. ''ಕಂಡು ಬೊಗಳುವ ನಾಯಿ ಒಂದಾದರೆ, ಕಾಣದೆ ಬೊಗಳುವ ನಾಯಿಗಳು ಅನೇಕ''. ಭಾರತೀಯರ ಮತ್ತೊಂದು ದೌರ್ಬಲ್ಯವೆಂದರೆ ಯಾವುದೇ

ವಿಷಯವನ್ನು ದೈವೀಕರಿಸುವುದು ಇಲ್ಲವೆ ವೈಭವೀಕರಿಸುವುದು. ಕಲ್ಲಿಗೂ ಕತೆ ಕಟ್ಟುವುದು.

೧೯೫೮ರಲ್ಲಿ ಕಾಶಿ ವಿಶ್ವವಿದ್ಯಾಲಯದ ಜಂಗಮವಾಡಿಯಲ್ಲಿ ವಿದ್ವಾನ್ ಕರಿಬಸವಶಾಸ್ತ್ರಿಗಳ ಬಳಿ ಜ್ಯೋತಿಶ್ಶಾಸ್ತ್ರ ಕಲಿಯಲು ಹೋಗಿ, ಪಂಚಾಂಗ- ರಾಶಿಗಳ ನಿರ್ಣಯವನ್ನು ಅತಾರ್ಕಿಕವೆಂದು ಕಂಡು ಶಿಷ್ಯವೃತ್ತಿಯನ್ನು ಬಿಟ್ಟೆ. ಕೇವಲ ಒಂಭತ್ತು ಜನ ಶಿಷ್ಯರಲ್ಲಿ, ಎಂಟು ಜನ ಶಿಷ್ಯರು ಒಂದಾದರೆ, ನಾನೊಬ್ಬನೇ ಒಂದು. ಅದಕ್ಕೆ ನನ್ನನ್ನು ತರ್ಕವಾದಿ ಎನ್ನುತ್ತಿದ್ದರು. ಒಂಭತ್ತು ಜನ ಶಿಷ್ಯರು ಏಕಕಾಲದಲ್ಲಿ ಬಿಸಿಲಿನಲ್ಲಿ ನಿಂತಾಗ, ಎಲ್ಲರ ತಲೆ ಮೇಲೆ ಸೂರ್ಯ ಏಕಸ್ಥಾನದಲ್ಲಿರುತ್ತಾನೆ. ವ್ಯಕ್ತಿಗತ ಅವರ ಹೆಸರಿನ ಮೇಲೆ ಬೇರೆ ಸ್ಥಾನದಲ್ಲಿ ಇರಲು ಹೇಗೆ ಸಾಧ್ಯ ? ಅದೇ ವ್ಯಕ್ತಿ ಬೇರೆ ಹೆಸರನ್ನು ಹೊಂದಿದರೆ ಆಗ ಸೂರ್ಯರಾಶಿ ಬೇರೆ ಆಗುವುದು ಹೇಗೆ ? ಎಂದೆಲ್ಲ ಪ್ರಶ್ನೆಗಳಿಗೆ ತರ್ಕಬದ್ಧ ಉತ್ತರ ಸಿಗದೆ ಜ್ಯೋತಿಶ್ಶಾಸ್ತ್ರದ ಅಂದಿನ ೧೨೦ ರೂಪಾಯಿಗಳ ಬೆಲೆಯ ಪುಸ್ತಕವನ್ನು ಕರ್ಪೂರ ಅಂಗಡಿಯವನಿಗೆ ಪೊಟ್ಟಣ ಕಟ್ಟಲು ಕೇವಲ ಆರೂವರೆ ರೂಪಾಯಿಗಳಿಗೆ ಮಾರಿಬಿಟ್ಟೆ. ಅದರಂತೆ ಅನೇಕ ಬಾಬ, ಸಾಧು, ಸನ್ಯಾಸಿಗಳಲ್ಲಿ ತಾರ್ಕಿಕ ಸತ್ಯ ಸಿಗದೆ, ಆತ್ಮವಂಚನೆ ಮಾಡಿಕೊಳ್ಳದೆ, ಶಿಷ್ಯವೃತ್ತಿಯನ್ನು ತೊರೆದು ಬಂದೆ. ಪ್ರತಿ ಮೂರು ತಿಂಗಳಿಗೂ ಸೂರ್ಯನ ದಿಕ್ಕು ಬದಲಾಗಿ ನಾವು ಸ್ಥಿರವಾಗಿ ನಿರ್ಧರಿಸುವ ದಿಕ್ಕುಗಳೇ ಬದಲಾಗುವಾಗ 'ವಾಸ್ತು' ನಿರ್ಣಯ ಎಷ್ಟು ಸಿಂಧು ? ಸೂರ್ಯನನ್ನು ಕೇಂದ್ರಸ್ಥಾನದಲ್ಲಿಟ್ಟು ದಿಕ್ಕು ನಿರ್ಧರಿಸುವಾಗ ಭೂಮಿ ತನ್ನ ಅಕ್ಷದ ಮೇಲೆ ಚಲಿಸುವಾಗ ದಿಕ್ಕುಗಳು ದಿಕ್ಕು ತಪ್ಪುತ್ತವೆ. ಆದ್ದರಿಂದ ವಾಸ್ತುವನ್ನು ಅತಾರ್ಕಿಕವೆಂದು ಅಲ್ಲಗಳೆಯುತ್ತೇನೆ. ಅದು ಅಮಾಯಕರನ್ನು ದಿಕ್ಕು ತಪ್ಪಿಸುವ ವಿದ್ಯೆ. ಶರೀರದ ತಲೆಭಾಗ ಗುಂಡಾಗಿದ್ದು, ಅದೇ ಸೌರಮಂಡಲ, ಗ್ರಹಮಂಡಲ, ಉಪಗ್ರಹ ಮಂಡಲವೆಂಬ ಮನೋವಿಶ್ಲೇಷಣೆ ನೀಡುತ್ತಿದ್ದೇನೆ. ಅಂದರೆ ತನ್ನ ಅರಿವು (ತ್ರಿನೇತ್ರ) ಸೂರ್ಯಕೋಟಿ ಸ್ವಯಂಪ್ರಭೆ. ಜಗತ್ ಪ್ರಾಣಶಕ್ತಿಯನ್ನು ಗುರುತ್ವಶಕ್ತಿ, ವಿದ್ಯುಚ್ಛಕ್ತಿ, ಕಾಂತಿಯ ಶಕ್ತಿ, ಶಾಖೋತ್ಪನ್ನಶಕ್ತಿ, ಇವುಗಳ ಮೂಲಕ ವೈಜ್ಞಾನಿಕವಾಗಿ ಜನಸಾಮಾನ್ಯರಿಗೆ ತಿಳಿಸಿ ಹೇಳಬಹುದು. ಅದರಲ್ಲಿ ಗೋಚರಶಕ್ತಿ, ಸುಪ್ತ ಶಕ್ತಿ, ಅಗೋಚರ ಶಕ್ತಿ, ಹೀಗೆ ವಿವರಿಸಿ ಹೇಳಬಹುದು. ನನ್ನ ಮುಂದಿನ ಪುಸ್ತಕ 'ಜಗತ್ ಪ್ರಾಣ ಶಕ್ತಿ'ಯಲ್ಲಿ ತರ್ಕಬದ್ಧವಾದ ವಿವರಣೆ ನೀಡಿ ಜನಮಾನಸಕ್ಕೆ ಸ್ಪಷ್ಟೀಕರಣ ನೀಡಲು ನಿರ್ಧರಿಸಿದ್ದೇನೆ.

**ಸಂ** : ದೇವರು ಮಾನವನ ಮಾನಸ ಸೃಷ್ಟಿ ಎಂಬುದನ್ನು ಎಷ್ಟರಮಟ್ಟಿಗೆ ಒಪ್ಪುವಿರಿ ?

**ಸ್ವಾಮಿ** : ಎಲ್ಲರೂ 'ಮನುಷ್ಯರನ್ನು ದೇವರು ಸೃಷ್ಟಿಸಿದ್ದಾನೆ' ಎಂಬ ಅಮಾಯಕ ಕಲ್ಪನೆಯಲ್ಲಿದ್ದಾರೆ. ಕೆಲವರು 'ಅಮಲು' ಕಲ್ಪನೆಯಲ್ಲಿದ್ದಾರೆ. ನಾನು ಅದನ್ನೇ 'ದೇವರನ್ನು ಮನುಷ್ಯ ಹುಟ್ಟಿಸಿದ್ದಾನೆ' ಎನ್ನುತ್ತೇನೆ. ಉತ್ಖನನ, ಪಳೆಯುಳಿಕೆ, ಶಿಲಾ ಬರಹ ಇತ್ಯಾದಿಗಳ ವಿಶ್ವಮಟ್ಟದ ಅಧ್ಯಯನದಲ್ಲಿ ದೇವರ ಇತಿಹಾಸ ಕೇವಲ ಎಂಟು ಸಾವಿರ ವರ್ಷಗಳಷ್ಟು ಮಾತ್ರ. ಆದರೆ ವಿಕಾಸವಾದದ ಅನ್ವಯ ಮಾನವನ ಉಗಮಕ್ಕೆ ಒಂದು ಕೋಟಿ ವರ್ಷಗಳ ಇತಿಹಾಸವಿದೆ. ಜಗತ್ತಿನ ಸಕಲ ಜೀವರಾಶಿಗಳಲ್ಲಿ ಮನುಷ್ಯ ಪ್ರಾಣಿಯಷ್ಟೇ ಈ ಕಲ್ಪನೆ ಹೊಂದಿರುವುದು. ವಿವಿಧ ಶಕ್ತಿಗಳ ಮೂಲ ಆಕರವನ್ನು 'ವಿಶ್ವಶಕ್ತಿ' ಎನ್ನೋಣ. ಅದರ ಪ್ರಭೇದಗಳು ಬೆಳಕು, ಚಲನೆ, ವಾಯು, ಜಲ, ವಿದ್ಯುತ್, ಮುಂತಾದ ಶಕ್ತಿಗಳ ಮೂಲಕ ಪ್ರಕಟಗೊಳ್ಳುವುವು. ಪೂಜಾ ವಿಧಾನದಿಂದ ಇಷ್ಟಾರ್ಥ ಸಾಧನೆ, ಪ್ರಸಾದದಿಂದ ಮಕ್ಕಳಾಗುವ ಭ್ರಮೆ ಇವೆಲ್ಲಾ ಮೌಢ್ಯ, ಅಮಾಯಕತೆ. ದೇವರ ಅನುಗ್ರಹದಿಂದ ಮಕ್ಕಳಾಗುವುದಾದರೆ ಏನೆಲ್ಲಾ ಪರಿಪಾಟಲು ಪಡುವ ಗಿರಿಜಾ ಕಲ್ಯಾಣದಿಂದ 'ಕುಮಾರ ಸಂಭವ'ವಾಗುವ, ಯಮ ಸಾವಿತ್ರಿಗೆ ಆಶೀರ್ವಾದ ಬಲದಿಂದ ಪುತ್ರ ಸಂತಾನ ಪ್ರಾಪ್ತಿಯನ್ನು ಅನುಗ್ರಹಿಸಬಹುದಿತ್ತು. ಆದರೆ ಸಂತಾನಕ್ಕೆ ಗಂಡನನ್ನು ಕೊಟ್ಟಾಗ ಮಾತ್ರ ಎಂಬುದು ಅಲ್ಲಿ ಪ್ರತಿಪಾದಿತವಾಗಿದೆ. ಅಂದರೆ 'ಜೈವಿಕಕ್ರಿಯೆ'ಯಿಂದ ಜೀವೋತ್ಪತ್ತಿ ಸಾಧ್ಯ. ಅದೇ 'ಸ್ವಭಾವ ಸಿದ್ಧಾಂತ'. ಅದು 'ದೈವ ಸಿದ್ಧಾಂತ'ದಿಂದಲ್ಲ.

**ಸಂ** : ದೇವರ ಮೂಲ ಕಲ್ಪನೆಯ ಉಗಮ ಎಂದು, ಹೇಗಾಯಿತು ?

**ಸ್ವಾಮಿ** : ಆದಿಮಾನವ ನಿಸರ್ಗದ ಕೆಲವು ವಿಶಿಷ್ಟ ವಿದ್ಯಮಾನಗಳನ್ನು ವಿಶ್ಲೇಷಿಸಲಾರದೆ ಅವುಗಳ ಘಟನೆಗೆ ಯಾವುದೋ ನಿಸರ್ಗಾತೀತ ಶಕ್ತಿಯಿದೆ ಎಂದು ಭಾವಿಸಿದ. ಭ್ರಮಿಸಿದ. ಉದಾ : ಪ್ರವಾಹ, ಬಿರುಗಾಳಿ, ಕಾಳ್ಗಿಚ್ಚು, ಹಗಲಿನಲ್ಲಿ ಉಂಟಾದ ಸೂರ್ಯಗ್ರಹಣ, ಜ್ವಾಲಾಮುಖಿ; ಇತ್ಯಾದಿ. ತದನಂತರದಲ್ಲಿ ಅಂಧಶ್ರದ್ಧೆ; ಕಪೋಲ ಕಲ್ಪಿತ ಕತೆಗಳು ಪುಂಖಾನುಪುಂಖವಾಗಿ ಸೃಷ್ಟಿಗೊಂಡವು. ಈಗ ಈ ಸಿದ್ಧಾಂತ ಎಷ್ಟು ಗಾಢವಾಗಿದೆ ಎಂದರೆ 'ದೈವಕಲ್ಪನೆ' ಎಂಬುದೊಂದು ಪರಿಕಲ್ಪನೆ ಎನ್ನುವವರನ್ನೇ 'ಹುಚ್ಚ'ನೆಂಬಷ್ಟು ತೀವ್ರ ನಂಬಿಕೆ ಉಂಟಾಗಿದೆ. ಇದೊಂದು 'ಸಮೂಹ ಸನ್ನಿ'. ಅದನ್ನು ಪೀಳಿಗೆಯಿಂದ ಪೀಳಿಗೆ ಹೇಗೆ ನಂಬಿದೆ ಎಂದರೆ ಅಪ್ಪನ ಶ್ರಾದ್ಧ ಮಾಡುವಾಗ ಬೆಕ್ಕು ಅಡ್ಡಪಡಿಸಬಾರದೆಂದು ಅದನ್ನು ಗೂಟಕ್ಕೆ ಕಟ್ಟಿ 'ಪಿಂಡಾರ್ಪಣೆ' ಮಾಡುವುದನ್ನು ನೋಡಿದ ಅವನ ಮಗ, ಈತ ಗತಿಸಿದ ನಂತರ ಮನೆಯಲ್ಲಿಲ್ಲದ ಬೆಕ್ಕನ್ನು ಬೇರೆ ಮನೆಯಿಂದ ಹಿಡಿದು ತಂದು ಗೂಟಕ್ಕೆ ಕಟ್ಟಿ ಶ್ರಾದ್ಧ ವಿಧಿ ಮಾಡುತ್ತಿದ್ದ. ಈ ರೀತಿ ಮಾಡುವುದನ್ನು ಈತನ ಮಗ ನೋಡಿದಾಗೊಮ್ಮೆ ಈ ಅಪ್ಪನ ಉಟ್ಟಿದ್ದ ಪಂಚೆ ಕೆಳಗೆ ಬಿದ್ದಿತ್ತು. ಅದರ ಮುಂದಿನ ವರ್ಷವೇ ಈತ ತೀರಿಕೊಂಡ. ಈತನ ಮಗ ಈ ಅಪ್ಪನ ಶ್ರಾದ್ಧ ಮಾಡುವಾಗ ಬೇರೆ ಬೆಕ್ಕನ್ನು ತಂದು ಕಟ್ಟಿ ಹಾಕಿ, ಜೊತೆಗೆ ಮಂಗಳಾರತಿ ಮಾಡುವಾಗ ಉಟ್ಟ ಪಂಚೆಯನ್ನು ಬೀಳಿಸುವ ಶ್ರದ್ಧಾಪೂರ್ವಕ ಶ್ರಾದ್ಧಾಚರಣೆ ಜಾರಿಗೆ ತಂದ. ಈ ರೀತಿ ವಿವೇಚನಾರಹಿತ ಕುರುಡು ನಂಬಿಕೆಗಳು, ಆಚರಣೆಗಳು ಮೌಢ್ಯದಿಂದ ಬೆಳೆದು ಬಂದಿವೆ. ಅದೇ ರೀತಿ 'ದೈವಕಲ್ಪನೆ'ಯೂ ರೆಕ್ಕೆ ಪುಕ್ಕಗಳು ಸೇರಿ 'ಸಿದ್ಧಾಂತ'ವಾಗಿದೆ. ಈ ಸಂದರ್ಭದಲ್ಲಿ ವಚನೋಕ್ತಿಯೊಂದನ್ನು ಉಲ್ಲೇಖಿಸುವುದು ಸೂಕ್ತವೆನಿಸುತ್ತದೆ : 'ಬಿಡೆಯೆಂದರು ಬಿಡದು ಈ ಮಾಯೆ' (ದೈವ ಮತ್ತು ದೆವ್ವದ ಮಾಯೆ).

*ಹೋಗೆಂದಡೆ ಹೋಗವು*
*ನಾಯಿಗಿಂತ ಕರಕಷ್ಟ ಕೆಲವು ದೈವಂಗಳು*
*ಹೇಸಿ ದೈವಂಗಳ ಬೇಡಿ ಬೇಡಿ*
*ನಿರರ್ಥ ಕೆಡಬೇಡ.*

**ಸಂ** : ವಿಜ್ಞಾನದ ಫಲಶ್ರುತಿಗಳ ಹೆಚ್ಚು ಪ್ರಯೋಜನ ಪಡೆದಂತೆ ಅಷ್ಟೇ ವೇಗದಲ್ಲಿ ಮೌಢ್ಯತೆಯನ್ನು ಬೆಳೆಸಿಕೊಳ್ಳುತ್ತಿರುವ ಮಾನವ ಪ್ರವೃತ್ತಿ ವಿಪರ್ಯಾಸವೆನಿಸದೆ ?

**ಸ್ವಾಮಿ** : ಅವರೆಲ್ಲಾ ಡಾಂಭಿಕ ವಿಜ್ಞಾನಿಗಳು, ಕಪಟ ವಿಜ್ಞಾನಿಗಳು. ಅಂಥವರು ವಿದ್ಯಾವಂತರಷ್ಟೆ, ವಿಜ್ಞಾನಿಗಳಲ್ಲ. ಅಕ್ಷರಸ್ಥ ಅನಾಗರಿಕರು. ವೈಜ್ಞಾನಿಕ ಸತ್ಯ ಅರಿತಿದ್ದೂ ಅವೈಜ್ಞಾನಿಕ ಆಚರಣೆಗೆ ಜೋತುಬೀಳುವ ಸೋಗಲಾಡಿಗಳು. ಭೋಳೆ ಸ್ವಭಾವದವರು. ಸತ್ಯವನ್ನು ಮರೆತು ಸಮಾಜಕ್ಕೆ ಹೆದರುವ ಹೇಡಿಗಳು. ಮನೆಯ ಲೈಟ್ ಹಾಕುವಾಗ ವಿದ್ಯುತ್ತನ್ನು ಕಂಡುಹಿಡಿದ, ಕೊನೆಗೆ ಬಲ್ಬನ್ನು ಕಂಡುಹಿಡಿದವನನ್ನು ಯಾರೂ ನೆನಪಿಸುವುದಿಲ್ಲ. ಪಂಪ್‌ಸೆಟ್ ಉದ್ಘಾಟನೆಗೆ ವಿಜ್ಞಾನಗಂಧ ಅರಿಯದ ಯಾವನೋ ಒಬ್ಬ ಸ್ವಾಮೀಜಿಯನ್ನು ಕರೆಸುವರು. ಅದನ್ನು ಕಂಡುಹಿಡಿದವನನ್ನು ಪ್ರಸ್ತಾಪಿಸುವುದೇ ಇಲ್ಲ. ಹಾಗೆಯೇ ದಿನನಿತ್ಯ ಅಡಿಗೆಮಾಡುವ ಪ್ರೆಷರ್ ಕುಕ್ಕರನ್ನು ಕಂಡುಹಿಡಿದವನನ್ನು ಜ್ಞಾಪಿಸುವುದಿಲ್ಲ.

ವಿಜ್ಞಾನದ ಅನೇಕ ವಿಸ್ಮಯ ಆವಿಷ್ಕಾರಗಳು ಪವಾಡ ಸದೃಶವಾಗಿವೆ. ಉದಾಹರಣೆಗೆ, ಹತ್ತು ಅಂಕಿಗಳನ್ನು ಒತ್ತಿ ಇಡೀ ಜಗತ್ತನ್ನೇ ಕುಳಿತಲ್ಲಿಂದ ಸಂಪರ್ಕಿಸುವ ಪವಾಡದ ಮುಂದೆ ಕೈಚಳಕದಿಂದ ಬೂದಿ 'ಸೃಷ್ಟಿಸಿ' ಜನರಿಗೆ ಮಂಕು ಬೂದಿ ಎರಚುವ ಬಾಬಾಗಳ ಪವಾಡವನ್ನು ದೈವೀಶಕ್ತಿ ಎಂದು ನಂಬುವ ಮೂಢಾತ್ಮರಿಗೆ ಏನು ಹೇಳಬೇಕು !

ಬೀದಿ ಮಾಂತ್ರಿಕ ತನ್ನ ಕೈಚಳಕದಲ್ಲಿ ನೂರು ರೂಪಾಯಿ ಸೃಷ್ಟಿಸಿದಾಗ್ಯೂ ಜನರ ಮುಂದೆ ಹತ್ತು ಪೈಸೆಗೆ ಏಕೆ ಕೈಯೊಡ್ಡುತ್ತಾನೆ ಎಂದು ವಿವೇಚಿಸುವಷ್ಟು ಜನರಿಗೆ ವೈಜ್ಞಾನಿಕ ಮನೋಭಾವವಿಲ್ಲ. ಪ್ರಶ್ನಿಸುವ ಮನೋಭಾವ ಯೋಚಿಸಬಲ್ಲ ಜೀವಿಯಾದ ಮನುಷ್ಯನಿಗೆ ಅತ್ಯಗತ್ಯ. ಆದಾಗ್ಯೂ, ವಿದ್ಯಾವಂತರು ವಿಜ್ಞಾನಿಗಳು ಮೌಢ್ಯಕ್ಕೆ ತೆಕ್ಕೆ ಬೀಳುತ್ತಾರೆ. ಅದಕ್ಕೆ ದೈವದ, ಕರ್ಮಫಲ (ಹಣೆಬರಹ)ದ ಮತ್ತು ಆಧ್ಯಾತ್ಮಿಕದ ಲೇಪ ಹಚ್ಚುತ್ತಾರೆ. ಅದಕ್ಕೆಂದೇ ಡಾ|| ಎಚ್. ನರಸಿಂಹಯ್ಯನವರು ''ಅಶಿಕ್ಷಿತ ಕಂದಾಚಾರಿಗಳಿಗಿಂತಲೂ ಶಿಕ್ಷಿತ ಕಂದಾಚಾರಿ ಬಲು ಅಪಾಯಕಾರಿ'' ಎಂದಿರುವುದು.

**ಸಂ** : ಯೋಗ-ಧ್ಯಾನಗಳ ಬಗ್ಗೆ ನಿಮ್ಮ ವಿಶ್ಲೇಷಣೆ ?

**ಸ್ವಾಮಿ** : ಎಷ್ಟೋ ಮಂದಿ ಯೋಗ-ಧ್ಯಾನ-ತಪಗಳಿಂದ ದೈವಸಾಕ್ಷಾತ್ಕಾರವೆನ್ನುತ್ತಾರೆ. ಇದು ಒಂದು ನಾಟಕೀಯ ಚರ್ಯೆ.

ನನ್ನ ದೃಷ್ಟಿಯಲ್ಲಿ ಚರಾಚರ ಸೃಷ್ಟಿಯಿಂದ ಮೊದಲ್ಗೊಂಡು ತನ್ನ ಸೃಷ್ಟಿಮೂಲದಲ್ಲೇ ಲೀನ (ಮೃತ್ಯು) ಗೊಳ್ಳುವ ಯಥಾರ್ಥಕ್ರಿಯೆಯ ಚಿಂತನೆ-ಮನನವೇ ಯೋಗ-ಧ್ಯಾನದ ಉದ್ದೇಶ. ಅಂದರೆ ಯಥಾರ್ಥತೆ (ವಾಸ್ತವ)ಯ ನೆಲೆಗಟ್ಟಿನ ಮೇಲೆ ಧ್ಯಾನ-ಯೋಗ-ತಪಗಳ ಉದ್ದೇಶಗಳನ್ನು ವ್ಯಾಖ್ಯಾನಿಸಬಹುದು. ಅದಕ್ಕೆ

*(೪೪ನೇ ಪುಟದಲ್ಲಿ)*

# ಜಗಳಗಂಟಿ

ಪ್ರೊ|| ಅ. ರಾ. ಮಿತ್ರ

ಹಿತ್ತಿಲಲ್ಲಿ ಅಪ್ಪ ಸೌದೆ ಒಡೆಯುವ ಕೆಲಸ ಮಾಡುತ್ತಿದ್ದಾರೆ. ಆ ಸೌದೆಯ ತುಂಡುಗಳಲ್ಲಿ ಒಂದು ಕೊರಡು ಏನು ಮಾಡಿದರೂ ಸೀಳಿಕೊಳ್ಳುತ್ತಿಲ್ಲ. ಅದರ ಹೆಸರೇ 'ಜಗಳಗಂಟಿ' ಸೌದೆ. ಇಂಥ ಸೌದೆ ಒಡೆಯಲು ಹೋಗಿ ಏಗಲಾರದೆ ಸಿಟ್ಟು ಬಂದು ಮನೆಯವರ ಮೇಲೆಲ್ಲ ರೇಗುವಂತಾಗುತ್ತದಲ್ಲ ಅದಕ್ಕೇ ಈ ಹೆಸರು ಬಂದಿದೆ ಎಂದು ಅಪ್ಪ ಹೇಳುತ್ತಿದ್ದರು. ಇದು ಒಂದು ಗಂಟಿನದಲ್ಲ, ಜಗಳ (ಜೋಡಿ) ಗಂಟಿನದು ಎಂದು ಈಚೆಗೆ ಯಾರೋ ಭಾಷಾಶಾಸ್ತ್ರಜ್ಞರು ಅರ್ಥ ಹೇಳಿದ್ದಾರೆ. ಅವರು ಶಬ್ದಾರ್ಥವನ್ನು ಬಿಡಿಸಿದರೇ ಹೊರತು ಆ ಸೌದೆಯ ಗಂಟುಗಳನ್ನು ಸೀಳುವ ರಹಸ್ಯವನ್ನು ಬಿಡಿಸಲಿಲ್ಲ!

ನಮ್ಮ ಸಂಸಾರಗಳಲ್ಲೂ ಈ ಬಗೆಯ ಜಗಳಗಂಟಿ, ತ್ರಿಗಳಗಂಟಿ, ಬಹುದಲಗಂಟಿಗಳು ವಿಜೃಂಭಿಸುತ್ತವೆ. ಸರಸರನೆ ಸೀಳಿಹಾಕಲಾಗದಷ್ಟು ಸೂಕ್ಷ್ಮವಾದ ಗಂಟುಗಳು ಸೇರಿಕೊಂಡಿರುತ್ತವೆ. ಜಗಳಗಂಟಿ ಮರವನ್ನು ಅಂದರೆ ತೂಬರೆ ಮರವನ್ನು ಒಲೆಗೆ ಹಾಕಿದಾಗ ಅದು ಭಾರಿಯ ಗಲಭೆಯೊಂದಿಗೆ ಉರಿದು ಕಿಡಿಕಾರುತ್ತದಂತೆ. ಹಾಗೆಯೇ ನಮಗೆ ತಿಳಿಯದಂತೆ ಮಾತಿನ ಒಲೆಯಲ್ಲಿ ಈ ಬಗೆಯ ಗಂಟುಗಳು ಕಿಡಿಗಾರುತ್ತವೆ. ಆಯುರ್ವೇದ ವೈದ್ಯರು ಈ ಜಗಳಗಂಟಿ ಗಿಡವನ್ನು 'ಬಿಲ್ವನಿಕೆ' ಎಂದು ಕರೆದು ಅದರಲ್ಲಿ ಔಷಧೀಯ ಗುಣಗಳನ್ನು ಕಂಡುಕೊಂಡಿದ್ದಾರೆ. ನಾವೂ ಮನೆಯ ಜಗಳವನ್ನು ಹೀಗೆ ಆರೋಗ್ಯ ಸಾಧಕವಾಗುವಂತೆ ಬಳಸಿಕೊಳ್ಳುವುದು ಒಳ್ಳೆಯದು ಎಂದು ನನಗೆ ಅನ್ನಿಸುತ್ತದೆ.

ಜಗಳ ಹೇಗೆ ಆರಂಭವಾಗುತ್ತದೆ ಎಂದು ವೈಜ್ಞಾನಿಕವಾಗಿ ವಿಶ್ಲೇಷಿಸಲು ಯಾರಿಗೂ ಸಾಧ್ಯವಿಲ್ಲ. 'ಒಂದೊಂದು ಹನಿ ಬಿದ್ದು ನೆಲದಲ್ಲಿ ಮಡುವಕ್ಕು' ಎಂಬ ಸರ್ವಜ್ಞನ ಮಾತು ಗೃಹಕಲಹದ ಸ್ವರೂಪವನ್ನು ಸ್ವಲ್ಪ ಮಟ್ಟಿಗೆ ಪರಿಚಯಿಸುತ್ತದೆ. ತಂದೆ ಮಗ ಸೊಸೆ ಮಕ್ಕಳು ಸೋದರ ಸೋದರಿಯರು ಎಲ್ಲರೂ ಒಂದೊಂದು ಹನಿ ಸೇರಿಸುವುದರಿಂದ ಜಗಳದ ಸ್ವರೂಪ ತುಂಬ ಸಂಕೀರ್ಣವಾಗುತ್ತದೆ. ಮಾತು ಸಹಜವಾಗಿ ಸರಳವಾಗಿ ಸಾಗುತ್ತಿರುತ್ತದೆ. ತುಂಬ ಕ್ಷುಲ್ಲಕ ಎನ್ನಬಹುದಾದ ಒಂದು ಮಾತು ಭಾರಿಯ ಹಗರಣಕ್ಕೆ ಕಾರಣವಾಗುತ್ತದೆ. 'ಮಗಳು ಸರಿಯಾಗಿ ಊಟ ಮಾಡುತ್ತಿಲ್ಲ' ಎಂದು ತಂದೆಯ ಒಂದು ಆಕ್ಷೇಪಣಾವಾಕ್ಯ ಮುಂದಿನ ಬಹು ಬಗೆಯ ಭಾಷ್ಯ ವ್ಯಾಖ್ಯಾನ ತರ್ಕಗಳಿಗೆ ನಾಂದಿಹಾಡುತ್ತದೆ. ೧. ಹೆಂಡತಿ ಮಗಳಿಗೆ ಸರಿಯಾಗಿ ಊಟ ಮಾಡುವುದನ್ನು ಕಲಿಸಿಲ್ಲ. ೨. ಹೆಂಡತಿಯ ಅಪ್ಪ ಅಮ್ಮ ಮಗಳಿಗೆ ಗೃಹಸೂತ್ರಗಳನ್ನು ಹೇಳಿಕೊಟ್ಟಿಲ್ಲ. ೩. ಮಗಳು ಕುರುಕಲು ತಿಂಡಿಗಳನ್ನು ಧಾರಾಳವಾಗಿ ತಿನ್ನುತ್ತಾಳಾದರೂ ಊಟ ಎಂದಾಗ ನಿರ್ಲಕ್ಷ್ಯ ಮಾಡುತ್ತಾಳೆ. ಇಷ್ಟು ಅರ್ಥಗಳು ಹೆಂಡತಿಗೆ ಹೊಳೆಯುತ್ತವೆ. 'ಅತ್ತೆ'ಯವರಿಗೆ ಹೆಂಡತಿಯನ್ನು ಬೈದಾಗ ಆಗುವ ಸಂತೋಷಕ್ಕೆ ಎಣೆಯುಂಟೆ? ಮೈದುನನಿಗೆ ನನ್ನಾಕೆ ಆರಾಧ್ಯ ದೇವತೆ (ಇದಕ್ಕೆ ಕಾರಣ, ಅವನು ಕೇಳಿದಾಗಲೆಲ್ಲ ದುಡ್ಡು ಕೊಟ್ಟು ಮೆಚ್ಚಿನವಳಾಗಿದ್ದಾಳೆ ಎಂದು ಅತ್ತೆಯ ಆರೋಪವೂ ಇಲ್ಲದಿಲ್ಲ). ಅವಳ ಮೇಲೆ ಪರ್ಯಾಯವಾಗಿ ದೂರು ಬಂದರೂ ಅವನು ಕೆರಳಿ ಕೆಂಡವಾಗಿ ನಮ್ಮ ಹಳೆಯ ಅಡಿಗೆ ಪದ್ಧತಿಯನ್ನೇ ವಿರೋಧಿಸಿ ಮಾತನ್ನು ಬೆಳೆಸುತ್ತಾನೆ. ನಮ್ಮ ತಾಯಿಗೆ ಮತ್ತಷ್ಟು ಕಸಿವಿಸಿ. ನಮ್ಮಪ್ಪನಿಗೆ ತಮ್ಮ ಹಳೆಯ ಬಿರುದಾವಳಿಗಳನ್ನು ಕೆದರಲು ಇದಕ್ಕಿಂತ ಉತ್ತಮ ಅವಕಾಶ ಬೇಕೆ? ವಿಸ್ತಾರವಾಗಿ ತಮ್ಮ ಹೆಂಡತಿಯ ಪಾಕ ಕೌಶಲವನ್ನೂ ತಮ್ಮ ಜೀರ್ಣಶಕ್ತಿಯ ಹಿರಿಮೆಯನ್ನೂ ನೆರವಲಿಗೆ ತೆಗೆದುಕೊಂಡು ಧನ್ಯಾಸಿ ರಾಗದಲ್ಲಿ ವಿವರವಾಗಿ ಹಾಡುತ್ತಾರೆ. ಇದುವರೆಗೆ ಸುಮ್ಮನಿದ್ದ ನನ್ನಾಕೆ ನನಗೇ ದಬಾಯಿಸುತ್ತಾಳೆ. ಮೈದುನನನ್ನು ಮೆಚ್ಚುತ್ತಾ :

''ಅನ್ನಿ ಅನ್ನಿ. ನಾನಿದ್ದೇನಲ್ಲ. ಬಳ್ಳಿಗಳು ಹತ್ತಿರ ಇರುವ ಮರವನ್ನೇ ಹಿಡಿದು ಹಬ್ಬುವ ಹಾಗೆ ಇವರಿಗೆಲ್ಲ ನಾನೊಬ್ಬಳು ಸಿಕ್ಕಿದೀನಿ. ನೀವೇ ಮುದ್ದು ಮಗಳಿಗೆ ಪಾಕೆಟ್‌ಮನಿ ಕೊಟ್ಟು ಕೊಬ್ಬಿಸಿರೋದು. ಅವಳು ಆ ದರಿದ್ರ ಗಾಲಿ ಅಂಗಡಿಯಲ್ಲಿ ಭೇಲ್‌ಪುರಿ, ಸಮೋಸಾ, ದಹಿ ಮಸಾಲೆ ಹಾಳುಮೂಳು ಎಲ್ಲಾ ತಿಂದು ಬರ್ತಾಳೆ. ನಾನೇನು ಮಾಡಲಿ ಹೇಳಿ......''

ಎಚ್ ಎಮ್ ಟಿ ಬಹುಮಾನಿತ ಲೇಖನ

ಹೀಗೆಯೇ ಒಂದು ಗಂಟೆ ಏರಿದ ದನಿಯಲ್ಲಿ 'ಸೂಳ್ನುಡಿ'ಗಳು ವಿಜೃಂಭಿಸುತ್ತವೆ. ಯುದ್ಧದ ಸಂದರ್ಭದಲ್ಲಿ ''ಅಂಬಿಂ ಸವೆದುದೆ ನಭಂ'' ಎಂದು ಒಬ್ಬ ಕವಿ ಹೇಳುತ್ತಾನೆ. ಅಂದರೆ ಎಷ್ಟು ಬಾಣಗಳು ಹಾರಾಡಿದರೂ ಆಕಾಶ ಸವೆಯುವುದಿಲ್ಲ. ಹಾಗೆಯೇ ಗೃಹಯುದ್ಧದ ಸಂದರ್ಭದಲ್ಲಿ ಪೊನ್ನ ಹೇಳುವಂತೆ ''ಬಿಲ್ ಗಾಳಗಮೆಂದೇ ಬಗೆದೆಂ. ಬಾಯ್‌ಕಾಳಗಮನ್ ಈಗಳರಿದೆಂ'' ಎಂಬ ಮಾತು ನಮ್ಮ ಅನುಭವಕ್ಕೆ ಬರುತ್ತದೆ. ಕೀಲು ಕಳಚಿದ ಯಂತ್ರದ ಬಾಗಿಲುಗಳಂತೆ ಎಲ್ಲರೂ ಸಮತೋಲ ತಪ್ಪುತ್ತಾರೆ.

'ತುಪ್ಪದ ಕೊಡದ ಮೇಗಣ ಇಲಿ' ಎಂದು ಹಳಗನ್ನಡದಲ್ಲಿ ಒಂದು ಗಾದೆಯಿದೆ. ನಿಲುವಿನಲ್ಲಿ ತುಪ್ಪದ ಮಡಿಕೆ, ಅದರ ಮೇಲೆ ಇಲಿ ಓಡಾಡುತ್ತಿದೆ. ಹೊಡೆದರೆ ಗುರಿ ತಪ್ಪಿ ಮಡಿಕೆ ಒಡೆದೀತು ಎನ್ನುವ ಭಯ. ಹೀಗೆ ಗೃಹಕಲಹದ ಸಂದರ್ಭದಲ್ಲಿ ಮತ್ತೆ ನಾವು ಇದ್ದಲ್ಲಿಗೇ ಬರುತ್ತೇವೆ. ಆಗಾಗ ತಾತ್ಕಾಲಿಕ ಸಂಧಾನ ಆಗುವುದೂ ಉಂಟು. ಆದರೆ ತಾವರೆಯ ನೂಲಿನಲ್ಲಿ ಆನೆಯನ್ನು ಕಟ್ಟಿದಂತೆ ತಾತ್ಕಾಲಿಕ ಅಷ್ಟೆ. ಈ ಜಗಳ ಇಲ್ಲಿಗೆ ಮುಗಿಯಿತೆ? ತಡೆಯಲಾರದೆ ನೀವು ಒಬ್ಬ ಮಧ್ಯಸ್ಥಿಕೆಗಾರರ ಬಳಿ ಹೋಗಿ ಎಲ್ಲ ಕಥೆ ಹೇಳುತ್ತೀರಿ. ಆದರೆ ಕುಂಭಕೋಣಕ್ಕೆ ಹೋದರೆ ಕುಂಭದ್ರೋಣದ ಮಳೆ ತಪ್ಪಲಿಲ್ಲ ಅನ್ನುವ ಹಾಗೆ ಆ ಮಧ್ಯಸ್ಥಿಕೆದಾರರು.

''ನೀವು ಏನೇ ಹೇಳಿ, ಗಾಳಿ ಇಲ್ಲದೆ ಧೂಳು ಏಳುವುದುಂಟೆ?'' ಎಂದು ಇನ್ನಷ್ಟು ಕೆದಕಿ ನಿಮ್ಮ ಕೋಪಾಗ್ನಿಗೆ ತುಪ್ಪ ಸುರಿಯುತ್ತಾರೆ. ಜಗಳ-ಕಲಹಗಳ ಆರ್ಭಟ ಎಷ್ಟಿದೆಯೆಂಬುದನ್ನು ನಮ್ಮ ಭಾಷೆಯ ಶಬ್ದ ಸಂಪತ್ತೇ ವಿವರಿಸುತ್ತದೆ. 'ಜಗಳಗಾತಿ ಮಗಳನರಿಯಳು'



ಅಂತ ಒಂದು ಗಾದೆ. ಅಂದರೆ ನಮ್ಮ ಮೂಲಭೂತ ಸ್ವಭಾವಕ್ಕೆ ಮಗಳು ಕೂಡ ವಿನಾಯಿತಿ ಪಡೆಯಲು ಸಾಧ್ಯವಿಲ್ಲ. ಜಗಳವಂತ, ಜಗಳಕೋರ ಎಂಬ ಮಾತುಗಳು, ಈ ಭಾವ ನಮ್ಮ ರಕ್ತಗತವಾಗಿರುವುದನ್ನು ಸೂಚಿಸುತ್ತವೆ. 'ಜಗಳದ ಮದ್ದು' ಎಂದು ಸಿಡಿಮದ್ದಿಗೆ ಹೆಸರಿದೆ. ಹಳಗನ್ನಡದಲ್ಲಿಯೂ 'ಪೆಳಕು' ಇದೆ. ಅಂದರೆ 'ಪೆಳಕೆನಲ್ ಜಗಳಮಕ್ಕುಂ' ಎಂದು ನಿಘಂಟು ಹೇಳುತ್ತದೆ. ಜಗಳಗಂಟಿಯರನ್ನು ಹಿಂದೆ ''ಬಿಡಕಿಯರು'' ಎಂದು ಕರೆಯುತ್ತಿದ್ದರಂತೆ. ಅಂದರೆ ಪರಂಪರೆಯಿಂದ ಪೂಜೆ ಮಾಡಿಸಿಕೊಳ್ಳುತ್ತಿರುವ ಉತ್ಸವಮೂರ್ತಿ ಈ ಜಗಳ ಎಂಬುದು ಸ್ಪಷ್ಟ.

ಮಗಳ ವಿಚಾರದಲ್ಲಿ ಎದ್ದ ಜಗಳದ ಧೂಳು ಯಾವ ಬಗೆಯದು ಎಂದು ಆಗಲೇ ಒಂದು ಉದಾಹರಣೆಯ ಮೂಲಕ ವಿವರಿಸಿದ್ದೇನೆ. ಇನ್ನು ಗೃಹಪ್ರಪಂಚದ ಎಲ್ಲ ಪ್ರಜೆಗಳೂ ಈ ಜಗಳದಲ್ಲಿ ಸಮಭಾಗಸ್ಥರು. ಮನೆಯಲ್ಲಿ ನಾಲ್ಕು ಮಕ್ಕಳಿದ್ದರೆ ಅಪ್ಪ ಎಲ್ಲರಿಗೂ ಒಂದೇ ಬಣ್ಣದ ಒಂದೇ ವಿನ್ಯಾಸದ ಬಟ್ಟೆ ತರಬೇಕು. ಇಲ್ಲದಿದ್ದರೆ ಮಕ್ಕಳ ನಡುವೆ ಮಾರಾಮಾರಿ, ಗುದ್ದಾಗುದ್ದಿ! ಹೆಣ್ಣು ಮಕ್ಕಳೇನು ಕಡಿಮೆಯಿಲ್ಲ. ಅವರಲ್ಲೂ ಕೇಶಾಕೇಶಿ ಆರಂಭವಾಗುತ್ತದೆ. ಅಪ್ಪ ಒಂದು ದಿನ ಎಲ್ಲರೂ ಸಂತೋಷವಾಗಿರಲಿ ಎಂಬ ಆಶಯದಿಂದ ಕಾರು ಮಾಡಿ ಹೆಂಡತಿ-ತಾಯಿ, ತಂದೆ ಮಗಳು ಇವರನ್ನೆಲ್ಲ ಕೂರಿಸಿಕೊಂಡು ಕಾರಿನಲ್ಲಿ ಹೊರಟರೆ ಎಲ್ಲಿಗೆ ಹೋಗಬೇಕು ಎಂಬ ವಿಷಯವಾಗಿ ಸಣ್ಣ ಜಗಳ. ಮನೆಯಿಂದ ತಿಂಡಿ ತರುವುದಾಗಿ ತಾಯಿ ಹೇಳಿದರೆ ಹೊರಗೆ ಹೋಟೆಲಲ್ಲಿ ತಿನ್ನಬಾರದೇಕೆ ಎಂಬ ಜಗಳ. ಕೊನೆಗೆ ಯಾರು ಯಾರು ಎಲ್ಲಿ ಕುಳಿತುಕೊಳ್ಳಬೇಕು ಎಂಬ ವಿಷಯದಲ್ಲೂ ಸುಂದರವಾದ ಜಗಳಕಾಂಡ.

ಭಿನ್ನಾಭಿಪ್ರಾಯವೇ ಜಗಳದ ಮೂಲ ಎಂದು ನನ್ನ ಗೆಳೆಯನೊಬ್ಬ ಅದ್ಭುತ ಸಂಶೋಧನೆ

ಮಾಡಿದವನಂತೆ ಘೋಷಿಸಿದ. ನಮ್ಮ ಒಳಮನಸ್ಸಿನಲ್ಲಿ ಸುಪ್ತವಾಗಿ ಕುಣಿಯುತ್ತಿರುವ ಅಸೂಯೆ ಇದಕ್ಕೆ ಕಾರಣ ಎಂದು ಮನಶ್ಶಾಸ್ತ್ರ ಹೇಳುತ್ತದೆ. ಆದ್ದರಿಂದ ಯಾರಾದರೂ ಮಾಡಿದ ಅಡುಗೆಯನ್ನು ನೀವು ಮುಕ್ತಕಂಠದಿಂದ ಹೊಗಳಿದರೆ ಉಳಿದವರಿಗೆ ಮನಸ್ಸು ಕುದಿಯುತ್ತದೆ. ಪ್ರಾಣಿಶಾಸ್ತ್ರಜ್ಞರು ಪೈಪೋಟಿಯೇ ಜಗಳಕ್ಕೆ ಕಾರಣ ಎಂದು ಹೇಳಿ ಆ ವಾದವನ್ನು ಮನುಷ್ಯ ಪ್ರಾಣಿಗಳಿಗೂ ವಿಸ್ತರಿಸಿದ್ದಾರೆ. ಹೋರಾಡುವ ಪ್ರವೃತ್ತಿ ಎಲ್ಲರಲ್ಲೂ ಇರುವುದರಿಂದ ಹೀಗೆ ಜಗಳ ತೆಗೆಯುವ ಕೀಟಲೆ ಬುದ್ಧಿ ನಮ್ಮಲ್ಲಿದೆಯೆಂದು ಅವರು ಹೇಳುತ್ತಾರೆ. ಎಲ್ಲವೂ ನಮ್ಮ ಮೂಗಿನ ನೇರಕ್ಕೇ ನಡೆಯಬೇಕೆಂದು ನಾವೆಲ್ಲ ಆಶಿಸುತ್ತೇವೆ. ಹಾಗೆ ನಡೆಯದಿದ್ದಾಗ ಅಸಹನೆಯಿಂದ ಸಿಡಿಯುತ್ತೇವೆ ಎಂದು ತತ್ತ್ವಜ್ಞಾನಿಗಳು ಹೇಳುತ್ತಾರೆ. ಅಪಾರವಾದ ಆತ್ಮರತಿಯೂ ಜಗಳಕ್ಕೆ ಕಾರಣ ಎಂದು ಕೆಲವರು ವಾದಿಸುತ್ತಾರೆ. ದೇಶ ದೇಶಗಳ ನಡುವಣ, ರಾಷ್ಟ್ರ ರಾಷ್ಟ್ರಗಳ ನಡುವಣ 'ಗಡಿ'ತಂಟೆಗೆ ಇದೇ ಕಾರಣ ಎಂದು ಅವರು ಹೇಳುತ್ತಾರೆ. ನದಿಯ ಪಾಲಿನ ವಿಷಯವಾಗಿ ದೇಶ ದೇಶಗಳ ನಡುವೆ ಜಗಳವಿದ್ದೇ ಇದೆ. ಭಾಷೆ, ಸಂಸ್ಕೃತಿ, ಭೂ ಪ್ರದೇಶಗಳ ಬಗೆಗೆ ನಾವು ಬೆಳೆಸಿಕೊಳ್ಳುವ ಅತ್ಯಭಿಮಾನ ಇಂಥ ಗೊಂದಲಗಳ ಜನಕ ಎಂದು ಸಮಾಜವಾದಿಗಳು ಹೇಳುತ್ತಾರೆ. ನಮ್ಮದೇ ಸರಿ ಎಂದು ವಾದಿಸುವ ಛಲದಿಂದಾಗಿ ಜಗಳ ಹುಟ್ಟುತ್ತದೆ ಎಂದು 'ಕಲಹ ಪ್ರಸೂತಿ ತಜ್ಞರು' ವಿವರಿಸುತ್ತಾರೆ. ಇದಾವುದನ್ನೂ ಒಪ್ಪದೆ ಜಗಳವು ಪ್ರಾಕೃತಿಕವಾದುದು, ಆದುದರಿಂದ ಜಗಳಕ್ಕಾಗಿ ಜಗಳ ಕಾಯುತ್ತಾರೆ ಎಂದು ಕಲಹರಸ ಸಿದ್ಧಾಂತಕಾರರು ವಾದಿಸುತ್ತಾರೆ. ಇನ್ನು ಕೆಲವರು ಈ ಮಾತಿಗೂ ಜಗಳ ತೆಗೆಯುತ್ತಾರೆ. ಅದೇನು ಪ್ರಾಕೃತಿಕವಲ್ಲ. ಬೇರೆಯವರು ಎತ್ತಿ ಕಟ್ಟುತ್ತಾರೆ, ಪ್ರಚೋದಿಸುತ್ತಾರೆ, ಛೂಬಿಡುತ್ತಾರೆ, ಕಿವಿ ಚುಚ್ಚುತ್ತಾರೆ, ಕಿವಿ ಕಚ್ಚುತ್ತಾರೆ, ಬೆನ್ನು ತಟ್ಟಿ ಉತ್ತೇಜಿಸುತ್ತಾರೆ. ಆದುದರಿಂದ ಜಗಳ ಎಂಬುದು ಅನ್ಯರ ಪ್ರಚೋದನೆಯ ಫಲವಾಗಿ ಹರಿಯುವ ದ್ರವ್ಯ ಎಂಬುದು ಅವರ ವಾದ. ಒಂದು ಸಲ ನನ್ನ ಸ್ನೇಹಿತನೊಬ್ಬ ತನ್ನ ಹೆಂಡತಿಯ ನಡವಳಿಕೆಯನ್ನು ವಿಶ್ಲೇಷಿಸುವಾಗ ಈ ಮಾತು ಹೇಳಿದ:

''ನೋಡು, ನನ್ನ ಹೆಂಡತಿ ತುಂಬ ಒಳ್ಳೆಯವಳು. ಗಾಣದೆತ್ತಿನಂತೆ ಮೂಗಿಗೆ ಕವಡೆ ಕಟ್ಟಿಕೊಂಡು ದುಡಿಯುತ್ತಾಳೆ. ಎಲ್ಲರೊಂದಿಗೆ ಸಹಕರಿಸುತ್ತಾಳೆ. ತುಂಬ ಗೆಲುವಾಗಿರುತ್ತಾಳೆ. ಆದರೆ ತವರುಮನೆಗೆಂದು ಒಂದು ವಾರ ಹೋಗಿ ಬಂದಳೆಂದರೆ ಸಾಕು ಮೂರು ದಿನ ವಕ್ರವಾಗಿ ಆಡುತ್ತಾಳೆ. ಕಾರಣ ಗೊತ್ತೆ? ಅವರಮ್ಮ ಇವಳಿಗೆ ''ಕಿವಿಚುಚ್ಚಿ'' ಕಳಿಸಿರುತ್ತಾರೆ. ಅದರ ಪರಿಣಾಮ ಇವಳು ಮುಸುಮುಸು ಎಂದು ಬಿಮ್ಮನೆ ಇರುತ್ತಾಳೆ. ಇದೇನು ಹೇಳು. ಪ್ರಚೋದನೆ ತಾನೆ....? ಸೀರೆ ಬಣ್ಣ ನೀರಿಗೆ ಹಾಕಿದಾಗ ಗೊತ್ತಾಗುತ್ತೆ ಅಂತ ಗಾದೆ ಮಾತಿಲ್ಲವೆ? ಹಾಗೇ ನನ್ನ ಹೆಂಡತಿ ಬಣ್ಣ ತವರಿಗೆ ಹೋದಾಗ..... ಏನಂತಿ......?''

ನನಗೆ ಅವನ ಮಾತು ಒಪ್ಪಿಗೆಯಿಲ್ಲ. ಹೆಂಡತಿ ತವರಿಗೆ ಹೋಗಿದ್ದಾಗ ಇವನ ತಾಯಿ ಮಗನಿಗೇ ಕಿವಿ ಚುಚ್ಚಿರಬಹುದು ಅಂತ ನನಗೆ ಗುಮಾನಿ. ಆದರೆ ಅದನ್ನು ಹೇಳಿದರೆ ಮತ್ತೆ ನನ್ನ ಹತ್ತಿರವೇ ಜಗಳಕ್ಕೆ ಬರುತ್ತಾನೆ ಎಂಬ ಭಯ. ಆದ್ದರಿಂದ ತಟಸ್ಥನಾಗುತ್ತೇನೆ.

ಮತ್ತೆ ಜಗಳದ ವಲಯ ವಿಸ್ತಾರವಾಗುವುದು ನನಗಿಷ್ಟವಿಲ್ಲ, ಆದ್ದರಿಂದ ಸುಮ್ಮನಾದೆ. ಆದರೆ ಕೆಲವರು 'ಕಲಹಾನಂದ ಸರಸ್ವತಿ'ಗಳಿದ್ದಾರೆ. ''ತಂದುಹಾಕು''ವುದೇ ತಮ್ಮ ಸಮಾಜ ಸೇವೆಯ ಪ್ರಮುಖ ಅಂಗ ಎಂದು ಅಂಥವರು ಭಾವಿಸುತ್ತಾರೆ. ಇವರು ಇತರರ ಭಾವನೆಗಳನ್ನು ಕಲಹದ ಗೊಬ್ಬರದಲ್ಲಿ ಬೆಳೆಸಿ ಮೋಜು ನೋಡಲು ಬಯಸುತ್ತಾರೆ. ''ಟಗರೆರಡ ಖತಿಗೊಳಿಸಿ ಬಲುಕಾಳಗವ ನೋಡುವ'' ಇಂಥವರನ್ನು ಕುಮಾರವ್ಯಾಸ ಗೇಲಿ ಮಾಡಿದ್ದಾನೆ. ನಿಮ್ಮ ಅಸಹನೆ ಅತೃಪ್ತಿ ಅಸೂಯೆಗಳ ಬೀಜವನ್ನು ಸಂಪದ್ಯುಕ್ತವಾಗಿ ಬೆಳೆಸುವ 'ಬೀಜ ನಿಗಮ'ವನ್ನು ಇವರು ಸ್ಥಾಪಿಸಿಕೊಂಡಿರುತ್ತಾರೆ. ಈ ದೊಡ್ಡಣ್ಣಗಳ ಕೈವಾಡ ತೆರೆಯ ಮರೆಯದು ಅಷ್ಟೆ. ಹೊರಗೆ ಬರುವುದಿಲ್ಲ. ತಮ್ಮಲ್ಲಿ ತಯಾರಾಗುವ ವಿನಾಶಕಾರೀ ಮಾರಕಾಸ್ತ್ರಗಳು ಮಾರಾಟವಾಗಬೇಕಾದರೆ ರಾಷ್ಟ್ರ ರಾಷ್ಟ್ರಗಳ ನಡುವೆ ಗಡಿತಂಟೆಗಳನ್ನು ಕೆರಳಿಸಬೇಡವೆ? ಖಟ್ಲೆಗಳು ಬೇಗ ಬೇಗ ತೀರ್ಮಾನವಾಗದಂತೆ ವಿಳಂಬಾಸುರರ ಪಾತ್ರವನ್ನು ಅಚ್ಚುಕಟ್ಟಾಗಿ ಮಾಡದಿದ್ದರೆ ನ್ಯಾಯವಾದಿಗಳ ಬದುಕು ನಡೆಯಬೇಕು ಹೇಗೆ? ಲಾಯರುಗಳ ಅತ್ಯದ್ಭುತ ಕಾನೂನು ಜ್ಞಾನಕ್ಕೆ ಈ ವ್ಯಾಜ್ಯಗಳೇ ಕಾರಣವಲ್ಲವೆ? ಪರಸ್ಪರ ಎತ್ತಿಕಟ್ಟಿ ತಾವು ಲಾಭ ಪಡೆಯುವ ವ್ಯಾಪಾರೀ ಬುದ್ಧಿಯ ಇಂಗ್ಲಿಷರನ್ನು ನೆಪೋಲಿಯನ್ 'A NATION OF SHOP KEEPERS ' ಅಂತ ಕರೆದದ್ದು ಇದೇ ಕಾರಣಕ್ಕಾಗಿ ಅಲ್ಲವೆ?

ಗಂಡ ಹೆಂಡಿರ ನಡುವೆ ನಡೆಯುವ ಜಗಳವು ಪರಮಾವಧಿಗೆ ಹೋದಾಗ ಕಾನೂನು ಅವರಿಗೆ 'ವಿವಾಹ ವಿಚ್ಛೇದನ' ಎಂಬ ಮಾರಕಾಸ್ತ್ರವನ್ನು ಒದಗಿಸುತ್ತದೆ. ಆದರೆ ನನ್ನ ದೃಷ್ಟಿಯಲ್ಲಿ 'ವಿಚ್ಛೇದನ' ಎನ್ನುವುದು ಪರಿಹಾರದ ಸೂತ್ರವಲ್ಲವೇ ಅಲ್ಲ. ವಿಚ್ಛೇದನವಾಗಿಬಿಟ್ಟರೆ ಎಲ್ಲ ಕತ್ತರಿಸಿದಂತಾಗುತ್ತದೆ. ಅದು ಪರಿಹಾರವಲ್ಲ. ಜಗಳ ವಾಡುತ್ತಲೇ ಇರಬೇಕು, ಪರಸ್ಪರರ ದೋಷ ವಿಚ್ಛೇದನಕ್ಕೆ ಅವಕಾಶ ಸಿಗುತ್ತಿರಬೇಕು. ಬಡಿದಾಡಬೇಕು ಮತ್ತೆ ಒಂದಾಗಬೇಕು. ಒಂದಾದ ಕ್ಷಣವೇ ಅವರಲ್ಲಿ ಭಿನ್ನಾಭಿಪ್ರಾಯಗಳೆಲ್ಲ ಇಸ್ತ್ರಿಯಾಗಿವೆ ಎಂದರ್ಥವಲ್ಲ. ಸಂಧಾನ ಎನ್ನುವುದು ಎರಡು ಯುದ್ಧಗಳ ನಡುವಣ ವಿಶ್ರಾಂತಿಸ್ಥಾನ ಅಷ್ಟೆ. ಮತ್ತೆ ಹೊಸ ಹುರುಪಿನಿಂದ ಇಬ್ಬರೂ ಒಬ್ಬರನ್ನೊಬ್ಬರು 'ಬಗೆ' ಯಲು ಹತಾರುಗಳನ್ನು ಸಿದ್ಧಪಡಿಸಿ ಕೊಳ್ಳಬೇಕು. ಯಾರ ಮೇಲಾದರೂ ಕಿಡಿಗಾರಿದರೆ ಅವರ ಮೇಲೆ ಅಖಂಡ ಪ್ರೀತಿಯಿದೆ, ಅವರು ಸುಧಾರಿಸಲಿ ಎಂಬ ಆಶಯವಿದೆ ಎಂದರ್ಥವೇ ಹೊರತು ಅದು ದ್ವೇಷ ಮೂಲವೆಂದು ಯಾರೂ ಭಾವಿಸಬಾರದು. ವಿಚ್ಛೇದನದ ಬಗೆಗೆ ನನಗೆ ಸಹಮತಿ ಇಲ್ಲದಿರುವುದಕ್ಕೆ ಇನ್ನೂ ಒಂದು ಕಾರಣವಿದೆ. ಏನೆಂದರೆ ಹಾಗೆ ಕಾನೂನುರೀತ್ಯಾ ವಿಚ್ಛೇದನ ಪಡೆದು ನೀವು ಇನ್ನೊಂದು ಹುಡುಗಿ-(ಹುಡುಗ) ಕಟ್ಟಿಕೊಂಡರೆ ಅವಳೊಂದಿಗೆ ಅಥವಾ ಅವನೊಂದಿಗೆ ಜಗಳವನ್ನೇ ಆಡುವುದಿಲ್ಲ ಎಂದು ಪ್ರತಿಜ್ಞೆ ಮಾಡಿ ಹೇಳುವಿರೇನು? 'ಅನ್ಯೋನ್ಯತೆ' ಎಂಬ ಮಾತಿನ ಸಾರ್ಥಕ್ಯ ಇರುವುದು ಜಗಳವಾಡಿಕೊಂಡರೂ ಒಟ್ಟಿಗೆ ಬಾಳುವುದರಲ್ಲಿ ಎಂಬುದನ್ನು ಮರೆಯಬಾರದು. ಕೃಷಿಯ ಪರಿಭಾಷೆಯಲ್ಲಿ ಹೇಳುವುದಾದರೆ ಜಗಳ ಎನ್ನುವುದು ಕಳೆಯನ್ನು, ಮತ್ತೆ ಮತ್ತೆ ಕೀಳೆಯನ್ನು ಚಿವುಟಿಹಾಕಲು ಸಹಾಯಕವಾದ ಕತ್ತರಿ. ಜಗಳದ ಕೋಶದಿಂದ ಸಿಡಿದು ವಿಚ್ಛೇದನದ ವಲಯಕ್ಕೆ ನಮ್ಮ ಸಂಸಾರದ ಉಪಗ್ರಹ ಸಾಗಬಾರದು. ಪರಿಸ್ಥಿತಿ ತುಂಬ ವಿಕೋಪಕ್ಕೆ, ಹಿಂದಿರುಗಿ ಬರಲಾಗದಷ್ಟು ಉಗ್ರವಾದರೆ ವಿಧಿಯಿಲ್ಲವೆನ್ನೋಣ. ಆದರೆ ಸಾವಿರಾರು ಪರ್ವತ ಗಳಿದ್ದರೂ, ಜ್ವಾಲಾಮುಖಿಗಳಿರುವುದು ಬೆರಳೆಣಿಕೆಯಷ್ಟು ಕಡಿಮೆ ಸಂಖ್ಯೆಯ ಬೆಟ್ಟಗಳಲ್ಲಿ ತಾನೆ! 'ಪರಮೆಗಾರದೆ ಪೂ ಗಿಡುಕಡಿದರ್' ತುಂಬಿಯ ಮೇಲಿನ ಕೋಪಕ್ಕೆ ಹೂಗಿಡವನ್ನೇ ಕತ್ತರಿಸಿದರು ಎಂಬಂತಾಗಬಾರದು.

ಒಬ್ಬರ ಮದುವೆಯಲ್ಲಿ ದಂಪತಿಗಳು ಕೊರವಂಜಿ ಸಂಪಾದಕ ರಾಶಿಯವರಿಗೆ ನಮಸ್ಕಾರ ಮಾಡಿದರಂತೆ. ಆಗ ರಾಶಿಯವರು ''ಆನಂದವಾಗಿ ಬಹುಕಾಲ ಜಗಳವಾಡಿ ಕೊಂಡು ಬಾಳಿ'' ಎಂದು ಆಶೀರ್ವದಿಸಿದರಂತೆ. ಇಷ್ಟಕ್ಕೂ ನಿಜವಾಗಿ ಜಗಳವಾಡಬಾರದು ಎಂಬ ಸೂಕ್ತಿ ನಮಗೇನು ಗೊತ್ತಿಲ್ಲವೆ? ನಿಧಾನವಾಗಿ ಯೋಚಿಸಿದಾಗ ಈ ಜಗಳ ಬುದ್ಧಿ ಒಳ್ಳೆಯದಲ್ಲ ಎಂಬುದು ನಮಗೇ ಹೊಳೆದಿರುತ್ತದೆ. ಈ ಜಗಳದ ಪೀಡೆಯನ್ನು ತೊಲಗಿಸುವ ಉಪಾಯವೂ ನಮಗೆ ಗೊತ್ತಿದೆ ಎಂಬಂತೆ ಮಾತನಾಡುತ್ತೇವೆ. ಆದರೆ ಅದು ಬೊಗಳೆಯ ಮಾತು. ಚನ್ನಬಸವಣ್ಣ ತನ್ನ ಒಂದು ವಚನದಲ್ಲಿ ಹೇಳುತ್ತಾನೆ:

*ಖೇಚರದ ಮದ್ದು ಕೊಟ್ಟೇನು*
*ಹೊಳೆಯ ದಾಟಿಸು.*

ಖೇಚರದ ಮದ್ದು ಎಂದರೆ ಆಕಾಶದಲ್ಲಿ ಹಕ್ಕಿಯಂತೆ ಹಾರಾಡುವ ವಿದ್ಯಾಧರೀ ವಿದ್ಯೆ. ಈ ವಿದ್ಯೆ ತನಗೆ ಗೊತ್ತಿದೆ ಎಂದುಕೊಳ್ಳುವ ಒಬ್ಬ ನಡೆದುಬರುತ್ತಿದ್ದಾಗ ನದಿ ಅಡ್ಡವಾಗುತ್ತದೆ. ಅವನು ಈಜಲಾರ, ಹಾರಲಾರ. ಅವನ ಕೈಯಲ್ಲಿ ಕಾಸೂ ಇಲ್ಲವೋ ಏನೋ! ಅವನು ಉಪಾಯವಾಗಿ ಅಂಬಿಗನಿಗೆ ತನ್ನನ್ನು ದೋಣಿಯಲ್ಲಿ ಆ ದಂಡೆಗೆ ಸೇರಿಸು ಎಂದು ಕೇಳುತ್ತಾನೆ. ಒಂದು ಆಸೆಯನ್ನು ಹುಟ್ಟಿಸುತ್ತಾನೆ. ಹೊಳೆ ದಾಟಿಸಿದ ಮೇಲೆ ಆಕಾಶಗಾಮಿನೀ ವಿದ್ಯೆಯನ್ನು ಹೇಳಿಕೊಡುತ್ತೇನೆ ಎಂದು ಹೇಳುತ್ತಾನೆ. ಆ ವಿದ್ಯೆ ಗೊತ್ತಿದ್ದರೆ ತಾನೇ ಹಾರಬಹುದಾಗಿತ್ತಲ್ಲವೆ? ನಮ್ಮದೆಲ್ಲ ಅದೇ ಪಾಡು. ಕಲಹವಾದಾಗ ಮಧ್ಯಸ್ಥಿಕೆಗೆ ನ್ಯಾಯವಾದಿಗಳನ್ನೋ, ಹಿರಿಯರನ್ನೋ, ಟ್ರಿಬ್ಯುನಲ್‌ಗಳನ್ನೋ ಆಶ್ರಯಿಸುತ್ತೇವೆ. ಜಗಳವನ್ನೇ ಆಡದ ಒಂದು ಸಮಾಧಾನದ ಖೇಚರೀ ವಿದ್ಯೆ ನಮಗೆ ಗೊತ್ತಿದೆ. ಅದರ ಮಂತ್ರಗಳೂ ಗೊತ್ತಿವೆ. ಆದರೆ ಅದನ್ನು ನಮ್ಮ ಮೇಲೇ ಪ್ರಯೋಗಿಸಿಕೊಳ್ಳಲು ಆಗುವುದಿಲ್ಲ. ಆದುದರಿಂದ ಉದಾರವಾಗಿ ಇತರರಿಗೆ ಬುದ್ಧಿವಾದ ಹೇಳುತ್ತೇವೆ. ನಾವು ಅಭಿಮಾನದಿಂದ ಬೆಳೆಸಿಕೊಂಡಿರುವ ದೃಷ್ಟಿ 'ಕೋಣ'ಗಳನ್ನು ಸಿಕ್ಕವರ ಮೇಲೆ ಹಾಯಲು ಬಿಡುವುದು ಸಹಜ ತಾನೆ !

**ಪ್ರೊ. ಅ.ರಾ. ಮಿತ್ರ**
ನಂ. ಬಿ - ೬, ಕೆ.ಎಚ್.ಬಿ. ಕಾಲೋನಿ
ಪುಟ್ಟೇನ ಹಳ್ಳಿ , ಯಲಹಂಕ
ಬೆಂಗಳೂರು - ೫೬೦ ೦೬೪



**ಚಂದ್ರನಿಲ್ಲದ ಆಕಾಶ** (ಕಾದಂಬರಿ)

*ಎಂ. ವೆಂಕಟಸ್ವಾಮಿ*

**ಪುಟ : 180** **ಬೆಲೆ : ರೂ. 80**

ನಿರಂಜನ್, 638, 9-ಡಿ ಮುಖ್ಯರಸ್ತೆ, ಆರ್. ಪಿ. ಸಿ. ಲೇಔಟ್, ವಿಜಯನಗರ 2ನೇ ಹಂತ, ಬೆಂಗಳೂರು - 40

*ಸಮಾಜದ ಮಧ್ಯಮ ವರ್ಗವನ್ನು ದೃಷ್ಟಿಯಲ್ಲಿರಿಸಿ ಹೆಣೆದ ಕಾದಂಬರಿ ಇದು. ವಿಪರೀತ ಆಧುನಿಕತೆಯ ಮೋಹ ಒಂದೆಡೆ - ಗೊಡ್ಡು ಸಂಪ್ರದಾಯ, ಮೂಢನಂಬಿಕೆ ಇನ್ನೊಂದೆಡೆ. ಇಂಥ ಎರಡು ಜನವರ್ಗಗಳ ನಿಲುವಿನ ಬಗ್ಗೆ ಪ್ರತಿಯೊಂದು ಕುಟುಂಬದಲ್ಲೂ ಸಂಘರ್ಷ, ಮನಸ್ತಾಪ ಅನಿವಾರ್ಯ. ಸಂಭಾವಿತರಂತೆ ಕಾಣುವ ಇಂಥ ಜನರ ನಿಜ ಹೂರಣವನ್ನು ಮೆಲು ಮಾತಿನಲ್ಲೇ ಲೇಖಕರು ಹೊರಗೆಳೆದಿದ್ದಾರೆ.*

**ಸೌಂದರನಂದ**



*ಡಾ॥ ಎಲ್. ಬಸವರಾಜು*

**ಪುಟ : 308** **ಬೆಲೆ : ರೂ. 150**

**ಲೋಹಿಯಾ ಪ್ರಕಾಶನ**, 'ಕ್ಷಿತಿಜ', ಕಪ್ಪಗಲ್ಲು ರಸ್ತೆ, ಗಾಂಧಿನಗರ, ಬಳ್ಳಾರಿ - 583 103

*ಕನ್ನಡದ ಹಿರಿಯ ವಿದ್ವಾಂಸ ಡಾ॥ ಎಲ್. ಬಸವರಾಜು ಅವರು ಬೌದ್ಧ ಸಾಹಿತ್ಯದ ಅಶ್ವಘೋಷನ ಸೌಂದರನಂದ ಮಹಾಕಾವ್ಯವನ್ನು ಕನ್ನಡಿಸಿದ್ದಾರೆ. ಬುದ್ಧನ ಸೋದರ ನಂದನ ಶೃಂಗಾರ ಜೀವನವನ್ನೂ ಅದರೊಂದಿಗೆ ಬುದ್ಧನ ಉಪದೇಶದ ಸಾರವನ್ನೂ ಒಟ್ಟಿಗೇ ನಿರೂಪಿಸಲಾಗಿದೆ. ಕನ್ನಡದಲ್ಲಿ ಬೌದ್ಧ ಸಾಹಿತ್ಯದ ಕೊರತೆ ನೀಗಿಸಿದ ಈ ಗ್ರಂಥದಲ್ಲಿ ಬೌದ್ಧ ಸಾಹಿತ್ಯದ ತ್ರಿಪಿಟಕಗಳನ್ನು ಅಧ್ಯಯನ ಮಾಡಿದಂತಾಗುತ್ತದೆ.*

**ಕವಿರಾಜಮಾರ್ಗ ಮತ್ತು ಕನ್ನಡ ಜಗತ್ತು**




*ಕೆ. ವಿ. ಸುಬ್ಬಣ್ಣ*

**ಪುಟ : 128** **ಬೆಲೆ : ರೂ. 70**

**ಅಕ್ಷರ ಪ್ರಕಾಶನ**, ಹೆಗ್ಗೋಡು, ಸಾಗರ-577 417

*ಈ ತನಕ ದೊರೆತ ಕನ್ನಡದ ಪ್ರಾಚೀನ ಕೃತಿ 'ಕವಿರಾಜ ಮಾರ್ಗ'ವು ಕನ್ನಡ ನೆಲದ ಅಂದಿನ ಮೇರೆಗಳನ್ನು ತಿಳಿಸುತ್ತ ಕನ್ನಡದ ಸಂಶೋಧನೆಗೆ ನೆರವಾಗಿದೆ. ಕನ್ನಡದ ಕೈದೀವಿಗೆ, ಕೈಗನ್ನಡಿಯಂತಿರುವ ಶ್ರೀವಿಜಯನ ಈ ಪ್ರಾಚೀನ ಕಾವ್ಯದ ಬಗ್ಗೆ ಪ್ರಸ್ತಾಪಿಸುತ್ತಾ ಕನ್ನಡ ಜನಪದವು ಹೇಗೆ ಇಡೀ ಭೂಮಂಡಲದಲ್ಲಿ ತನ್ನತನವನ್ನು ಕಾಯ್ದು ಗಣ್ಯಸ್ಥಾನದಲ್ಲಿತ್ತೆಂದು ಇಲ್ಲಿ ಚರ್ಚಿತವಾಗಿದೆ. ಕೆ. ವಿ. ಸುಬ್ಬಣ್ಣ ಇಲ್ಲಿ ಈ ಕೃತಿಯ ಒಂದು ಅಮೋಘ ಅವಲೋಕನವನ್ನು ಕೊಟ್ಟಿದ್ದಾರೆ.*



**ಅಂಟಾರ್ಕಟಿಕಾ** (ಮಕ್ಕಳ ವೈಜ್ಞಾನಿಕ ಕಾದಂಬರಿ)

*ಆರ್. ಕೆ. ಶಾನಭೋಗ*

**ಪುಟ : 112** **ಬೆಲೆ : ರೂ. 50**

**ನಿರ್ಮಲ ಪ್ರಕಾಶನ**, 957, 'ಸಂತೋಷ ಸಾಗರ', ಗೋವಿನಪುರ ಬಡಾವಣೆ, ತಿಪಟೂರು - 572 202

*ಅಂಟಾರ್ಕಟಿಕಾ ಹಿಮದಿಂದಾವೃತವಾದ ಒಂದು ಭೂಖಂಡ. ದುಷ್ಟ ಮಾನವನಿಂದ ಸಮುದ್ರಕ್ಕೆಸೆಯಲ್ಪಟ್ಟ ಪುಟಾಣಿಯೊಬ್ಬ ಈ ಖಂಡ ಸೇರಿ ಅಲ್ಲಿನ ಜಲಚರಗಳೊಂದಿಗೆ ಸ್ನೇಹದ ವಾತಾವರಣದಲ್ಲಿ ಬೆಳೆದು ಅಲ್ಲಿನ ಪರಿಸರಕ್ಕೆ ಹೊಂದಿಕೊಂಡ ಕಾಲ್ಪನಿಕ ಕಥೆ. ಸಾಹಸಮಯ ಕಥೆ ಹೇಳುತ್ತಲೇ ಲೇಖಕರು ಇಡೀ ಖಂಡದ ಬಗ್ಗೆ ಅಲ್ಲಿನ ಪರಿಸರದ ಸಮಗ್ರ ಪರಿಚಯ ಮಾಡಿಸುತ್ತಾರೆ. ಮಕ್ಕಳಿಗೆ ಖುಷಿ ಕೊಡುವ ಕಾದಂಬರಿ.*

**ಕನ್ನಡಪರ ಚಿಂತನೆ ಮತ್ತು ಪರಂಪರೆ**



*ಡಾ॥ ಕಾ. ವೆಂ. ಶ್ರೀನಿವಾಸ ಮೂರ್ತಿ*

**ಪುಟ : 360** **ಬೆಲೆ : ರೂ. 70**

**ಅಲ್ಲಮ ಪ್ರಭು ಜನಕಲ್ಯಾಣ ಸಂಸ್ಥೆ**, ಸಿದ್ಧಸಂಸ್ಥಾನ ಮಠ, ಚಿಂಚಣಿ, ಚಿಕ್ಕೋಡಿ ತಾಲ್ಲೂಕು, ಬೆಳಗಾವಿ ಜಿಲ್ಲೆ.

*ಇದು ಸಮಗ್ರ ಕನ್ನಡ ನಾಡು ನುಡಿಯ ಬಗ್ಗೆ ಅಧ್ಯಯನ ಮಾಡಿದ ಸಂಶೋಧನ ಗ್ರಂಥ. ಕನ್ನಡ ನಾಡಿಗೆ ಬಹಳ ಪ್ರಾಚೀನವಾದ ಪರಂಪರೆ ಇದ್ದು, ಇತ್ತೀಚಿನ ಸ್ವಾತಂತ್ರ್ಯ ಗಳಿಕೆ ಹಾಗೂ ಕರ್ನಾಟಕ ಏಕೀಕರಣದಂಥ ಮಹತ್ವದ ಐತಿಹಾಸಿಕ ಘಟನೆಗಳೂ ಚರ್ಚಿಸಲ್ಪಟ್ಟಿವೆ. ಕನ್ನಡದ ಪ್ರಾಚೀನ-ಇತ್ತೀಚಿನ ಕವಿಗಳೆಲ್ಲರನ್ನೂ ಪ್ರಸ್ತಾಪಿಸಿ ಕನ್ನಡ ಪರ ಚಿಂತನೆಯ ಆಳ ತಿಳಿಯುವ ಪ್ರಯತ್ನ.*



**ಪರಿವರ್ತನೆಯ ಸುಳಿಯಲ್ಲಿ ಕಿರುಸಮುದಾಯಗಳು**

*ಎನ್. ಪಿ. ಶಂಕರನಾರಾಯಣರಾವ್*

**ಪುಟ : 224** **ಬೆಲೆ : ರೂ. 50**

**ಕನ್ನಡ ಸಾಹಿತ್ಯ ಪರಿಷತ್ತು**, ಪಂಪ ಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು - 560 018

*ಚರಿತ್ರೆಯ ಬಗ್ಗೆ ಅತ್ಯಂತ ಪ್ರಾಮಾಣಿಕವಾಗಿ ವಿದ್ವತ್ಪೂರ್ಣವಾಗಿ ಮಾಹಿತಿ ಒದಗಿಸಬಲ್ಲ ಶ್ರೀ ಎನ್. ಪಿ. ಶಂಕರನಾರಾಯಣರಾವ್ ಇಲ್ಲಿ ಗ್ರಾಮಗಳ ಕಿರುಸಮುದಾಯಗಳತ್ತ ಕಣ್ಣು ಹಾಯಿಸಿ ಅವರ ಆಚಾರ-ವಿಚಾರ- ಜೀವನ ಕ್ರಮಗಳ ವಿವರವನ್ನೇ ನಮ್ಮ ಮುಂದಿರಿಸಿದ್ದಾರೆ. ಕಾಡು ಮೇಡು ಅಲೆಯುತ್ತ ನೈಸರ್ಗಿಕ ಉತ್ಪನ್ನಗಳನ್ನೇ ನಂಬಿ ಬಾಳಿದ್ದ ಈ ಸಮುದಾಯಗಳು ಈಗ ಆಧುನಿಕತೆಯ ಹಾವಳಿಯಿಂದ ಪರಿವರ್ತನೆಯ ದಾರಿ ತುಳಿಯಲೇಬೇಕಾಗಿದೆ.*



**ಕುಕ್ಕರ ಹಳ್ಳಿ** (ಗ್ರಾಮ ಜೀವನ ಚಿತ್ರ)

*ಶಿವರಾಮು ಕಾಡನಕುಪ್ಪೆ*

**ಪುಟ : 168** **ಬೆಲೆ : ರೂ. 65**

**ಭಾರತೀ ಪ್ರಕಾಶನ**, ಸರಸ್ವತಿಪುರಂ, ಮೈಸೂರು-570 009

*ದುಡಿಯುವ ಬಡವರ್ಗವಿರುವ ದಲಿತಗ್ರಾಮ ಕುಕ್ಕರ ಹಳ್ಳಿಯ ಬಗ್ಗೆ ಒಂದು ಸಮಗ್ರ ಚಿತ್ರಣ. ಹಳೆಯ ಕಂದಾಚಾರಗಳನ್ನು ಮೆಟ್ಟಿನಿಂತು ಪರಿವರ್ತನೆಯ ದಾರಿ ತುಳಿಯುತ್ತಿರುವ ಈ ಹಳ್ಳಿಯಲ್ಲಿನ್ನೂ ನಿರಾಳವಾಗಿ ಬದುಕುವುದು ಸಾಧ್ಯವಾಗಿಲ್ಲ. ವಿದ್ಯೆ ಕಲಿತವರೆಲ್ಲ ಪಟ್ಟಣ ಸೇರಿ ಹಾಯಾಗಿರುವವರೆಗೂ ಹಳ್ಳಿಗಳ ಉದ್ಧಾರ ಕನಸಿನ ಮಾತೆಂಬ ನಿಜಸಂಗತಿಯನ್ನು ಈ ಹಳ್ಳಿಯ ಅಭಿವೃದ್ಧಿಗಾಗಿ ಇತರರೊಂದಿಗೆ ಶ್ರಮಿಸಿದ ಲೇಖಕರು ತಿಳಿಸಿದ್ದಾರೆ.*



**ನೆತ್ತರ ಕಣಿವೆಯಲ್ಲಿ**

*ಆರ್. ಟಿ. ವಿಠ್ಠಲಮೂರ್ತಿ*

**ಪುಟ : 90** **ಬೆಲೆ : ರೂ. 60**

**ಐ.ಬಿ.ಎಚ್. ಪ್ರಕಾಶನ**, 6456, 10 ಬಿ ಮುಖ್ಯರಸ್ತೆ, 4ನೇ ಬಡಾವಣೆ, ಜಯನಗರ, ಬೆಂಗಳೂರು - 560 011

*ಕಾಶ್ಮೀರದ ಕಣಿವೆಯಲ್ಲಿ ನೆತ್ತರ ಕೋಡಿ ಹರಿಸಿದ, ಅನೇಕ ತಾಯಂದಿರಿಂದ ಮಕ್ಕಳನ್ನು ಬಲಿ ತೆಗೆದುಕೊಂಡ ತಂಪಾದ ನೆಲದಲ್ಲಿ ಬೆಂಕಿಯುಂಡೆಗಳನ್ನುಗುಳಿದ ಕಾರ್ಗಿಲ್ ಕದನದ ಸಂದರ್ಭದಲ್ಲಿ ಪತ್ರಿಕಾ ಸಂಪಾದಕರೊಂದಿಗೆ ಲೇಖಕರು ಯುದ್ಧಭೂಮಿಗೆ ಭೇಟಿ ನೀಡಿದ ಪ್ರತ್ಯಕ್ಷ ವರದಿ. ಸ್ವಾರ್ಥ ರಾಜಕಾರಣಿಗಳಿಂದಾಗಿ ತಾಯ್ನಾಡಿಗೆ ರಕ್ತ ಚೆಲ್ಲುವ ಯೋಧನಿಗೆ ದಕ್ಕಿದ್ದು ಮರಣೋತ್ತರ ಪ್ರಶಸ್ತಿ ಮಾತ್ರ ಎಂಬುದು ಖೇದದ ವಿಷಯ.*

**- ಇಂದಿರಾ ಕುಮಾರಿ**

# ಉರ್ದು ಸಾಹಿತ್ಯ ಮತ್ತು ಕೃಷ್ಣಚಂದರ

ಡಾ॥ ಪಂಚಾಕ್ಷರಿ ಹಿರೇಮಠ

**ಉ**ರ್ದು ಭಾರತೀಯ ಭಾಷೆ. ಈ ಭಾಷೆಯನ್ನು ಹಿಂದು-ಮುಸಲ್ಮಾನರಿಬ್ಬರೂ ಬಹು ಶ್ರದ್ಧೆಯಿಂದ ಬೆಳೆಯಿಸಿದರು. ಇಂಥ ಭಾಷೆಯ ಕಾವ್ಯ ಆರಂಭದಲ್ಲಿ ದರ್ಬಾರಿನ ಸೊತ್ತಾಗಿತ್ತು. ರಾಜ ಮಹಾರಾಜರ, ನವಾಬರ, ಬಾದಷಹಾರ ಘನತೆ, ಗೌರವ, ಕೀರ್ತಿಯನ್ನು ಹೊಗಳುವುದರಲ್ಲಿ ಹಾಗೂ ಪ್ರೇಮ, ಸೌಂದರ್ಯ, ವಿರಹ, ಮಧುಶಾಲೆಯ ವರ್ಣನೆಯಲ್ಲಿ ತನ್ಮಯವಾಗಿತ್ತು. ೧೮೫೭ರ ಕ್ರಾಂತಿಯ ಸ್ವಲ್ಪ ಮುಂಚೆ ಮತ್ತು ಅದರ ನಂತರ ಉರ್ದು ಕಾವ್ಯವಾಹಿನಿಯಲ್ಲಿ ಹೊಸ ಪ್ರವಾಹ ಹರಿಯಲಾರಂಭಿಸಿತು. ಅರಮನೆಯ ದರ್ಬಾರು, ಪ್ರೇಯಸಿಯ ಮುಂಗುರುಳು, ತೊಂಡೆದುಟಿ, ಮುಗುಳ್ನಗೆ, ದ್ರಾಕ್ಷಾರಸದ ಬುರುಗಿನಿಂದ ತುಂಬಿದ 'ಜಾಮ್', ಪ್ರೇಯಸಿಯ ಗುಲಾಬಿಗಲ್ಲ-ಇವುಗಳ ಬಂಧನದಿಂದ ಉರ್ದು ಕಾವ್ಯ ಮುಕ್ತವಾಗಿ, ಒಮ್ಮೆ ಮೈಮುರಿದು ವಾಸ್ತವಿಕ ಬದುಕಿನ ಗಂಭೀರ ಸಮಸ್ಯೆಯತ್ತ ಹೊರಳಿ ನೋಡಿತು. ಆಗ ಅದಕ್ಕೆ ಬದುಕಿನ ಇನ್ನೊಂದು ಮುಖದ ದರ್ಶನವಾಯಿತು. ಕೇವಲ ಸೌಂದರ್ಯಾರಾಧಕನಾಗಿ ಜೀವನದ ವಾಸ್ತವಿಕತೆಯನ್ನು ಕಡೆಗಣಿಸಿದ್ದ ಕವಿ, ಬದುಕನ್ನು ಬಹು ಹತ್ತಿರದಿಂದ ನೋಡಲಾರಂಭಿಸಿದ. ಹೀಗೆ ಬಂದ ಕವಿಗಳಲ್ಲಿ 'ನಜೀರ್' ಅಕ್ಬರಾಬಾದಿ, ಕಾವ್ಯರ್ಷಿ ಮಿರ್ಜಾ ಗಾಲಿಬ್, ಕ್ರಾಂತಿಕಾರಿ ಕವಿ ಡಾ॥ ಮಹ್ಮದ್ 'ಇಕ್ಬಾಲ', 'ಫಿರಾಕ್' ಗೋರಖಪುರಿ, 'ಫೈಯ್ಜ್' ಅಹ್ಮದ್ ಫೈಯ್ಜ್, ಸರ್ದಾರ್ ಜಾಫರಿ, 'ಸಾಹಿರ್' ಲುಧಿಯಾನ್ವಿ, 'ಮಜರೂಹ' ಸುಲ್ತಾನಪುರಿ ಮುಂತಾದವರು ಉರ್ದು ಕಾವ್ಯದ ಶ್ರೀಮಂತಿಕೆ ಹೆಚ್ಚಿಸಿದ್ದಾರೆ.

ಉರ್ದು ಕಥಾಸಾಹಿತ್ಯವು ಆರಂಭದಲ್ಲಿ 'ಬೂಸ್ತಾನೇ ಖಯಾಲ್', 'ಪಸಾನಯೆ ಅಜಾಯಿಬ್'ದಂಥ ಕಾಲ್ಪನಿಕ ಮತ್ತು ಅವಾಸ್ತವ ಅಡಗೂಲಜ್ಜಿಯ ಕಥೆಗಳಿಂದಲೇ ತನ್ನ ಓದುಗರ ಮನವನ್ನು ರಂಜಿಸಿತು. ಬಂಡಾಯದ ನಂತರ ಉರ್ದು ಕಥಾಸಾಹಿತ್ಯದಲ್ಲಿ ವಾಸ್ತವಿಕತೆಯನ್ನು ನಿರೂಪಿಸಿದವರಲ್ಲಿ ಡಾ॥ ರಥನನಾಥ 'ಸರಷಾರ' ಪ್ರಮುಖರು. ಒಳ್ಳೆಯ ಹಾಗೂ ಮೌಲಿಕ ಕಥೆಗಳನ್ನು ಉರ್ದು ಭಾಷೆಗೆ ಪ್ರಥಮವಾಗಿ ನೀಡಿದವರೆಂದರೆ ಮುನ್ಷಿ ಪ್ರೇಮಚಂದರು. ಪ್ರೇಮಚಂದರು ಜೀವನವನ್ನು ಬಹು ಹತ್ತಿರದಿಂದ ಕಂಡ ಮೊದಲ ಲೇಖಕರು. ಈ ಕಾಲಕ್ಕೆ ಕಥೆ ಕೇವಲ ಮನೋರಂಜನೆಗಾಗಿ ಅಲ್ಲ; ಅದು ಜೀವನದ ವಾಸ್ತವಿಕತೆಯನ್ನು ಪ್ರತಿಬಿಂಬಿಸುವ ಸಾಧನ ಎನ್ನುವ ಪ್ರಜ್ಞೆ ಉಂಟಾಗಿತ್ತು. ಪ್ರೇಮಚಂದರ 'ಕಫನ್' ಕಥೆ ಜಗತ್ತಿನಲ್ಲಿಯ ಅತ್ಯುತ್ತಮ ಕಥೆಗಳಲ್ಲಿ ಒಂದೆಂದು ಪರಿಗಣಿಸಲಾಗಿದೆ. ೧೯೩೫ರ ಹೊತ್ತಿಗೆ ಸಮಾಜದಲ್ಲಿ ಶೀಘ್ರ ಪರಿವರ್ತನೆ ಮತ್ತು ಕ್ರಾಂತಿಯನ್ನು ಬಯಸುವ ಲೇಖಕರಿಂದ 'ಅಂಗಾರೆ' ಕಥಾಸಂಗ್ರಹ ಪ್ರಕಟವಾಯಿತು. ಇದರಲ್ಲಿ ಹತ್ತು ಕಥೆಗಳಿವೆ. ಈ ಸಂಗ್ರಹ ಆ ಕಾಲದಲ್ಲಿ ಕ್ರಾಂತಿಯನ್ನೇ ಉಂಟುಮಾಡಿತು. ೧೯೩೬ರಿಂದ ೧೯೪೭ರವರೆಗಿನ ಅವಧಿಯಲ್ಲಿ ಜಗತ್ತಿನ ಶ್ರೇಷ್ಠ ಕಥೆಗಳೊಂದಿಗೆ ಸರಿದೊರೆಯಾಗಿ ನಿಲ್ಲಬಹುದಾದಂಥ ಕಥೆಗಳ ರಚನೆ ನಡೆಯಿತು. ಕೃಷ್ಣಚಂದರ, ಸಾದತ್ ಹಸನ್ ಮಂಟೋ, ರಾಜೇಂದ್ರಸಿಂಗ್ ಬೇಡಿ, ಕೆ. ಎ. ಅಬ್ಬಾಸ್, ಶ್ರೀಮತಿ ಇಸ್ಮತ್ ಚುಗ್ತಾಯಿ, ಸಲ್ಮಾ ಸಿದ್ದೀಕಿ ಮುಂತಾದವರು ಶ್ರೇಷ್ಠ ಕಥೆಗಳನ್ನು ನೀಡಿದರು. ಪ್ರೇಮಚಂದರ ನಂತರ ಉರ್ದು ಕಥಾಸಾಹಿತ್ಯವನ್ನು ಸಂಪದ್ಭರಿತಗೊಳಿಸಿದವರೆಂದರೆ ಕೃಷ್ಣಚಂದರ. ಅವರು ಉರ್ದು ಕಥಾಸಾಹಿತ್ಯದ ಚಕ್ರವರ್ತಿಯೆಂದೇ ಪ್ರಸಿದ್ಧಿ ಪಡೆದಿದ್ದಾರೆ.



ಈ ಭಾಷೆಯಲ್ಲಿ ಕಾದಂಬರಿ ಪ್ರಕಾರ ಎಂದಿನಿಂದ ಆರಂಭವಾಯಿತೆಂಬುದನ್ನು ಹುಡುಕಲು ಹೊರಟಾಗ ನಮಗೆ ಪ್ರಥಮವಾಗಿ ನಜೀರ್ ಅಹ್ಮದ್ ಅವರ ಕಾದಂಬರಿಗಳು ಗೋಚರಿಸುತ್ತವೆ. ಅವರು ರಾಜಕೀಯ, ಸಾಂಸ್ಕೃತಿಕ, ಬೌದ್ಧಿಕ ಜೀವನವನ್ನು ಬಹು ಹತ್ತಿರದಿಂದ ಕಂಡು, ಅನುಭವಿಸಿ ಜೀವನದೊಂದಿಗೆ ಆಳವಾದ ಸಂವೇದನೆ ಹೊಂದಿ ಸಮರಸಭಾವ ಪಡೆದು ಕಾದಂಬರಿಗಳನ್ನು ಬರೆದರು. ಈ ದೃಷ್ಟಿಯಿಂದ ನಜೀರ್ ಅಹ್ಮದರು ಈ ಭಾಷೆಯ ಪ್ರಥಮ ಕಾದಂಬರಿಕಾರರೆಂದೇ ಹೇಳಬೇಕು. ಮೊದಲ ಸಾಲಿನಲ್ಲಿ ಬರುವ ಇನ್ನೂ ಕೆಲವು ಹೆಸರುಗಳೆಂದರೆ 'ಸರಷಾರ್', 'ಷರರ್'. ಈ ಮಹಾನುಭಾವರು ಉರಿಸಿದ ಬೆಳಕಿನಲ್ಲಿ ಕಾದಂಬರಿ ವ್ಯಾಖ್ಯೆ ಸುಸ್ಪಷ್ಟವಾಗಿ ಅನಂತರ ಬಂದವರಿಗೆ ಗೋಚರಿಸುವಂತಾಯಿತು. ಈ ಬೆಳಕಿನಲ್ಲಿ ಕಾದಂಬರಿ ಸಾಹಿತ್ಯಕ್ಕೆ ಒಂದು ಭದ್ರ ಬುನಾದಿ ಹಾಕಿದವರು - ರಾಷಿದ್ ಅಜೀರಿ, ಸಜ್ಜಾದ್ ಹುಸೇನ್, ಮಹ್ಮದ್ ಅಲೀ ತಬೀಬ ಪ್ರಮುಖರು. ೨೦ನೆಯ ಶತಮಾನದ ಆರಂಭದ ಕಾಲ ಉರ್ದು ಕಾದಂಬರಿಯ ಸುವರ್ಣಕಾಲವೆಂದೇ ಹೇಳಬೇಕು. ಕಥಾಸಾಹಿತ್ಯದಂತೆ ಕಾದಂಬರಿ ಸಾಹಿತ್ಯಕ್ಕೂ ಪ್ರೇಮಚಂದರೇ ಹೊಸ ತಿರುವನ್ನು ಕೊಟ್ಟರು. ಮಾನವನ ಬದುಕಿನ ಒಳತೋಟಿಯನ್ನು ಹೊಕ್ಕು ಪ್ರೇಮಚಂದ ಕಾದಂಬರಿ ಸೃಜಿಸಿದರು. 'ಖಾಲಿಸ್', 'ಬಾಜಾರೆಹುಸ್ನ್', 'ಮೈದಾನ-ಎ-ಅಮಲ್', 'ಗೋದಾನ' ಮುಂತಾದ ಅವರ ಕಾದಂಬರಿಗಳು, ಉರ್ದು ಕಾದಂಬರಿ ಇತಿಹಾಸ ಗುರುತಿಸುವ ಸಾಧನಗಳಾಗಿವೆ. ಪ್ರೇಮಚಂದರ ನಂತರ ಬಂದ ಕಾದಂಬರಿಕಾರರಲ್ಲಿ ಕೃಷ್ಣಚಂದರ ಅವರು ಉರ್ದು ಸಾಹಿತ್ಯದ ತುಂಬ ಮಾತ್ರವಲ್ಲ ಜಗತ್ತಿನ ಹಲವಾರು ಭಾಷಾ ಸಾಹಿತ್ಯದ ಮೇಲೂ ತಮ್ಮ ಪ್ರಭಾವ ಬೀರಿದರು.

ಉರ್ದು ನಾಟಕ ಹಾಗೂ ರಂಗಭೂಮಿಯ ಚರಿತ್ರೆಯನ್ನು ಇನ್ನೂ ಸ್ಪಷ್ಟವಾಗಿ ಕಂಡುಹಿಡಿಯಲಾಗಿಲ್ಲ. ಆದರೂ ನಾಟಕ, ರಂಗಭೂಮಿಗೆ ಅಪಾರ ಸೇವೆ ಸಲ್ಲಿಸಿದವರೆಂದರೆ ಲಖನೌದ ದೊರೆ ವಾಜಿದ್ ಅಲಿ ಷಾಹ ಪ್ರಥಮರು. ಅವರ 'ರಾಧಾಕನ್ಹಯಾ' ನಾಟಕ ಬಹು ಪ್ರಸಿದ್ಧಿ ಪಡೆದ ನಾಟಕ. ಇಮ್ತಿಯಾಜ್ ಅಲಿ ಅವರ 'ಅನಾರ್ಕಲಿ' ನಾಟಕ ೧೯೩೨ ರಲ್ಲಿ ಪ್ರಕಟವಾದಾಗ ಬಹು ದೊಡ್ಡ ಕ್ರಾಂತಿಯನ್ನೇ ಮಾಡಿತು. ಡಾ॥ ನಾಮಿ ಅವರ ಪ್ರಕಾರ ಉರ್ದು ಸಾಹಿತ್ಯದಲ್ಲಿ ೩೨೩ಮಂದಿ ನಾಟಕಕಾರರಿದ್ದಾರೆ. ಕೃಷ್ಣಚಂದರ, ಅಬ್ಬಾಸ್, ಬೇಡಿ, ಅಷ್ಕ್, ಫಜಲ್-ಉಲ್-ರೆಹಮಾನ್, ಬಲವಂತ ಗಾರ್ಗಿ ಮುಂತಾದವರು ನಾಟಕ ರಚಿಸಿದ್ದಾರೆ. ವಿಡಂಬನಾ ಸಾಹಿತ್ಯ ಕೂಡ ಸಾಕಷ್ಟು ಬೆಳೆದಿದೆ. ಅದರಲ್ಲಿ ಕನ್ಹಯ್ಯಲಾಲ ಕಪೂರ, ಕೃಷ್ಣಚಂದರ, ಸಲ್ಮಾ ಸಿದ್ದೀಕಿ ಬಹು ಪ್ರಮುಖರು.

ಇಂಥ ಸಂಪದ್ಭರಿತವಾದ ಉರ್ದು ಸಾಹಿತ್ಯವನ್ನು ಇನ್ನೂ ಹೆಚ್ಚು ಹೆಚ್ಚು ತಮ್ಮ ಅಪೂರ್ವ ಪ್ರತಿಭೆಯಿಂದ, ನಿರಂತರ ಪರಿಶ್ರಮದಿಂದ, ಅತುಲವಾದ ಮಾನವೀಯ ಅನುಕಂಪದಿಂದ ಅಸಂಖ್ಯಾತ ಕೃತಿಗಳನ್ನು ರಚಿಸಿ ಶ್ರೀಮಂತಗೊಳಿಸಿದವರು ಪದ್ಮಭೂಷಣ ಶ್ರೀ ಕೃಷ್ಣಚಂದರ ಅವರು.

ಕೃಷ್ಣಚಂದರ ಚೆಲುವಿನ ಬೀಡಾದ ಕಾಶ್ಮೀರದ ಪೂಂಛದಲ್ಲಿ ೧೯೧೪ರಲ್ಲಿ ಜನ್ಮ ತಾಳಿದರು. ಅವರ ತಂದೆ ಡಾಕ್ಟರ್ ಗೌರೀಶಂಕರ ಅವರು ಕಾಶ್ಮೀರ ಸಂಸ್ಥಾನದ

ಆರೋಗ್ಯ ಇಲಾಖೆಯಲ್ಲಿ ಮೆಡಿಕಲ್ ಆಫೀಸರ್ ಆಗಿದ್ದರು. ಅಂದಿನ ಸಂಸ್ಥಾನದ ಓರ್ವ ಪ್ರಸಿದ್ಧ ಅಧಿಕಾರಿಯ ಮಗನಾಗಿ ಜನಿಸಿದ ಕೃಷ್ಣಚಂದರ ಸುಖದ ಸುಪ್ಪತ್ತಿಗೆಯಲ್ಲಿಯೇ ಬೆಳೆದರೂ ಅಪಾರ ಅಂತಃಕರಣೆ, ದೀನ ದಲಿತರ, ದರಿದ್ರರ ಬಂಧುವಾದದು ಅವರ ಹೆಚ್ಚಳಿಕೆ.

ಅವರ ಒಬ್ಬ ತಮ್ಮ ಮಹೇಂದ್ರನಾಥ ಉರ್ದು ಸಾಹಿತ್ಯದ ಹೆಸರಾಂತ ಕಥೆಗಾರ, ಕಾದಂಬರಿಕಾರ, ಹಿಂದೀ ಫಿಲ್ಮಿನ ನಟ, ನಿರ್ದೇಶಕ, ನಿರ್ಮಾಪಕ, ಕಥಾ ಲೇಖಕನಾಗಿದ್ದು ೧೯೭೪ರ ಮಾರ್ಚ ೨ ರಂದು ಹೃದಯಾಘಾತದಿಂದ ನಿಧನರಾದರು. ಈ ಆಘಾತ ಕೃಷ್ಣಚಂದರನ್ನು ಹಣ್ಣುಗಾಯಿ ನೀರುಗಾಯಿ ಮಾಡಿತು.

ಕೃಷ್ಣಚಂದರ ಕಾಶ್ಮೀರದ ಸುಂದರ ಕೊಳ್ಳಗಳಲ್ಲಿ ತಮ್ಮ ಬಾಲ್ಯವನ್ನು ಕಳೆದರು. ಅಲ್ಲಿಯ ಚೆಲುವನ್ನೆಲ್ಲ ತಮ್ಮ ಕಣ್ಣುಗಳಲ್ಲಿ, ಹೃದಯದಲ್ಲಿ ತುಂಬಿಕೊಂಡು ಲಾಹೋರಕ್ಕೆ ಬಂದರು. ಅಲ್ಲಿಯ ಸುಪ್ರಸಿದ್ಧ ಕ್ರಿಶ್ಚಿಯನ್ ಕಾಲೇಜಿನಲ್ಲಿ ಓದಿದರು. ಇಂಗ್ಲಿಷ್ ಸಾಹಿತ್ಯದಲ್ಲಿ ಎಂ. ಎ. ಪದವಿ ಪಡೆದರು. ಮುಂದೆ ಕಾನೂನು ಪದವಿಯನ್ನು ಸಂಪಾದಿಸಿದರು. ಕೆಲವು ಕಾಲ ಅವರು ಇಂಗ್ಲಿಷ್ ಭಾಷಾ ಸಾಹಿತ್ಯದ ಪ್ರಾಧ್ಯಾಪಕರಾಗಿ ಕೆಲಸ ಮಾಡಿದರು. ವಿದ್ಯಾರ್ಥಿಯಾಗಿರುವಾಗಲೇ ಉರ್ದು ಭಾಷೆಯಲ್ಲಿ ಕಥೆ ಬರೆಯಲಾರಂಭಿಸಿ ಹೆಸರುವಾಸಿ ಯಾಗಿದ್ದರು. ಸಾಹಿತ್ಯವೇ ಅವರ ಜೀವನದ ಉಸಿರಾಗಿತ್ತು. ದಿಲ್ಲಿ ಲಖನೌ ಆಕಾಶವಾಣಿ ಕೇಂದ್ರಗಳಲ್ಲಿದ್ದಾಗ ಅವರು ಸಾಹಿತ್ಯದ ಬಗೆಗೆ ಬಹಳಷ್ಟು ಕಾರ್ಯಮಾಡಿದರು. ಹಿಂದೀ ಫಿಲ್ಮಿಗಾಗಿ ಚಿತ್ರಕಥೆ ಬರೆಯಲೆಂದು ಬಂದವರು ತಮ್ಮ ಜೀವನದ ಕೊನೆಯವರೆಗೂ ಮುಂಬಯಿಯಲ್ಲಿಯೇ ಇದ್ದರು.

ರೊಮ್ಯಾಂಟಿಕ್ ಸಂಪ್ರದಾಯದಲ್ಲಿ, ಭಾಷೆಯ ಲಾಲಿತ್ಯದಲ್ಲಿ, ಜೀವನದ ನಾನಾ ಮುಖಗಳನ್ನು ಕಥೆ, ಕಾದಂಬರಿಯಾಗಿ ಚಿತ್ರಿಸುವಲ್ಲಿ ಕೃಷ್ಣಚಂದರ ಅದ್ವಿತೀಯ ಬರಹಗಾರರಾಗಿದ್ದರು. ಸಮಾಜದ ಆರೋಗ್ಯವನ್ನು ಹಾಳುಮಾಡುವ, ಮನುಷ್ಯರನ್ನು ಮನುಷ್ಯರಿಂದ ಬೇರ್ಪಡಿಸುವ ಗೊಡ್ಡು ಸಂಪ್ರದಾಯ ವನ್ನು, ಶ್ರೀಮಂತವರ್ಗದ ವಿಲಾಸವನ್ನು ತಮ್ಮ ಕಥೆಗಳಲ್ಲಿ ಬಹು ಪ್ರಭಾವಪೂರ್ಣವಾಗಿ, ಪರಿಣಾಮಕಾರಿಯಾಗಿ ಚಿತ್ರಿಸಿದರು. ತೀವ್ರಗತಿಯಲ್ಲಿ ಬದಲಾಗುತ್ತಿರುವ ಕಾಲ ಹಾಗೂ ಅದಕ್ಕೂ ಹೆಚ್ಚಿನ ತೀವ್ರಗತಿಯಲ್ಲಿ ಪರಿವರ್ತನೆ ಗೊಳ್ಳುತ್ತಿರುವ ಕಲೆ, ಇವುಗಳ ಪ್ರತಿಕ್ಷಣವನ್ನೂ ತನ್ನ ಹಿಡಿತದಲ್ಲಿ ಇಟ್ಟುಕೊಂಡ ಬರಹಗಾರರೆಂದರೆ ಕೃಷ್ಣಚಂದರ ರೊಬ್ಬರೇ. ಅವರು ಓರ್ವ ಪ್ರತಿಭಾವಂತ, ಸೃಜನಶೀಲ, ಭಾವುಕ ಕವಿಯ ಮನಸ್ಸನ್ನು ಹಾಗೂ ಚಿತ್ರ ಕಲಾವಿದನ ಕುಂಚವನ್ನು ಪಡೆದಿದ್ದರು. ಅವರ ಮೊದಲ ಕಥೆ 'ಎರಕಾನ್'. ಇಲ್ಲಿ ಬಳಸಲಾದ ತೀವ್ರ ವ್ಯಂಗ್ಯದಿಂದಾಗಿ ಈ ಕಥೆ ಬಹು ಜನಪ್ರಿಯವಾಯಿತು. 'ದೋ ಫರ್ಲಾಂಗ್ ಲಂಬೀ ಸಡಕ್' 'ಹುಸ್ನ್ ಔರ್ ಹೈವಾನಿ', 'ಟೂಟೀ ಹುಯೇ ತಾರೇ', 'ಅನ್ನದಾತಾ', 'ಪೇಶಾವರ ಎಕ್ಸ್‌ಪ್ರೆಸ್', 'ಆಜಾದಿಕೆ ಪಹಲೆ ಅಮೃತಸರ್', 'ಮಹಾಲಕ್ಷ್ಮೀಕೆ ಪೂಲ', 'ಗಾಂಧೀಕಿ ವಾಪಸಿ'ದಂಥ ಅಸಂಖ್ಯಾತ ಶ್ರೇಷ್ಠ ಕಥೆಗಳನ್ನು ನೀಡಿ ಕಥಾಸಾಹಿತ್ಯದ ಚಕ್ರವರ್ತಿ ಯಾಗಿ ಬದುಕಿದರು. ಇವರೆಲ್ಲ ಬರವಣಿಗೆಯ ಮೇಲೆ ಮಾರ್ಕ್ಸ ಮತ್ತು ಲೆನಿನ್ ಪ್ರತಿಪಾದಿಸಿದ ಸಾಮ್ಯವಾದಿ ತತ್ವಗಳ ಪ್ರಭಾವ ಗಾಢವಾಗಿ ಇರುವುದನ್ನು ಕಾಣಬಹುದಾಗಿದೆ.

ಕೃಷ್ಣಚಂದರ ಅವರು ಅಪಾರ ರಾಷ್ಟ್ರಪ್ರೇಮಿ ಗಳಾಗಿದ್ದರು. ಪ್ರೇಮ ಹಾಗೂ ಜೀವನದ ವಾಸ್ತವಿಕತೆಯ ಸುಂದರ ಹೊಂದಾಣಿಕೆ, ಇಂದಿನ ಸಮಾಜದಲ್ಲಿರುವ ಆರ್ಥಿಕ ವಿಷಮತೆ, ಮಾನವನ ಅಂತರಂಗದ ಸೂಕ್ಷ್ಮ ವಿಶ್ಲೇಷಣೆ, ಅನುಕಂಪ – ಕೃಷ್ಣಚಂದರ ಅವರ ಕಥೆಗಳಲ್ಲಿ ಇವೆಲ್ಲ ಹಾಸುಹೊಕ್ಕಾಗಿರುವುದನ್ನು ಕಾಣುತ್ತೇವೆ. ಅವರು ಅಸಾಧಾರಣ ಮಾನವತಾವಾದಿಯಾಗಿದ್ದರು.

೧೯೪೭ರ ದೇಶ ವಿಭಜನೆಯ ಕಾಲದಲ್ಲಿ ಉಂಟಾದ ನರಹತ್ಯಾಕಾಂಡದ ಹಿನ್ನೆಲೆಯಲ್ಲಿ ಕೃಷ್ಣಚಂದರರು ಮೈನಡುಗುವಂಥ ಘಟನೆಗಳನ್ನು ಆಧರಿಸಿ ಕಥೆಗಳನ್ನು ರಚಿಸಿದರು. ಕಥಾಸಾಹಿತ್ಯ ಹಾಗೂ ಕಾದಂಬರೀ ಸಾಹಿತ್ಯ ಎರಡರಲ್ಲೂ ಕೃಷ್ಣಚಂದರರೇ ಅದ್ವಿತೀಯ ಲೇಖಕರಾಗಿದ್ದರೆಂಬುದನ್ನು ನಾವಿಲ್ಲಿ ನೆನೆಯಬೇಕು. ಪ್ರಗತಿಶೀಲ ಸಾಹಿತ್ಯದ ಆರಂಭದ ಕಾಲದಲ್ಲಿ ಹಾಗೂ ಈಗ ಕೂಡ ಉರ್ದು ಕಾದಂಬರೀ ಲೋಕದ ಅನಭಿಷಿಕ್ತ ಚಕ್ರವರ್ತಿಯೆಂದೇ ಅವರನ್ನು ಗೌರವಿಸಲಾಗಿದೆ. ಕೃಷ್ಣಚಂದರ ಕಲ್ಪನೆಯ ಸುರಮ್ಯ ಲೋಕದ ಸೊಗಸು ಹಾಗೂ ವಾಸ್ತವಿಕ ಲೋಕದ ಕಠೋರತೆಯನ್ನು ಸಮರಸಗೊಳಿಸಿದ ಮಹಾನ್ ಕಲಾವಿದ ರಾಗಿದ್ದರು. ಅವರ ಕಾದಂಬರಿಗಳು 'ಆಗ್ ಕಾ ದರಿಯಾ', 'ತೂಫಾನ್‌ಕೀ ಕಲಿಯಾ', 'ಬರ್ಫಕೆಫೂಲ್', ಇತ್ಯಾದಿ.

ಆ ನೂರಾರು ಕಾದಂಬರಿಗಳು ಅವರ ಅಪೂರ್ವ ಸೃಜನಶಕ್ತಿಗೆ, ಅದ್ಭುತ ಪ್ರತಿಭೆಗೆ ಸಾಕ್ಷಿ ನುಡಿಯುತ್ತಲಿವೆ. ಕಥೆ, ಕಾದಂಬರಿ, ನಾಟಕ, ಪ್ರವಾಸ ಸಾಹಿತ್ಯ, ವಿಡಂಬನೆ, ಹಾಸ್ಯ ಬರಹಗಳ ಮುಖಾಂತರ ಸಮಗ್ರ ಐದು ದಶಕಗಳ ಕಾಲ ಉರ್ದು ಸಾಹಿತ್ಯವನ್ನು ಶ್ರೀಮಂತಗೊಳಿಸಿದವರು ಅವರು. ಅವರು ಎಷ್ಟು ದೊಡ್ಡವರಾಗಿದ್ದರೋ ಅಷ್ಟೇ ಸರಳ, ಸಜ್ಜನರಾಗಿದ್ದರು. ಮಗುವಿನಂಥ ನಿರ್ಮಲ ಮನಸ್ಸು ಅವರದಾಗಿತ್ತು. ಇಂಥ ಮಹಾನ್ ಲೇಖಕರನ್ನು ಮೆಚ್ಚಿ ಅವರ ಕೈ ಹಿಡಿದು ಅವರ ಜೀವನ ಸಂಗಾತಿಯಾಗಿ ಬಂದಾಕೆ ಇನ್ನೋರ್ವ ಪ್ರಸಿದ್ಧ ಉರ್ದು ಲೇಖಕಿ ಶ್ರೀಮತಿ ಸಲ್ಮಾ ಸಿದ್ದೀಕಿ.

ಕೃಷ್ಣಚಂದರ ಸಾತ್ವಿಕರಾಗಿದ್ದರು, ಕ್ರಾಂತಿಕಾರಿ ಯಾಗಿದ್ದರು. ಅವರು ತಮ್ಮ ಭಾರತವನ್ನು ಪ್ರೀತಿಸಿದರು. ಭಾರತದ ಮುಖಾಂತರ ಸಮಸ್ತ ಲೋಕವನ್ನೇ ಪ್ರೀತಿಸಿದರು. ಸಮಸ್ತ ಮಾನವಕೋಟಿಯನ್ನೇ ಪ್ರೀತಿಸಿದರು. ಹಲವಾರು ಸಲ ಜಗತ್ತಿನ ತುಂಬ ಸುತ್ತಿದರು. ವಿಶೇಷವಾಗಿ ಅಂದಿನ ಸೋವಿಯತ್ ದೇಶ ಹಾಗೂ ಅಲ್ಲಿಯ ಲೇಖಕ ಬಳಗ ಕೃಷ್ಣಚಂದರರನ್ನು ಅಪಾರವಾಗಿ ಪ್ರೀತಿಸಿತು, ಪ್ರೀತಿಸಿದರು.

ಕೃಷ್ಣಚಂದರರ ಕೃತಿಗಳು ದೇಶ ವಿದೇಶಿ ಭಾಷೆಗಳಲ್ಲಿ ಅನುವಾದಗೊಂಡಿವೆ. ಕೇವಲ ಅಂದಿನ ಸೋವಿಯತ್ ದೇಶವೊಂದರಲ್ಲಿಯೇ ಅವರ ಕೃತಿಗಳ ಹದಿನಾಲ್ಕು ಲಕ್ಷ ಪ್ರತಿಗಳು ಮಾರಾಟವಾಗಿವೆ. ಕೃಷ್ಣಚಂದರರ ಪ್ರಿಯ ಮಿತ್ರರಾಗಿದ್ದ ಕೆ. ಎ. ಅಬ್ಬಾಸ್ ರಶಿಯಾಕ್ಕೆ ಹೋದರು - ಅವರು ಹೋದ ಹೋದಲ್ಲೆಲ್ಲ ಅವರನ್ನು ಅಲ್ಲಿ ಲೇಖಕರು, ಓದುಗರು "ನಮ್ಮ ಕೃಷ್ಣಚಂದರ ಹೇಗಿದ್ದಾರೆ. ಅವರು ಹೊಸದನ್ನು ಏನು ಬರೆಯುತ್ತಿದ್ದಾರೆ. ಅವರಿಗೆ ನಮ್ಮ ಶುಭಾಶಯ ಹೇಳಿ" ಎನ್ನುತ್ತಿದ್ದರಂತೆ. ರಶಿಯಾ ದೇಶದಲ್ಲಿ ಪ್ರೇಮಚಂದರರ ನಂತರ ಅವರಷ್ಟೇ ಪ್ರಸಿದ್ಧಿ ಪಡೆದ ಲೇಖಕ ಕೃಷ್ಣಚಂದರರಾಗಿದ್ದರು. ಇಂಥ ಮಹಾವ್ಯಕ್ತಿಯ ಸಾಮೀಪ್ಯ ನನ್ನ ಭಾಗ್ಯವಾಗಿತ್ತು. ಅವರ ಹಲವಾರು ಕಥೆಗಳನ್ನು, ಕಾದಂಬರಿಗಳನ್ನು ಪ್ರಥಮವಾಗಿ ಉರ್ದು ಭಾಷೆಯಿಂದ ಕನ್ನಡಕ್ಕೆ ಕೊಡುವ ಭಾಗ್ಯವೂ ನನ್ನದಾಗಿತ್ತು. ಅಂತಹ ಮಹಾಪುರುಷ - ನಾನು ಅವರೊಂದಿಗಿದ್ದಾಗಲೆಲ್ಲ ನನ್ನನ್ನು ಬರೀ ಪಂಚಾಕ್ಷರಿ ಎನ್ನದೆ 'ಭಾಯಿ ಪಂಚಾಕ್ಷರಿ' ಎಂದೇ ಸಂಬೋಧಿಸುತ್ತಿದ್ದರು.

ಕೃಷ್ಣಚಂದರ ಈ ದೇಶದ ದಾರಿದ್ರ್ಯ, ಬಡತನ ಕಂಡು, ಇಲ್ಲಿಯ ನಾಯಕರ ಮೋಸ, ವಂಚನೆ ಕಂಡು ತುಂಬ ನೊಂದಿದ್ದರು. ಬಡಬಗ್ಗರಿಗೆ ಆಗುವ ವಂಚನೆ ಕಂಡು ರೊಚ್ಚಿಗೇಳುತ್ತಿದ್ದರು. ಅಪಾರ ಸಂವೇದನಾಶೀಲ ಮನಸ್ಸು ಅವರದು. ಅವರು ೧೯೬೮ರಲ್ಲಿ ಹೃದಯಾ ಘಾತಕ್ಕೆ ತುತ್ತಾದರು. ಕೆಲಕಾಲದ ನಂತರ ಎರಡನೆಯ ಸಲ ಹೃದಯಾಘಾತಕ್ಕೆ ಒಳಗಾದರು. ೧೯೭೭ರ ಮಾರ್ಚ ತಿಂಗಳಲ್ಲಿ ಮತ್ತೊಮ್ಮೆ ಹೃದಯಾಘಾತಕ್ಕೊಳಗಾದರು. ಈ ಸಲ ಅವರು ಎಷ್ಟೋ ಚಿಕಿತ್ಸೆ ಪಡೆದೂ ಉಳಿಯಲಿಲ್ಲ. ಕ್ರೂರ ಸಾವು ಅವರನ್ನು ತನ್ನೊಡಲಲ್ಲಿ ಸೇರಿಸಿಕೊಂಡಿತು. 'ಸಮಕಾಲೀನ ಬರಹಗಾರರೆಲ್ಲರಲ್ಲಿಯೂ ಕೃಷ್ಣಚಂದರ ಜೀವಂತ ಇದ್ದಾರೆ' ಎಂದು ಇನ್ನೋರ್ವ ಪ್ರಸಿದ್ಧ ಉರ್ದು ಕಥೆಗಾರ ರಾಜೇಂದ್ರಸಿಂಗ್ ಬೇಡಿ ಹೇಳಿದ ಮಾತು ಬಹು ಸತ್ಯವಾಗಿದೆ.

ಡಾ॥ ಪಂಚಾಕ್ಷರಿ ಹಿರೇಮಠ
'ಶ್ರೀ ಮೃತ್ಯುಂಜಯ ಕೃಪಾ'
ಜಯನಗರ, ಧಾರವಾಡ - ೫೮೦೦೦೧



ಯೋಗಿ ನೆಡುಮಾರನ್‌ನಿಂದ ದೀಕ್ಷೆ !

**ಮಂ**ಗಳ ಪ್ರಚಾರೋಪನ್ಯಾಸ ಮಾಲಿಕೆಯ ಪುಸ್ತಕಗಳಲ್ಲಿ ಒಂದಾದ ಚಂದ್ರಕಲಾ ನಂದಾವರರವರ 'ಕಯ್ಯಾರರ ಕಾವ್ಯ' ಪುಸ್ತಕವು ಲೇಖಕಿ ತಿಳಿಸಿದಂತೆ ಕಯ್ಯಾರರ ಕಾವ್ಯದ ಬಗ್ಗೆ ಪರಿಚಯ ನೀಡುವುದೇ ಹೊರತು ಅವರ ಕಾವ್ಯದ ಕುರಿತು ವಿಮರ್ಶೆ ಮಾಡಿಲ್ಲ.

''ಐಕ್ಯವೊಂದೇ ಮಂತ್ರ ಐಕ್ಯದಿಂದ ಸ್ವತಂತ್ರ'', ಖ್ಯಾತಿಯ ಕವಿ, ೬೬ನೇ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ, ಕನ್ನಡದ ಹಿರಿಯ ಕವಿ, ಕಯ್ಯಾರರ ಬಗ್ಗೆ ಬರೆದ ಈ ಪುಸ್ತಕವು ಉಪಯುಕ್ತವಾದ ಓದು ಎಂಬುದರಲ್ಲಿ ಸಂಶಯವಿಲ್ಲ.

ಲೇಖಕಿ ಕಾವ್ಯದ ಬಗ್ಗೆ ಪರಿಚಯ ನೀಡುತ್ತ ಕಯ್ಯಾರರ ಬಗ್ಗೆ ಪುಟ್ಟ ಪರಿಚಯವನ್ನು ನಮ್ಮ ಮುಂದಿಟ್ಟಿದ್ದಾರೆ. ಇದರಿಂದ ಈ ಪುಸ್ತಕದ ಮೌಲ್ಯ ಹೆಚ್ಚಾಗಿದೆ ಎಂದೆನ್ನಬಹುದು. ಮಾತ್ರವಲ್ಲದೆ ನಂದಾವರರವರು ಲೇಖನದ ನಡುನಡುವೆ ಕವನದ ತುಣುಕುಗಳನ್ನು ನೀಡಿರುವುದರಿಂದ ಇಲ್ಲೊಂದು ಪುಟ್ಟ ಕವನ ಸಂಕಲನವಿದೆ ಎಂದರೆ ತಪ್ಪಾಗಲಾರದು.

ಕಯ್ಯಾರರ ಬಗ್ಗೆ ಪ್ರಶಂಸೆಯ ಮಾತನ್ನು ಹೇಳುತ್ತ ಒಂದೊಂದು ಕವಿತೆಯ ಗುಣಮಟ್ಟವನ್ನು ತಿಳಿಸುತ್ತಾರೆ. 'ಸ್ವಗತ' ಕಾವ್ಯದ ಬಗ್ಗೆ ಹೇಳುತ್ತ ತುಳು-ಕನ್ನಡ ಭಾಷೆಗಳ ಬಾಂಧವ್ಯ, ತುಳುನಾಡಿನ ವರ್ಣನೆ, ತುಳು ಸಂಸ್ಕೃತಿಯ ವರ್ಣನೆ, ತನ್ನ ಹಿರಿಯರ ಪರಿಚಯ, ತನ್ನ ಬಾಲ್ಯದ ವಿವರ, ಕನ್ನಡ ಸಂಸ್ಕೃತ ಮಲೆಯಾಳಗಳ ಋಣಭಾರ, ಸ್ವಾತಂತ್ರ್ಯ ಹೋರಾಟದ ಕಾಲದ ಯೌವನ, ತನ್ನ ಕಾವ್ಯ ಕೃಷಿ, ಪತ್ರಕರ್ತನ ವೃತ್ತಿ, ತನ್ನ ಬದುಕಿನ ಧೋರಣೆ, 'ನಾಡು ನುಡಿಗಳಿವೆರಡೆ ನನ್ನೆದೆಯನರಳಿಸಿವೆ' ಎಂದು ಹೇಳುತ್ತಾರೆ. ಕಯ್ಯಾರರ ಕಾವ್ಯದ ಪ್ರತಿಯೊಂದು ಅಂಶದ ಬಗೆಗೂ ಅದರ ಹಿನ್ನೆಲೆ ನೀಡುತ್ತಿರುವುದರಿಂದ ಕಯ್ಯಾರರ ಕಾವ್ಯದ ಬಗ್ಗೆ ನಮಗೆ ಹೆಚ್ಚು ತಿಳುವಳಿಕೆ ಮೂಡುತ್ತದೆ.

೧೯೪೯ರಲ್ಲಿ ಪ್ರಕಟವಾದ ಐಕ್ಯಗಾನವೆಂಬ ಎರಡನೇ ಕವನ-ಸಂಕಲನದ ಬಗ್ಗೆ ''ಈ ಕವನ ಸಂಕಲನದಲ್ಲಿ ಸ್ವಾತಂತ್ರ್ಯ ಹೋರಾಟದ ತ್ಯಾಗ ಬಲಿದಾನಗಳ ಬಗೆಗಿನ ಶ್ರದ್ಧೆ ಗೌರವದ ಜತೆಗೆ ದೇಶ ವಿಭಜನೆಯ ಬಗೆಗಿನ




ಪುಟಗಳು : ೯೮ ಬೆಲೆ : ರೂ. ೧೫
ಪ್ರಸಾರಾಂಗ, ಮಂಗಳೂರು ವಿಶ್ವವಿದ್ಯಾನಿಲಯ
ಮಂಗಳ ಗಂಗೋತ್ರಿ - ೫೭೪ ೧೯೯, ದ.ಕ.

ದುಃಖ, ಅಸಹನೆ, ರೋಷಗಳ ಪುನರಾವರ್ತನೆ ಕವಿತೆಯಲ್ಲಿ ಅಡಗಿದೆ'' ಎನ್ನುತ್ತಾರೆ. ಕಯ್ಯಾರರ ೩ನೇ ಕವನ ಸಂಕಲನದ ಬಳಿಕ ೪ನೇ ಕವನ ಸಂಕಲನ 'ಚೇತನ' ಜನ್ಮತಾಳಿದ್ದು. ೧೯೭೦ರಲ್ಲಿ ಪ್ರಕಟವಾದ ಆ ಸಂಕಲನದ ಬಗ್ಗೆ ಕವಿಯವರ ಮಾತನ್ನೇ ಉಲ್ಲೇಖಿಸುತ್ತಾ, 'ಶಿಲೆಯಲ್ಲಿ ಶಿಲ್ಪವನ್ನೂ' ಮಣ್ಣಿನಲ್ಲಿ ಸ್ವರ್ಣವನ್ನೂ ಅಣುವಿನಲ್ಲಿ ಮಹತ್ತನ್ನೂ, ಆತ್ಮನಲ್ಲಿ ಪರಮಾತ್ಮನನ್ನೂ ದರ್ಶಿಸುವ ಚೇತನದ ದಿವ್ಯಾನುಭವದ ಸ್ಫೂರ್ತಿಯಿಂದ ಕವಿ ಹಾಡುತ್ತಾನೆ. ಹಾಡಿನಲ್ಲಿ ಚೈತನ್ಯ ತುಂಬಿ ಬರಬೇಕೆಂದೂ ಜೀವನ ಹಾಡಿನಿಂದ ಚೈತನ್ಯಮಯವಾಗಬೇಕೆಂದೂ ಕವಿಯ ಹಾರೈಕೆ. ಎಂಥಾ ಮಾತು ಎಂದು ಗಮನಿಸಿ. ಇದೇ ಸಂಕಲನದ 'ಭಾಗವತ' ಕವಿತೆ ಇಡೀ ಯಕ್ಷಗಾನದ ತಂಡದ ಬಗ್ಗೆ ಕವಿಯ ವಿವರಣೆಯನ್ನೊಳಗೊಂಡಿದೆ.

ಬಳಿಕದ ಸಂಕಲನವಾದ 'ಕೊರಗ' ದ ಬಗ್ಗೆ: ಈ ಸಂಕಲನಕ್ಕೆ **ಕೊರಗ** ಎನ್ನುವ ನಾಮಕರಣಕ್ಕೆ ಕವಿ ತನ್ನ ಅಭಿಪ್ರಾಯ ತಿಳಿಸುತ್ತಾ ''ಅಭಾಗ್ಯ ಹೀನರ ಜನರ ಕುರಿತು ಚಿಂತಿಸುವ ಅವಕಾಶ ನನಗೆ ಲಭಿಸಿತು. ಅದೇ ಲಹರಿಯಲ್ಲಿ ಕವಿತೆಯೊಂದನ್ನು ಬರೆದೆ. ಖಿಲವಾಗುತ್ತಿರುವ ಆ ಮುಗ್ಧ ಜನಾಂಗದ ಕುರುಹು ನನ್ನೀ ಕವಿತೆಯ ರೂಪದಲ್ಲಾದರೂ ಉಳಿಯಲಿ ಎಂಬ ಸದಾಶಯದಿಂದಲೂ ಅವರ ಕುರಿತು ಸಹಾನುಭೂತಿಯಿಂದಲೂ ಈ ಕವನ ಸಂಕಲನಕ್ಕೆ ಈ ಹೆಸರು ಇಟ್ಟಿದ್ದೇನೆ,'' ಎನ್ನುತ್ತಾರೆ.

ಬಳಿಕ 'ಗಂಧವತಿ,' ಆಯ್ದ ಕವನ ಸಂಕಲನ. ಇಲ್ಲಿನ ಕವನಗಳ ಬಗ್ಗೆ ಲೇಖಕಿಯ ಮೆಚ್ಚುಗೆಯಂತೆ ನನಗೂ ಮೆಚ್ಚುಗೆಯಾಗಿದೆ. ಇಲ್ಲೊಂದರ ಕವನದಲ್ಲಿ ಕವಿ ಅದ್ವೈತ ನಿಲುವನ್ನು ತೋರಿಸುತ್ತಾರೆ. ಶಿಶುಗೀತೆಗಳ ಬಗೆಗೂ ಲೇಖಕಿ ಬರೆಯುತ್ತಾರೆ. ಈ ಗೀತೆಗಳು ಮಕ್ಕಳ ಮನದಲ್ಲಿ ಪಂಜೆ, ಕುವೆಂಪು, ಕಾರಂತರ ಕವನಗಳಂತೆ ನೆಲೆ ಊರುತ್ತವೆ. ಕಯ್ಯಾರರ ಕಾವ್ಯ ತುಣುಕಿದು :

**ಕೋ ಕೋಕೋ ಕೋಳಿ**<br>
ಬೆಳಗಾಯಿತು ಏಳಿ<br>
ಬಕ್-ಬೌ ನಾಯಿ<br>
ಸಾಕು ಮುಚ್ಚು ಬಾಯಿ, ಇತ್ಯಾದಿ.

ಈ ರೀತಿ ನಂದಾವರರವರು ರೈಗಳ ಸ್ವಂತ ಕಾವ್ಯದ ಬಗ್ಗೆ ಮಾತ್ರವಲ್ಲದೆ ಅವರು ಅನುವಾದಿಸಿದ ಕವನಗಳ ಬಗ್ಗೆ ಸಹ ಹೇಳುತ್ತಾರೆ. ಇಲ್ಲಿ ಪ್ರತಿಯೊಂದು ಕಾವ್ಯದ ಪೂರ್ವವನ್ನೂ ತಿಳಿಸುತ್ತಾರೆ. ಈ ರೀತಿ ನಂದಾವರರವರು ಹಿನ್ನೆಲೆ ಒದಗಿಸುವುದರಿಂದ ಕಯ್ಯಾರರು ನಮಗೆ ಹತ್ತಿರವಾಗುವುದರಲ್ಲಿ ಸಂಶಯವಿಲ್ಲ.

ಪುಸ್ತಕದ ಕೊನೆಯಲ್ಲಿ ಕವಿ ಕಯ್ಯಾರ ಕಿಞ್ಞಣ್ಣ ರೈಯವರ ಬಗ್ಗೆ ಬರೆಯುತ್ತಾ ಅವರು ಗಂಭೀರ ಕವಿ, ಇವರ ಕಾವ್ಯ ಭಾಷೆ ಗಂಭೀರ ಭಾಷೆ, ಪಂಡಿತ ಭಾಷೆ, ಅಂದಮಾತ್ರಕ್ಕೆ ಅದು ಕಬ್ಬಿಣದ ಕಡಲೆ ಅಲ್ಲ ; ಕಡ್ಡಾಯವಾಗಿ ಪ್ರಾಸಕ್ಕೆ ಕಟ್ಟು ಬೀಳದೆ ಈ ನವೋದಯ ಕವಿಯ ಸ್ವಚ್ಛಂದತೆಯಲ್ಲಿ ಬರುವ ಸಹಜ ಪ್ರಾಸವೇ ಅವರ ಕಾವ್ಯ ಶಕ್ತಿಯ ಗೆಲುವು ಎನ್ನುತ್ತಾರೆ. ರೈಗಳ ಕಾವ್ಯ ಎಲ್ಲ ವರ್ಗದ ಜನರಿಗೂ ಎಲ್ಲ ವಯಸ್ಸಿನ ಜನರಿಗೂ ಮೆಚ್ಚುಗೆಯಾಗುವ ಕಾವ್ಯ ಎಂದು ಹೇಳಬೇಕಾಗಿಲ್ಲ.

ಈ ಪುಸ್ತಕದ ಬಗ್ಗೆ ಮೆಚ್ಚುಗೆ ಸೂಚಿಸುತ್ತಿರುವಂತೆ ಮಂಗಳ ಗಂಗೋತ್ರಿ ಪ್ರಸಾರಾಂಗದ ಸಾಧನೆಯನ್ನು ಮೆಚ್ಚಬೇಕು. ಈ ಪುಸ್ತಕದ ಆಕಾರ ಚಿಕ್ಕದಾದರೂ ಅದರೊಳಗಿನ ವಿಷಯ ಮಹತ್ತರವಾದದ್ದು. ಅದೇ ರೀತಿ ಕನ್ನಡದ ಪುಸ್ತಕ ಕೊಳ್ಳಲು ಕನ್ನಡಿಗ ಹೆದರುವ ಈ ಕಾಲದಲ್ಲಿ ನಾವು ಯೋಚಿಸಿದ್ದಕ್ಕಿಂತ ಕಡಿಮೆ ಬೆಲೆಯಲ್ಲಿ ಪುಸ್ತಕ ನೀಡಿದ, ನೀಡುವ ಮಂಗಳೂರು ವಿಶ್ವವಿದ್ಯಾನಿಲಯದ ಸಾಧನೆಯನ್ನು ಮೆಚ್ಚಬೇಕು, ಹೆಮ್ಮೆ ಪಡಬೇಕು.

ನೀವು ಈ ಪುಸ್ತಕವನ್ನು ಓದುವಿರಿ ತಾನೆ !

**ಎ. ಆರ್. ಸಾಲಿಯಾನ್**
ಆನೆಗುಂಡಿ ಮನೆ, ಕೈರಂಗಳ ಅಂಚೆ - ೫೭೪ ೧೫೩,
ಬಂಟ್ವಾಳ ತಾಲ್ಲೂಕು, ದಕ್ಷಿಣ ಕರ್ನಾಟಕ

*(೩೬ನೇ ಪುಟದಿಂದ)*

ಯಾವುದೇ ಭಾವುಕ-ಭ್ರಾಮಕ ವೈಭವೀಕರಣ ಬೇಕಿಲ್ಲ. ಸೋऽಹಂ - ತನ್ನನ್ನು ಅರಿಯುವ ಜ್ಞಾನ. ಅಂದರೆ ಅಹಂಕಾರ ಅಥವಾ ಕತ್ತಲನ್ನು ಕಳೆದು ಮೋಕ್ಷ (ಮುಕ್ತಿ)ವನ್ನು ಪಡೆಯುವಿಕೆ. ಅದೇ ರೀತಿ ತನ್ಮಯವೆಂದರೆ ತನ್ನ ಬಗ್ಗೆ ಚಿಂತಿಸುವುದು. ಇದು ಯಥಾರ್ಥವೆ. ತಪಸ್ಸು ಸಹ ತನ್ನನ್ನು ಅಂತರ್ ಮುಖಿಗೊಳಿಸಿಕೊಳ್ಳುವ ಮಾಧ್ಯಮ. ಅದೆಲ್ಲವೂ ಶರೀರ ಧರ್ಮದ ಹೊರತಲ್ಲ. ಇಷ್ಟನ್ನು ಧ್ಯಾನ-ತಪ-ಯೋಗಗಳಲ್ಲಿ ಅರ್ಥೈಸಿ ತಿಳಿಸಬೇಕೇ ವಿನಃ ಅಂದಿನ ರಾಜಾಶ್ರಯದ ಬಹುಪರಾಕು ಪ್ರವೃತ್ತಿಯ ಹೊಗಳು ಭಟ್ಟರ ಕಾಯಕ ಮಾಡಬೇಕಿಲ್ಲ. ರಾಜರನ್ನು ಒಲೈಸಲು 'ಅಲ್ಲಾಹೋಪನಿಷತ್' 'ವಿಕ್ರಮಾರ್ಜುನ ವಿಜಯ' ಕೃತಿಗಳನ್ನು ರಚಿಸಿ ರಾಜನನ್ನೇ ಅಲ್ಲಾ, ಅರ್ಜುನರನ್ನಾಗಿಸುವ ವೈಭವೀಕರಣ ಯಾ ದೈವೀಕರಣ, ಮುಗ್ಧ ಅಮಾಯಕ ಮನಸ್ಸುಗಳನ್ನು ಮೋಸಗೊಳಿಸುವ ಪರಿಯಾಗುತ್ತದೆ.

**ಸಂ** : ಮಠಮಾನ್ಯಗಳ ಸ್ಥಾಪನೆ ತಮ್ಮ ಮತ ಅಥವಾ ಧರ್ಮ ಪ್ರಚಾರವಾದರೆ ನಿಮ್ಮ ಆಶ್ರಮ ಸ್ಥಾಪನೆಯ ಉದ್ದೇಶ ?

**ಸ್ವಾಮಿ** : ಯಥಾರ್ಥತೆಯನ್ನು ಜನರಿಗೆ ಮನನ ಮಾಡಿಸುವುದು. ತನ್ನನ್ನು ತಾನು ಅರಿಯಲು ಅನುವುಮಾಡಿ ಕೊಡುವುದು. ಮನೋದೃಢತೆಯ ಜೊತೆಗೆ ದೇಹ ದಾರ್ಢ್ಯತೆಗಾಗಿ, ದೇಹಾಲಸ್ಯ ನೀಗಿಸಲು ಕೆಲವು ಔಷಧೋಪಚಾರ ಮಾಡುವ ಆರೋಗ್ಯ ಸೇವೆ. ಅಂದರೆ ಯಥಾರ್ಥ ಆಧಾರಿತ ಆಧ್ಯಾತ್ಮಿಕತೆ ಮತ್ತು ಆರೋಗ್ಯಸೇವೆ ನಮ್ಮ ಆಶ್ರಮದ ಉದ್ದೇಶಗಳು.

**ವೆಂಕಟಯ್ಯ ಅಪ್ಪಗೆರೆ**
೧೭/ಇ. ವೆಂಕಟೇಶ್ವರ ನಿಲಯ,
೧೮ನೇ ವಾರ್ಡ್, ಗಾಂಧಿನಗರ, ಮಾರ್ಕೆಟ್ ಹತ್ತಿರ
ಎರ್ರಿತಾತ ಕಾಲೋನಿ, ಬಳ್ಳಾರಿ - ೫೮೩೧೦೩

## ಬಾಲ ಕಾರ್ಮಿಕರ ಮುಕ್ತಿ ಎಂದು ?



*ಇದೊಂದು ನೈಜಚಿತ್ರ. ತುರುವೇಕೆರೆ ತಾಲ್ಲೂಕಿನ ಅಮ್ಮಸಂದ್ರ ಸಿಮೆಂಟ್ ಕಾರ್ಖಾನೆ ಸುತ್ತಲಿದ್ದ ನೀಲಗಿರಿ ಮರಗಳನ್ನು ಕಡಿಯಲು ನಿಯುಕ್ತರಾಗಿದ್ದವರಲ್ಲಿ ಈ ಬಾಲಕರೂ ಸೇರಿದ್ದಾರೆ.*

ಚಿತ್ರ : ದಂಡಿನಶಿವರ ತಿಮ್ಮೇಗೌಡ

## ಮೋಜಿನ ಮದುವೆ

ಅಜ್ಜನ ಮದುವೆಗೆ ಐವತ್ತು
ವರ್ಷಗಳಾಗಲೆ ತುಂಬಿತ್ತು !
ನೆನಪಿನ ಸಡಗರ ನಡೆದಿತ್ತು
ಖೇಲ ಗರ್ದಿ ಗಮ್ಮತ್ತು !!

ಅಜ್ಜಗೆ ಆಗಳೆ ಅರವತ್ತು
ಅಜ್ಜಗೆ ಕೇವಲ ಎಪ್ಪತ್ತು
ಅವರದೆ ಮದುವೆ ನಡೆದಿತ್ತು
ಖೇಲ ಗರ್ದಿ ಗಮ್ಮತ್ತು !!

ಅಜ್ಜನ ತಲೆ ಬೋಳಾಗಿತ್ತು
ನುಣ್ಣಗೆ ಮಿರಿಮಿರಿ ಮಿಂಚಿತ್ತು
ಬಾಯಲಿ ಹಲ್ಲಿನ ಸೆಟ್ಟಿತ್ತು
ಖೇಲ ಗರ್ದಿ ಗಮ್ಮತ್ತು !!

ಅಜ್ಜಿಯ ತಲೆಯು ನಡುಗಿತ್ತು
ಹಂಜಿ ಪುಟ್ಟಿ ಆಗಿತ್ತು
ಬಚ್ಚ ಬಾಯಲಿ ನಕ್ಕಿತ್ತು
ಖೇಲ ಗರ್ದಿ ಗಮ್ಮತ್ತು !!

ಚಿಣ್ಣರ ನಿಬ್ಬಣ ನೆರೆದಿತ್ತು
ಚಕಚಕ ಸುರಿಗೆ ಸುತ್ತಿತ್ತು
ಅಕ್ಷತೆ ಹಾಕಿ ಕುಣಿದಿತ್ತು
ಖೇಲ ಗರ್ದಿಗಮ್ಮತ್ತು !!



ಅಜ್ಜಿಯು ಕುಲುಕುಲು ನಕ್ಕಿತ್ತು
ಅಜ್ಜನ ಬದಿಯಲಿ ಕುಳಿತಿತ್ತು
ಮೋಜಿನ ಮದುವೆ ನಡೆದಿತ್ತು
ಖೇಲ ಗರ್ದಿ ಗಮ್ಮತ್ತು !!

ಕಂಬ್ಯಾಣಿ ಶರಣಪ್ಪ
೨೯, ಗಣೇಶ ನಗರ, ವಿಜಾಪುರ - ೫೮೬ ೧೦೨

## ಸೂಫಿ ಕತೆ

**ವ್ಯಾಕರಣ ಪಂಡಿತ ಮತ್ತು ದರವೇಶಿ**

ಬತ್ತಿಹೋಗಿದ್ದ ಬಾವಿಯೊಂದಿತ್ತು. ಒಂದು ರಾತ್ರಿ ದಾರಿಹೋಕ ದರವೇಶಿಯೊಬ್ಬನು ಅದರ ಸಮೀಪ ನಡೆದುಬರುತ್ತಿದ್ದ. ಬಾವಿಯೊಳಗಿಂದ ಯಾರೋ ಸಹಾಯಕ್ಕಾಗಿ ಅಂಗಲಾಚುತ್ತಿರುವ ದನಿ ಕೇಳಿಬಂತು. 'ಯಾರದು' ? ಎಂದು ಕೂಗಿದ.

'ನಾನು, ವ್ಯಾಕರಣ ಪಂಡಿತ. ದಾರಿ ಗೊತ್ತಾಗಲಿಲ್ಲ. ದುರಾದೃಷ್ಟ ಒಳಗಿದ್ದೀನಿ. ಮೇಲಕ್ಕೆ ಹತ್ತಲು ಆಗುತ್ತಿಲ್ಲ' - ಬಾವಿಯೊಳಗಿಂದ ಉತ್ತರ ಬಂದಿತು.

' ಇರು ಸ್ವಲ್ಪ. ಏಣೀನೂ ಹಗ್ಗಾನೂ ತರ್‍ತೀನಿ ನಾನು' ಎಂದು ಹೇಳಿದ ದರವೇಶಿ.

'ದಯಮಾಡಿ ಸ್ವಲ್ಪ ಕೇಳು. ನಿನ್ನ ವಾಕ್ಯದಲ್ಲಿ ಪದಬಳಕೆಯೂ ಸರಿಯಾಗಿಲ್ಲ, ವ್ಯಾಕರಣಾನೂ ಶುದ್ಧವಾಗಿಲ್ಲ. ಮೊದಲು ಸರಿಪಡಿಸಿಕೋ ಮಾರಾಯ' ಎಂದ ಬಾವಿಯೊಳಗಿದ್ದ ಮನುಷ್ಯ.

'ಆಗಬೇಕಾಗಿರೋದು - ಕೆಲಸ. ಅದಕ್ಕಿಂತ ವ್ಯಾಕರಣ, ಭಾಷೆ ಮುಖ್ಯ ಅಂತಿದ್ದೀಯಾ ನೀನು. ಒಳ್ಳೆಯದು, ಇವೆಲ್ಲಾನೂ ನಾನು ಕಲಿತುಕೊಂಡು ಬರ್‍ತೀನಿ. ಅಲ್ಲಿಯವರೆಗೂ ನೀನು ಇಲ್ಲೇ ಇರು' ಎಂದು ಹೇಳಿದ ದರವೇಶಿಯು ದಾರಿಹಿಡಿದು ಹೊರಟುಹೋದ.

*ಜಲಾಲುದ್ದೀನ್ ರೂಮಿ* — *ಕನ್ನಡಕ್ಕೆ - ಗಂಗಾಧರ ಮೂರ್ತಿ*

### ಡಿಸೆಂಬರ್ ೨೦೦೦ ದ 'ಹೊಸತು ಪದಹೊಸೆತ'ದ ಸರಿಯುತ್ತರ

| | | | | | | | | |
|---|---|---|---|---|---|---|---|---|
| | ಸ | ನಾ | ದಿ | | ಕಂ | ದ | ಕ | |
| ಹಾ | ರ | | ನ | ವಾ | ಬ | | ಲ | ವ |
| ನಿ | ಕಾ | | | ಚಾ | | | ರ | ಜಾ |
| | ರ | ಜ | ತ | ಮ | ಹೋ | ತ್ಸ | ವ | |
| ಬಾ | | | ಲ | ಗೋ | ರಿ | | | ನಿ |
| ಗ | ಟ್ಟ | ಗ | | ಚ | | ಆ | ತ್ಮ | ಜ |
| ಲ | | ತ | ವ | ರ | ತಾ | ಮ್ರ | | ಲಿಂ |
| ಕೋ | ಟಿ | | ಲ್ಲ | | ಕೀ | | ನಾ | ಗ |
| ಟಿ | ಸ್ಲಾ | | ವ | ರಾ | ತು | | ಕ | ಪ್ಪ |

# ವಾರಣಾಸಿಯಲ್ಲಿ ನಂದಿಯ ಪಕ್ಕದಲ್ಲಿ ಕುಳಿತ ಪಂಡ

ಪಾರ್ಥ

ಕಾಶಿಯಲ್ಲಿ ಅನಾದಿ ಕಾಲದಿಂದ ಶ್ರೀ ವಿಶ್ವನಾಥನ ದೇವಸ್ಥಾನವಿತ್ತು. ಕಾಶಿ ರೋಮಿಗಿಂತ ಪುರಾತನ ನಗರವೆಂಬ ತಿಳಿವಳಿಕೆಯುಂಟು. ಆ ದೇವಸ್ಥಾನವನ್ನು ಔರಂಗಜೇಬ ಸ್ವಾಧೀನಪಡಿಸಿಕೊಂಡು, ಅದರ ಗೋಡೆಯನ್ನೇ ಆಧಾರವಾಗಿಸಿ ಮಸೀದಿ ಕಟ್ಟಿಸಿದನಂತೆ. ಉತ್ತರ ಪ್ರದೇಶದಲ್ಲಿ ''ಔರಂಗಜೇಬ''ನೆಂಬ ಪದ ಮುಸ್ಲಿಮನೆಂಬುದಕ್ಕೆ ಪರ್ಯಾಯವಾಗಿ ಬಳಕೆಗೆ ಪದೇ ಪದೇ ಬರುತ್ತದೆ ಎಂಬುದು ಒಂದಿಷ್ಟು ಸುತ್ತಿ ಬಂದರೆ ತಿಳಿಯುತ್ತದೆ. ಮುಂಚೆ ಇತ್ತೆಂಬ ವಿಶ್ವನಾಥನ ಮಂದಿರದ, ಅಂದರೆ ಇಂದಿನ ಮಸೀದಿಯ ಮುಂದೆ ಈ ನಂದಿ ಇದೆ. ಹಳೆಯ ದೇವಸ್ಥಾನದ ಲಿಂಗವನ್ನು ಅಲ್ಲಿಯ ಬಾವಿಯಲ್ಲಿ ಎಸೆದಿದ್ದನಂತೆ. ಮುಂದೆ ಅದಾರಿಗೋ ಕನಸು ಬಿದ್ದು..... ಇತ್ಯಾದಿ ಇಂಥ ಕಥೆಗಳು ಚಿರಪರಿಚಿತ. ಚಾರಿತ್ರಿಕವಾಗಿ, ಅಹಲ್ಯಾಬಾಯಿ ಹೋಳ್ಕರ್ ಇಂದಿನ ಕಾಶಿಯ ದೇವಸ್ಥಾನ ಕಟ್ಟಿಸಿದಳು. ಅವಳೇಕೆ ಇದೇ ನಂದಿಯನ್ನು ಪುನಃ ಪ್ರತಿಷ್ಠಾಪಿಸಲಿಲ್ಲ ಹೊಸ ದೇವಸ್ಥಾನದ ಮುಂದೆ? ಅವಳೇಕೆ ಮಸೀದಿಯನ್ನು ಒಡೆಸಿಹಾಕಲಿಲ್ಲ? ಔರಂಗಜೇಬನೇ ಯಾಕೆ ಈ ನಂದಿಯನ್ನು ಒಡೆದುಹಾಕಲಿಲ್ಲ? ಅದೇ ಬಾವಿಗೆ ಬಿಸಾಕಲಿಲ್ಲ? ಇನ್ನೊಂದು ವಿಷಯ: ವಿಗ್ರಹ ಭೇದಕರಾರೂ ಬಾವಿಗೆ ಹಾಕುವುದಿಲ್ಲ. ಅವರು ಒಡೆದುಹಾಕುತ್ತಾರೆ. ಪೂಜಾರಿಗಳೇ ಆಗಿದ್ದರೆ ಅದನ್ನು ಬಾವಿಗೆ ಹಾಕುತ್ತಾರೆ. ಎಂದಾದರೂ ಪುನಃ ಪ್ರತಿಷ್ಠಾಪಿಸಲು ಬೇಕಾಗುತ್ತೆ ಅಂತ. ಇದೇ ನಂದಿ ಆ ನಂದಿಯೂ ಆಗಿದ್ದರೆ ಅದನ್ನು ರಕ್ಷಿಸುತ್ತಿದ್ದರೋ ಏನೋ? ಚರಿತ್ರೆಯ ಘಟನೆ, ಅದರ ಕರಾರುವಾಕ್ಕು ವಿಷಯ ಪ್ರಸ್ತುತ ಲೇಖನದ ವಿಷಯ ಅಲ್ಲ. ಎಲ್ಲ ಸಾಧಾರಣರಂತೆ ಯಾತ್ರೆ ಹೋದಾಗ ಕಂಡಿದ್ದು ಕೇಳಿದ್ದು ಹೇಳಿಕೊಳ್ಳುವುದಷ್ಟೆ.



ಅಹಲ್ಯಾಬಾಯಿ ಕಾಲದವರಿಗೆ ಮಸೀದಿ ಒಡೆಯುವ ತಾಕತ್ತು ಇರಲಿಲ್ಲವೆ? ಅವರಿಗೆ ಅದು ಅಗತ್ಯವೆನಿಸಲಿಲ್ಲವೆ? ಅಂದಿನ ಮುಸ್ಲಿಮರೂ ಹಿಂದೂಗಳೂ ಒಂದು ಒಮ್ಮತಕ್ಕೆ ಬಂದಿದ್ದು, ಈ ನಾಲ್ಕಾರು ಶತಮಾನ ಸಹಜೀವನದ ಒಂದು ಒಡಂಬಡಿಕೆ ಆಗಿತ್ತೆ? ಇಂದಂತೂ ಈ ನಂದಿಯ ಮುಂದೆ ಮಸೀದಿ ಇದೆ. ಅದರ ಗೋಡೆ ಹಳೆಯ ದೇವಸ್ಥಾನದ್ದೆ. ಅದರ ಸುತ್ತ ಕಬ್ಬಿಣದ ಸರಳುಗಳ, ಎತ್ತರದ ಕೋಟೆಯ, ಬಹು ಸಂಖ್ಯೆಯ ಪೊಲೀಸರ ರಕ್ಷಣೆಯಿದೆ. ಇದು ಬಾಬರೀ ಪ್ರಸಂಗದಿಂದ ಈಚಿನ ಬೆಳವಣಿಗೆ. ಮುಸ್ಲಿಮರು ಒಂದು ಚಿಕ್ಕ ಗೇಟಿನ ಮೂಲಕ ಪ್ರವೇಶಿಸಬಹುದು. ಮಸೀದಿಯನ್ನು ರಕ್ಷಿಸುವ ಸರ್ಕಾರದ ಈ ಕಳಕಳಿ ಕಂಡರೆ ಟಿಪ್ಪೂಸುಲ್ತಾನ ಖಂಡೇರಾಯನನ್ನು ಗಿಣಿಯಂತೆ ಪಂಜರದಲ್ಲಿಟ್ಟು ಪ್ರೀತಿಯಿಂದ ಸಾಕಿದ ಕತೆ ನೆನಪಿಗೆ ಬರುತ್ತದೆ. ಅಂತೂ ನಾನೂರು ವರ್ಷಕ್ಕೂ ಹಿಂದಿನ ಕಹಿ ಪ್ರಸಂಗವನ್ನು ಮರೆಯದಂತೆ ಉಳಿಸಿ ಬೆಳೆಸುವ ಛಲದ ದರ್ಶನವಾಗುತ್ತದೆ.

ಒಮ್ಮೆ ಮಸೀದಿ ಕಟ್ಟಿಬಿಟ್ಟರೆ ಆ ಸ್ಥಳ ದೇವಸ್ಥಾನದ ಪುನರ್‌ಸ್ಥಾಪನೆಗೆ ಅಶುಚಿಯಾಗುತ್ತದೆ. ಅದಕ್ಕೆಂದೇ ಅಹಲ್ಯಾಬಾಯಿ ಕಾಲದವರು ಮಸೀದಿಯ ಮಗ್ಗುಲಿನ ಬೇರೆ ಸ್ಥಳದಲ್ಲಿ ಹೊಸ ದೇವಸ್ಥಾನ ಕಟ್ಟಿರಬಹುದು. ಆದರೆ ಇಂದಿನ ಬಾಬರೀ ಧ್ವಂಸಕರು ಅಂಥ 'ಅಪವಿತ್ರ' ಸ್ಥಳದಲ್ಲೇ ದೇವಸ್ಥಾನ ಕಟ್ಟಬೇಕೆಂಬ ಪಟ್ಟುಹಿಡಿದಿರುವುದು ಕಾಲ ಮಹಿಮೆ. ಹಳೆಯ ಬೆಂಗಳೂರಿನ ಹೊರಾಂಗಣದ ಸ್ಮಶಾನಗಳೆಲ್ಲಾ ಇಂದು ವಾಸಸ್ಥಳವಾಗಿರುವ ಹಾಗೆ !

ಇಂದಿನ ವಿಶ್ವನಾಥ ಮಂದಿರದ ಅಮೃತ ಶಿಲೆಯ ಲಿಂಗ ಪುರಾತನವಲ್ಲ. ರೋಮಿನಷ್ಟು ಪುರಾತನ ಕಾಶಿಯಲ್ಲಿ 'ಲಿಂಗ' ನಮಗೆ ಇಂದು ತಿಳಿದಿರುವ ಸ್ವರೂಪದಲ್ಲಿ ಇದ್ದಿರುವುದು ಸಾಧ್ಯವಿಲ್ಲವೆನಿಸುತ್ತದೆ. ಅತಿ ಪುರಾತನ ಕೇದಾರದಲ್ಲೂ, ಬದರಿಯಲ್ಲೂ, ಗಯೆಯ ವಿಷ್ಣುಪಾದದಲ್ಲೂ ಬುದ್ಧನ ಮೂರ್ತಿಗಳು ಇದ್ದಿದ್ದು, ಅವುಗಳನ್ನು ತೆಗೆದಮೇಲೆ ಉಳಿದಿರುವ ಕಲ್ಲುಪಾರೆಯೇ ಈಗ ದೈವವಾಗಿ ಉಳಿದಿರ ಬೇಕಾದರೆ, ಪುರಾತನ ವಿಶ್ವನಾಥ ಲಿಂಗಸ್ವರೂಪದಲ್ಲಿದ್ದನೇ ಎಂಬ ಸಂದೇಹವೂ ಬರುತ್ತದೆ.

ಪ್ರಸ್ತುತ ಈ ನಂದಿಯ ಮಗ್ಗುಲಲ್ಲಿ ಕುಳಿತ ಕೊಳಕು ಪಂಡ, ನಿರಂತರ ಒಂದು ಬದಿಗೆ ಎಲೆ ಅಡಿಕೆ ಗಾಂಜಾ ರಸ ಉಗುಳುತ್ತಾ, ಭಕ್ತರಿಗೆ ಮತ್ತೊಂದು ಕೈಯಲ್ಲಿ ತೀರ್ಥ, ಅದರೊಂದಿಗೇ ಹಿಂದೂ ಮುಸ್ಲಿಂ ದ್ವೇಷದ ಪ್ರಸಾದವನ್ನೂ ವಿನಿಯೋಗಿಸುತ್ತಾ ಇರುವ ನೋಟ ಬಹಳ ವಿಶೇಷವಾದುದು. ತಾವು ಭಜಿಸುವ ದೇವರ ಪರಿಸರ ಹೊಲಸು ಮಾಡುವ ಈ ಭಂಡ ಪಂಡಾಗಳಿಂದ ಆ ವಿಶ್ವನಾಥನಿಗೆ ಎಂದು ಬಿಡುಗಡೆಯೋ?

ಗಾಂಧೀಜಿ ತಮ್ಮ ಆತ್ಮಕಥೆಯಲ್ಲಿ ಕಳೆದ ಶತಮಾನದ ಆದಿಯಲ್ಲಿ ಬರೆದಿರುವ ಕಾಶಿಯ ಅಸಹ್ಯ ಚಿತ್ರ ಒಂದಿಷ್ಟೂ ವ್ಯತ್ಯಾಸವಾಗಿಲ್ಲ. ಮೊದಲ ಭೇಟಿ ಮೂವ್ವತ್ತೈದು ವರ್ಷಗಳ ಹಿಂದೆ. ಮತ್ತೆರಡು ಬಾರಿ ನೋಡಿ ಬಂದಿದ್ದೇನೆ. ಬಿಜೆಪಿ, ಆರ್‌ಎಸ್‌ಎಸ್‌ನ ಅಧಿಕಾರದಲ್ಲೂ ಇದು ಬದಲಾಗಿಲ್ಲ! ಕಾಶಿಯ ಈ ಸುತ್ತಣ ಪರಿಸರ ನಿಂತ, ಕೊಳಚೆಯ ಗುಂಡಿ. ಕಾಲದ ಭಿತ್ತಿಯಲ್ಲಿ ಭಾರತದ ಧರ್ಮಮೂಲ ಹೀಗೆ ಘನೀಭೂತವಾಗಿರುವ ಈ ಚಿತ್ರವನ್ನು ಗಮನಿಸಿದಾಗ, ಹಿಂದೂ ಧರ್ಮದಲ್ಲಿ ಅಚಲ ವಿಶ್ವಾಸ ಉಳ್ಳ ಧರ್ಮಭೀರುವಿಗೂ ಆಗುವುದು ದಾರುಣ ಸಂಕಟವೇ.

ಆ ಪಂಡನನ್ನು ಆ ನಂದಿಯ ಪಕ್ಕದಿಂದ ಎಳಿಸದಿದ್ದರೆ ಅದರ ಪರಿಸರ ಶುಚಿ ಆಗುವುದಿಲ್ಲ. ನೂರಾರು ವರ್ಷದ ಹಲವಾರು ಪಂಡರ ಉಗುಳು ನೆಲಕಚ್ಚಿಬಿಟ್ಟಿದೆ ಅಲ್ಲಿ. ಶ್ರೀ ವಿಶ್ವನಾಥನಿಗೆ ವಿಶಾಲವಾದ ಹೊಸ ಸ್ಥಳದಲ್ಲಿ, ಮರಗಿಡಗಳ ಸೊಂಪಿನ ನಡುವೆ ಸುಂದರ ದೇವಸ್ಥಾನ ಒಂದನ್ನು ಕಟ್ಟಿಸಲು ಮತ್ತೊಬ್ಬ ಅಹಲ್ಯಾಬಾಯಿಗೆ ಕಾಯಬೇಕೆ ?

□□□



# ಶಿವರಾತ್ರಿಯ ಒಳಗುಟ್ಟು

ಡಾ॥ ಬಿ. ಎಸ್. ಶೈಲಜಾ

*೧೯೯೯ರ ಡಿಸೆಂಬರ್‌ನ ಹುಣ್ಣಿಮೆಯ ಚಂದ್ರ ಅತಿ ಸಮೀಪದ, ಅತಿ ಪ್ರಕಾಶಮಾನವಾದ ಚಂದ್ರ, ಎಂದು ಆಗ ಕೆಲವರು ಗುಲ್ಲೆಬ್ಬಿಸಿದ್ದುದು ನೆನಪಿರಬೇಕು. ಚಂದ್ರ ಹುಣ್ಣಿಮೆಯಂದು ಪುರಭೂ ಎಂದರೆ ಭೂಮಿಗೆ ಕನಿಷ್ಠ ದೂರದ ಬಿಂದುವಿನಲ್ಲಿ ಇದ್ದುದೇ ಅದಕ್ಕೆ ಕಾರಣ. ೨೦೦೦ದ ಜನವರಿ ೯ರಂದು ಗ್ರಹಣವಿತ್ತು. ಅಂದು ಗ್ರಹಣಕ್ಕೆ ಮುಂಚೆ ಚಂದ್ರನನ್ನು ನೋಡಿದ್ದವರಿಗೆ ಏನಾದರೂ ಹೆಚ್ಚು ಪ್ರಕಾಶ ಕಂಡಿತ್ತೆ ? ಏಕೆಂದರೆ ಆ ದಿನವೂ ಚಂದ್ರ ಪುರಭೂ ಎಂಬ ಬಿಂದುವಿನಲ್ಲೇ ಇದ್ದಿತ್ತು. ಬರಿಗಣ್ಣಿಗೆ ಹುಣ್ಣಿಮೆಗಳ ವ್ಯತ್ಯಾಸ ತಿಳಿಯುವುದಿಲ್ಲ ಎಂದು ಈಗ ಸ್ಪಷ್ಟವಾಯಿತಲ್ಲವೇ ?*

ಫೆಬ್ರವರಿ ತಿಂಗಳಿನ ಆಕಾಶ ಶುಭ್ರವಾಗಿ, ನಕ್ಷತ್ರಗಳ ಪರಿಚಯಾಸಕ್ತರಿಗೆ ಒಳ್ಳೆಯ ಗ್ರಾಸ ಒದಗಿಸುತ್ತದೆ. ಸಂಜೆ ಸೂರ್ಯ ಮುಳುಗುತ್ತಿದ್ದ ಹಾಗೆಯೇ ಪಶ್ಚಿಮದಲ್ಲಿ ಬೆಳ್ಳಿ (ಶುಕ್ರ ಗ್ರಹ) ಕೋರೈಸುತ್ತದೆ. ನೆತ್ತಿಯ ಮೇಲೆ, ವೃಷಭರಾಶಿಯಲ್ಲಿ ಗುರು ಪ್ರಕಾಶಮಾನವಾಗಿ ಬೆಳಗುತ್ತಿದ್ದರೆ, ಅದರ ಅಕ್ಕಪಕ್ಕದಲ್ಲಿಯೇ ಶನಿಗ್ರಹ, ರೋಹಿಣಿ ನಕ್ಷತ್ರ, ಕೃತ್ತಿಕಾ ನಕ್ಷತ್ರಗುಚ್ಛ ಇವೂ ಕಾಣುತ್ತವೆ. ಕಳೆದೆರಡು ಮೂರು ತಿಂಗಳುಗಳಿಂದ ಇವನ್ನು ಗಮನಿಸುತ್ತಾ ಬಂದವರಿಗೆ ಗ್ರಹಗಳ ಚಲನೆಯ ಸ್ಪಷ್ಟ ಅರಿವು ಈಗಾಗಲೇ ಆಗಿರಬೇಕು.

ಪೂರ್ವಕ್ಕೆ ತಿರುಗಿದಲ್ಲಿ ಸಿರಿಯಸ್ (ಲುಬ್ಧಕ) ದರ್ಶನ - ಪಶ್ಚಿಮದ ಶುಕ್ರದೊಡನೆ ಪ್ರಕಾಶದಲ್ಲಿ ಸ್ಪರ್ಧೆ ನಡೆಸುತ್ತಿರುವಂತೆ ಕಾಣುತ್ತದೆ. ದಕ್ಷಿಣದಲ್ಲಿ ಕನೋಪಸ್ (ಅಗಸ್ತ್ಯ) ಮಿಂಚುತ್ತದೆ. ರಾಶಿಚಕ್ರದ ಪರಿಚಯ ಮಾಡಿಕೊಳ್ಳಲು ಪ್ರಯತ್ನಿಸೋಣ. ಪಶ್ಚಿಮದ ಅಂಚಿನಲ್ಲಿರುವ ಕುಂಭರಾಶಿಯನ್ನು ಗುರುತಿಸಲು ಎರಡು ಅಡಚಣೆಗಳಿವೆ. ಅದರಲ್ಲಿಯ ನಕ್ಷತ್ರಗಳೇ ಕ್ಷೀಣ. ಜೊತೆಗೆ ಪ್ರಕಾಶಮಾನವಾದ ಸಂಧ್ಯಾಪ್ರಕಾಶ. ಮುಂದಿನ ಮೀನರಾಶಿಯಲ್ಲಿ ಶುಕ್ರ ಇರುವುದರಿಂದ ಗುರುತಿಸುವುದು ಸುಲಭ. ಪಕ್ಕದ (ಉತ್ತರದ) ಚೌಕಾಕಾರವೇ ಪೆಗಸಸ್ (ನಕುಲ). ಮೇಲೇರಿದಂತೆ ಕಾಣುವ ತ್ರಿಕೋಣ (ಕ್ಷೀಣವಾದದ್ದು) ಮೇಷ. ನೆತ್ತಿಯ ಮೇಲೆ ವೃಷಭ. ಅದರ ದಕ್ಷಿಣಕ್ಕೆ ಪ್ರಕಾಶಮಾನವಾದ ಒರೈಯನ್ (ಮಹಾವ್ಯಾಧ); ಉತ್ತರಕ್ಕೆ ಪಂಚಕೋಣಾಕೃತಿಯ ಆರಿಗ (ವಿಜಯಸಾರಥಿ). ನೆತ್ತಿಯಿಂದ ಪೂರ್ವಕ್ಕೆ ಮಿಥುನ; ಪೂರ್ವದಿಗಂತದ ಅಂಚಿನಲ್ಲಿ ಸಿಂಹ ಉದಯಿಸುತ್ತಿರುತ್ತದೆ. ಚಂದ್ರನಿಲ್ಲದ ಸಂಜೆಯಲ್ಲಿ, ಮಿಥುನ ಮತ್ತು ಸಿಂಹಗಳ ನಡುವಿನ ಕ್ಷೀಣವಾದ ಕಟಕರಾಶಿಯನ್ನು ಕಾಣಬಹುದು.

ಫೆಬ್ರವರಿ ೧ ಮತ್ತು ೨ರಂದು ಚಂದ್ರ ವೃಷಭರಾಶಿಯನ್ನು ಹಾದುಹೋಗುವಾಗ ಗುರು, ಶನಿ, ರೋಹಿಣಿ ಮತ್ತು ಕೃತ್ತಿಕಾಗಳೊಡನೆ ಗುಂಪುಗೂಡುವ ದೃಶ್ಯ ಛಾಯಾಗ್ರಾಹಕರಿಗೆ ಒಳ್ಳೆಯ ಅವಕಾಶ ಒದಗಿಸುತ್ತದೆ. ೮ರಂದು ಹುಣ್ಣಿಮೆಯಂದು ಚಂದ್ರ, ಮಘಾ ನಕ್ಷತ್ರದಿಂದ ೧ ಡಿಗ್ರಿಯಷ್ಟು ದೂರದಲ್ಲಿರುತ್ತದೆ. ಮಾಘಮಾಸ ಎಂಬುದು ಈ ತಿಂಗಳ ಹೆಸರು. ಫೆಬ್ರವರಿ ೧೫-೧೬ರ ಬೆಳಗಿನ ಝಾವ ಚಂದ್ರನನ್ನು ವೃಶ್ಚಿಕರಾಶಿಯಲ್ಲಿ ನೋಡಬಹುದು. ಆಗ ಅದರ ಸಮೀಪದಲ್ಲೇ ಇರುವ ಕೆಂಪು ಗ್ರಹ ಮಂಗಳ, ಕೆಂಪು ನಕ್ಷತ್ರ ಜ್ಯೇಷ್ಠಾ ಇವುಗಳನ್ನು ಗುರುತಿಸಬಹುದು. ಬೆಳಗಿನ ಝಾವ ಮುಂಚೆ ಏಳುವ ಅಭ್ಯಾಸ ಇರುವವರಿಗೆ ದಿನೇದಿನೇ ಕೃಶಾಂಗನಾಗುವ ಚಂದ್ರನ ನೋಟ ಹೊಸತೇನಲ್ಲ. ಇಪ್ಪತ್ತರ ಬೆಳಿಗ್ಗೆ ತೀರಾ ಸಣ್ಣ ಗೆರೆಯಂತಿರುವ ಚಂದ್ರನನ್ನು ಹುಡುಕಬಲ್ಲಿರಾದರೆ ಅದೊಂದು ಸಾಹಸವೇ. ಅದರ ಸಮೀಪವೇ ಬುಧ ಗ್ರಹವನ್ನು ಕಾಣಬಹುದು.

೨೧ರಂದು ಮಹಾಶಿವರಾತ್ರಿ. ಈ ಆಚರಣೆಯ ಸಂಪ್ರದಾಯದ ಬಗ್ಗೆ ಪ್ರಖ್ಯಾತ ಖಗೋಳಜ್ಞ ಉಸ್ಮಾನಿಯ ವಿಶ್ವವಿದ್ಯಾನಿಲಯದ ಪ್ರೊಫೆಸರ್ ಕೃಷ್ಣ ಅಭ್ಯಂಕರ್ ಅವರು ಹೊಂಬೆಳಕು ಚೆಲ್ಲಿದ್ದಾರೆ. ಅಮಾವಾಸ್ಯೆಯನ್ನು ನಿರ್ಧರಿಸಲು ಸೂರ್ಯನ ಸ್ಥಾನವನ್ನು ಗುರುತುಮಾಡಬೇಕಷ್ಟೆ? ೨೭ ನಕ್ಷತ್ರಗಳ ಪದ್ಧತಿಯನ್ನು ಅನುಸರಿಸುತ್ತಿದ್ದಾಗ, ಅಂದರೆ ಸುಮಾರು ೩೦೦೦ ವರ್ಷಗಳಷ್ಟು ಹಿಂದೆ, ಈ ಕಾರ್ಯಕ್ಕಾಗಿ ಅಮಾವಾಸ್ಯೆಯ ಹಿಂದಿನ ಮತ್ತು ಮುಂದಿನ ದಿನಗಳಲ್ಲಿ ಚಂದ್ರನ ಸ್ಥಾನವನ್ನು ಗುರುತಿಸುವುದು ಅತಿ ಅವಶ್ಯಕವಾಗಿತ್ತು. ಆದರೆ ಈ ಎರಡೂ ದಿನಗಳಲ್ಲಿ ಚಂದ್ರನನ್ನು ಕಾಣುವುದು ಅತಿ ಕಷ್ಟ. ತೆಳ್ಳನೆಯ ಗೆರೆಯಂತಿರುವ ಚಂದ್ರ; ಅದರ ಪ್ರಕಾಶವೂ ಅತಿ ಕಡಿಮೆ; ಅಲ್ಲದೆ ಅದು ಕಾಣಬಹುದಾದ ಪ್ರದೇಶದಲ್ಲಿ (ಅಮಾವಾಸ್ಯೆಯ ಹಿಂದಿನ ದಿನ ಬೆಳಗಿನ ಝಾವ ಪೂರ್ವದಲ್ಲಿ ; ಮರುದಿನ ಸಂಜೆ ಪಶ್ಚಿಮದಲ್ಲಿ ) ಸಂಧ್ಯಾಪ್ರಕಾಶವೇ ಸಾಕಷ್ಟು ಪ್ರಕಾಶಮಾನವಾಗಿರುತ್ತದೆ. ಆದ್ದರಿಂದ ಈ ವೀಕ್ಷಣೆಯನ್ನು ಇನ್ನೂ ಹಿಂದಿನ ಮತ್ತು ಮುಂದಿನ ದಿನಗಳಾದ ತ್ರಯೋದಶಿ ಮತ್ತು ಬಿದಿಗೆಗಳಂದು ಮಾಡುತ್ತಿದ್ದರು ; ತನ್ಮೂಲಕ ಸೂರ್ಯನ ಸ್ಥಾನವನ್ನು ಅಂದಾಜು ಮಾಡುತ್ತಿದ್ದರು. ಹೀಗೆ ಕೃಷ್ಣಪಕ್ಷದ ತ್ರಯೋದಶಿಯ ಬೆಳಗಿನ ಝಾವ ಪ್ರಾಮುಖ್ಯತೆ ಪಡೆಯಿತು. ಬ್ರಹ್ಮಾಂಡದ ವಿಶ್ವರೂಪವನ್ನು ರಾತ್ರಿ ಇಡೀ ವೀಕ್ಷಿಸಿದವನಿಗೆ ಅದು ದೈವಸ್ವರೂಪಿಯಾಗಿ ಸಾಕ್ಷಾತ್ಕಾರವಾಗಿರಬಹುದು. ಬಾಲಚಂದ್ರನ ಉದಯ, ಶಿವನ ಮುಡಿಯನ್ನೇ ನೆನಪಿಗೆ ತಂದಿದ್ದಿರಬಹುದು. ಹಾಗಾಗಿ ಅದು ಶಿವರಾತ್ರಿ ಎಂದಾಯಿತು ಅಥವಾ ತನ್ನ ಮನಸ್ಸಿನ ಅದ್ಭುತ ಅನುಭವವನ್ನು ವಿವರಿಸಲು ಬ್ರಹ್ಮಾಂಡವನ್ನೇ ಶಿವ ಎಂದು ಕರೆದು ಮುಡಿಯಲ್ಲಿ ಚಂದ್ರನನ್ನು ಇರಿಸಿರಲೂಬಹುದು.

ಪ್ರೊಫೆಸರ್ ಅಭ್ಯಂಕರ್ ಅವರು ಲೆಕ್ಕವನ್ನು ಮುಂದುವರೆಸಿ (ಹಿಂದುವರೆಸಿ ?) ಕ್ರಿ. ಪೂ. ೩೦೦೦ ದಲ್ಲಿ ಮಾಘ ಶಿವರಾತ್ರಿ ಉತ್ತರಾಯಣದ ದಿನವೇ ಆಗಿದ್ದಿರಬಹುದು ಎಂದು ಸೂಚಿಸಿದ್ದಾರೆ. (ಈಗ ಉತ್ತರಾಯಣ ಡಿಸೆಂಬರ್ ೨೨ರಂದು ನಡೆಯುತ್ತದೆ). ಅಧಿಕಮಾಸ, ಕ್ಷಯಮಾಸಗಳನ್ನು ಗೊತ್ತುಮಾಡಲು ಈ ವೀಕ್ಷಣೆ ಅತಿ ಮುಖ್ಯ ಎಂಬುದನ್ನು ತಿಳಿಸಿದ್ದಾರೆ.

ಇದು ಪ್ರತಿ ತಿಂಗಳ ಕೃಷ್ಣಪಕ್ಷ ತ್ರಯೋದಶಿಗೂ ಅನ್ವಯಿಸುತ್ತದೆ. ಹಾಗಾದರೆ ''ಮಹಾ'' ಎಂಬ ಪದ ಏಕೆ ಅಂಟಿಕೊಂಡಿತು ? ಉಚ್ಚಾರಣೆಯ ಹೋಲಿಕೆಯಿಂದ ಬಹುಶಃ ಇದು ''ಮಾಘ ಶಿವರಾತ್ರಿ'' ಇದ್ದಿರಬಹುದು ಎಂದು ನನ್ನ ಅನಿಸಿಕೆ. ಯುಗಾದಿಯ ದಿನ ನಿರ್ಣಯಕ್ಕೆ ಇದರ ವೀಕ್ಷಣೆ ಅತಿ ಅವಶ್ಯಕ. ಅಷ್ಟೇ ಅಲ್ಲ ಎಲ್ಲ ಶಿವರಾತ್ರಿಗಳಿಗಿಂತ ಇದು ಅತಿ ದೀರ್ಘವಾದ ರಾತ್ರಿ. ಚಳಿಯೂ ಇರುವಂತಹುದೇ. ಆದ್ದರಿಂದ ''ಶಿವಶಿವಾ'' ಎಂದು ಕಟಕಟ ಹಲ್ಲು ಕಡಿಯುತ್ತ ನಡುಗುತ್ತಾ ಬಟ್ಟ ಬಯಲಲ್ಲಿ ನಕ್ಷತ್ರದ ನೆರಳಿನಲ್ಲಿ ಕುಳಿತುಕೊಂಡಾತ, ಇದಕ್ಕೆ ''ಮಹಾ'' ಎಂಬ ವಿಶೇಷಣ ಸೇರಿಸಿದ್ದರೂ ಆಶ್ಚರ್ಯವೇನಲ್ಲ.

*　*　*

### ಒಂದು ಪತ್ರ

**ಪ್ರೀತಿಯ ಡಾ॥ ಬಿ. ಎಸ್. ಶೈಲಜಾರವರೇ, ತಮಗೆ ಪ್ರಣಾಮಗಳು.**

ತಮ್ಮ ವೈಜ್ಞಾನಿಕ ಲೇಖನ ''ಗ್ರಹಗಳಿಂದ ನಕ್ಷತ್ರಗಳ ಪರಿಚಯ''ವನ್ನು ನವೆಂಬರ್ ತಿಂಗಳ ''ಹೊಸತು''ವಿನಲ್ಲಿ ಓದಿದೆ. ಜ್ಯೋತಿಷ್ಯ ಶಾಸ್ತ್ರದಲ್ಲಿ ಆಸಕ್ತಿಯಿರುವ ನನಗೆ, ನಿಮ್ಮ ಲೇಖನದಿಂದ ಹಲವು ಮಾಹಿತಿಗಳು ಲಭ್ಯವಾದುವು. ತುಂಬಾ ಉಪಕಾರವಾಯಿತು.

ನಿಮ್ಮ ಲೇಖನದಲ್ಲಿ ಬಂದ ವಿಷಯದಲ್ಲಿ ನನಗೊಂದು ಅಭಿಪ್ರಾಯವನ್ನು ಇಲ್ಲಿ ತಿಳಿಸಲು ಇಚ್ಛಿಸುತ್ತೇನೆ.

ಏನೆಂದರೆ, ಪಾಶ್ಚಾತ್ಯರ ಪ್ರಭಾವದಿಂದ ಅಕ್ವೇರಿಯಸ್ ಎಂಬ ಪದ ಬಳಕೆಗೆ ಬಂತು. ಕುಂಭ ಎಂದು ಸಂಸ್ಕೃತಕ್ಕೆ ಪದಶಃ ತರ್ಜುಮೆಯಾಯಿತು ಎಂದು ಕಾಣಿಸಿದ್ದೀರಿ.

ಅದಕ್ಕಿಂತ ಮೇಲಿನ ಪಂಕ್ತಿಗಳಲ್ಲಿ ಜನವರಿ-ಫೆಬ್ರವರಿ ತಿಂಗಳಲ್ಲಿ ಬ್ಯಾಬಿಲೋನಿಯಾದಲ್ಲಿ ಮಳೆಗಾಲ...... ಭಾರತದ ವಾಯುಗುಣಕ್ಕೆ ಇದು ಹೊಂದುವುದಿಲ್ಲ.....

ನೋಡಿ, ನಮ್ಮ ತುಳು ಜಾನಪದದಲ್ಲಿ ಒಂದು ಗಾದೆ ಮಾತಿದೆ. ''ಮಾಯಿಡ್ದ್ ಅರ್ದೊ ಮರ್ಕಲೊ, ಆಟಿಡ್ದ್ ಅರ್ದೊ ಅರೆಗ್ಗಲೊ'' ಅಂದರೆ ಕುಂಭ (ಮಾಯಿ) ತಿಂಗಳ ಅರ್ಧದಿಂದ ಮಳೆಗಾಲ ಆರಂಭಿಸುತ್ತದೆ, ಆಟಿ (ಕರ್ಕಾಟಕ) ತಿಂಗಳ ಅರ್ಧದಿಂದ ಬೇಸಿಗೆ ಕಾಲ ಆರಂಭಿಸುತ್ತದೆ ಎಂದು ಅರ್ಥ. ಇದು ತುಳುನಾಡಿನ (ಹೆಚ್ಚಿನ ಪಕ್ಷ ಭಾರತದ) ಬಹುಪೂರ್ವ ಕಾಲದ ಪ್ರಾಕೃತಿಕ ಕಾಲಗತಿಯನ್ನು ನೆನಪಿಸುತ್ತದೆ. ಅಲ್ಲವೇ ? ನಮ್ಮಲ್ಲಿ, ಯುಗ ಆರಂಭವಾಗುವುದು ಎಂದರೆ, ಮಳೆಗಾಲ ಆರಂಭವಾಗುವುದು ಎಂದೇ ಅರ್ಥ. ದ್ವಾಪರ ಯುಗಾದಿಯನ್ನು ನಾವು ಆಚರಿಸದಿದ್ದರೂ, ಅದನ್ನೂ ಪಂಚಾಂಗದಲ್ಲಿ ಬರೆದಿರುತ್ತಾರೆ. ಈ ದ್ವಾಪರ ಯುಗಾದಿಯೂ ಕುಂಭ ತಿಂಗಳಲ್ಲಿಯೇ ಸಂಭವಿಸುತ್ತದೆ.

ನಮ್ಮಲ್ಲಿ ಆದ ಅನುಭವಗಳು ಪಾಶ್ಚಾತ್ಯರಿಗೂ ಆಗಿರಬಹುದು. ಹಾಗೆಂದು, ನಮ್ಮ ಪ್ರಭಾವ ಅವರಿಗಾಗಿದೆಯೆಂದೋ ಅಥವಾ ಅವರ ಪ್ರಭಾವ ನಮಗಾಗಿದೆ ಎಂದೋ ಸಿದ್ಧಾಂತೀಕರಿಸುವುದು ತಪ್ಪು ಎಂದು ನನ್ನ ಅಭಿಪ್ರಾಯ. ಸೌರಮಾನ ಪಂಚಾಂಗ ಪದ್ಧತಿಯು ಭಾರತದ ಅತ್ಯಂತ ಹಳೆಯ ಪದ್ಧತಿ ಎಂದು ನನ್ನ ಅನಿಸಿಕೆ. ಚಾಂದ್ರಮಾನ ಪದ್ಧತಿಯು ಮೂಲತಃ ವಲಸೆ ಬಂದ ಆರ್ಯರದ್ದಾಗಿರಬಹುದು (ಆರ್ಯರು ಮಧ್ಯ ಏಷಿಯಾದಿಂದ ಬಂದವರೆಂಬ ಅಭಿಪ್ರಾಯವಿದೆಯಲ್ಲವೇ). ವೇದಗಳಲ್ಲಿ ಚಾಂದ್ರಮಾನ ಪಂಚಾಂಗ ಪದ್ಧತಿಗೆ ಬೇಕಾದ ಆಧಾರಗಳಿವೆ. ಆದರೆ, ಸೌರಮಾನ ಪದ್ಧತಿಯು ಭಾರತದಲ್ಲಿ ತುಳುವರೆಡೆಯಲ್ಲಿ, ಕೇರಳದಲ್ಲಿ, ಬಂಗಾಳದಲ್ಲಿ, ಅದೇ ರೀತಿ ಭಾರತದ ಪೂರ್ವ - ಈಶಾನ್ಯದ ಪ್ರದೇಶಗಳಲ್ಲಿ ಮಾತ್ರ ಉಳಿದುಬಂದಿದೆ. ನಮ್ಮ ಸೌರಮಾನ ಪಂಚಾಂಗ ಪದ್ಧತಿಯ ಪ್ರಭಾವದಿಂದ ಈಗಿನ ಇಂಗ್ಲಿಷ್ ಕ್ರಮವು ಬಂದಿದೆ ಎಂಬುದಕ್ಕೆ ಪುರಾವೆ ಇಲ್ಲ.

ಡಾ॥ ಶೈಲಜಾರವರೇ, ಈ ಬಗ್ಗೆ ನಾವು ಆಳವಾಗಿ ಅಧ್ಯಯನ ಮಾಡಬೇಕಾಗಿದೆ. ತಮ್ಮ ಲೇಖನ ಓದಿದಾಗ, ಬರೆಯಬೇಕೆನಿಸಿತು, ಅಷ್ಟೆ.

ಆದೂರು **- ಕೇಶವ ಶೆಟ್ಟಿ, ಕೆ.**

**ಶ್ರೀ ಕೇಶವ ಶೆಟ್ಟಿ, ಆದೂರು, ಕಾಸರಗೋಡು – ಇವರ ಪತ್ರಕ್ಕೆ ಉತ್ತರ**

ಮೇಷ, ವೃಷಭ..... ಇತ್ಯಾದಿ ಹೆಸರುಗಳು ಪಾಶ್ಚಾತ್ಯರಿಂದ ಬಂದವು ಎಂಬ ಅಂಶ ತಮ್ಮ ಗಮನ ಸೆಳೆದಿದೆ. ಈ ಬಗೆಯ ಜ್ಞಾನ ವಿನಿಮಯ ಸುಮಾರು ಎರಡು ಸಾವಿರ ವರ್ಷಗಳಷ್ಟು ಹಿಂದೆಯೇ ನಡೆದಿರಬಹುದು. ಡಾ॥ ಎಸ್. ಬಾಲಚಂದ್ರರಾವ್ ಅವರ ಜ್ಯೋತಿಷ್ಯ ಮತ್ತು ಗಣಿತದ ಇತಿಹಾಸ ಕುರಿತ ಪುಸ್ತಕಗಳಲ್ಲಿ ಈ ಅಂಶ ಸ್ಪಷ್ಟವಾಗಿದೆ. ೫ನೆಯ ಶತಮಾನದ ಆರ್ಯಭಟ, ನಂತರದ ವರಾಹಮಿಹಿರ ಇವರುಗಳೂ ರಾಶಿಗಳ ಹೆಸರನ್ನು ಬಳಸಿದ್ದಾರೆ. ''ಯವನ''ರನ್ನು ಹೊಗಳಿದ್ದಾರೆ. ಈ ತಿಂಗಳ ನಭಾವಲೋಕನದಲ್ಲಿ ಸೂಚಿಸಿದಂತೆ ೨೭ ನಕ್ಷತ್ರಗಳ ಚಾಂದ್ರಮಾನ ಪದ್ಧತಿ ಸುಮಾರು ೩,೦೦೦ ವರ್ಷಗಳಷ್ಟು ಹಳೆಯದು. ಆರ್ಯರು, ಗ್ರೀಕರು, ದ್ರಾವಿಡರು ಎಂಬ ಹೆಸರುಗಳು ಇಲ್ಲಿ ಅಪ್ರಸ್ತುತ. ತಾವು ಸೂಚಿಸಿರುವ ತುಳು ಗಾದೆಯ ಉತ್ತರಾರ್ಧ ಕರ್ಕಾಟಕದ ಅರ್ಧದಿಂದ ಬೇಸಿಗೆ ಆರಂಭ ಎಂಬುದು ಸರಿ ಎನಿಸುತ್ತದೆ. ಆದರೆ ಕುಂಭದಲ್ಲಿ ಮಳೆಗಾಲವನ್ನು ಅದರೊಡನೆ ಹೊಂದಿಸುವುದು ಕಷ್ಟವಾಗುತ್ತದೆ. ತಾವೇ ಲೆಕ್ಕ ಹಾಕಿ ನೋಡಬಹುದು. ದ್ವಾಪರ ಯುಗಾದಿ ಬಗ್ಗೆ ಯಾರಾದರೂ ತಿಳಿಸಿಕೊಟ್ಟರೆ ಒಳ್ಳೆಯದು. ನನಗೇನೂ ತಿಳಿಯದು.

[redacted] ಬಿ. ಎಸ್. ಶೈಲಜಾ
ಜವಹರಲಾಲ್ ನೆಹರು ತಾರಾಲಯ
ಹೈಗ್ರೌಂಡ್ಸ್, ಬೆಂಗಳೂರು - ೫೬೦ ೦೦೧

## ಡಿಸೆಂಬರ್ ತಿಂಗಳ ಪ್ರಶ್ನೆಗೆ ಉತ್ತರ

ಈ ಪ್ರಶ್ನೆಯು ವಿನೋದ ಗಣಿತದ ಅಂಕಣದಲ್ಲಿ ಸಾಕಷ್ಟು ಪ್ರಚಲಿತವಾಗಿರುವ ಒಂದು ಆಣಿಮುತ್ತು. ವಿನೋದ ಗಣಿತದ ಯಾವುದೇ ಸಂವಾದದಲ್ಲಿ ಪ್ರಕಟವಾಗುವ ಪ್ರಶ್ನೆ!

ಉತ್ತರವನ್ನು ಅಷ್ಟೇನೂ ಜಾಣತನದ ಪ್ರದರ್ಶನವಿಲ್ಲದ ಮಾರ್ಗವನ್ನನುಸರಿಸಿ (ಸಮಸ್ಯೆಯನ್ನು ಪರಿಹರಿಸಲು ಅನುಸರಿಸುವ ಇಂತಹ ಮಾರ್ಗಗಳನ್ನು 'ಪಶುಬಲದ ಪ್ರಯೋಗ' ಎಂದು ಗಣಿತಶಾಸ್ತ್ರಜ್ಞರು ವರ್ಣಿಸುವುದುಂಟು!) ಪಡೆಯಬಹುದು. ನೊಣದ ಹಾರಾಟವನ್ನು ಹೆಜ್ಜೆ-ಹೆಜ್ಜೆಯಾಗಿ ಸಮಸ್ಯೆಯಲ್ಲಿ ವರ್ಣಿಸಿರುವ ಕ್ರಮವನ್ನೇ ಅನುಸರಿಸಿ ಪ್ರತಿ ಹೆಜ್ಜೆಯಲ್ಲಿ ಅದು ಕ್ರಮಿಸಿದ ದೂರವನ್ನು ಕಂಡುಹಿಡಿದು ಒಂದರೊಡನೊಂದನ್ನು ಸೇರಿಸುತ್ತಾ ಹೋದರೆ, ಕೊನೆಯಲ್ಲಿ ಅನಂತ ಶ್ರೇಣಿಯೊಂದರ ಮೊತ್ತವನ್ನಾಗಿ ಉತ್ತರವನ್ನು ಪಡೆಯಬಹುದು. ಆದರೆ ಒಂದು ಅನಂತ ಶ್ರೇಣಿಯ ಮೊತ್ತವನ್ನು ಕಂಡುಹಿಡಿಯುವುದೆಂದರೆ ಗಣಿತಶಾಸ್ತ್ರದ ಕೆಲವು ಪ್ರೌಢ ಸಿದ್ಧಾಂತಗಳ ಬಳಕೆಯಾಗುವುದೆಂಬುದನ್ನು ಗಮನಿಸಬೇಕು. ಅಲ್ಲದೆ ಈ ವಿಧಾನದಲ್ಲಡಗಿರುವ ಶ್ರಮವನ್ನು ಕಂಡುಕೊಳ್ಳಲು ನೊಣದ ಹಾರಾಟದ ಮೊದಲ ಹತ್ತು ಹೆಜ್ಜೆಗಳಲ್ಲಿ ಕ್ರಮಿಸಿದ ದೂರಗಳನ್ನು ಪಟ್ಟಿ ಮಾಡಿ ನೋಡಿ!

ಸ್ವಲ್ಪ ಯೋಚಿಸಿದರೆ ಅತ್ಯಂತ ಸರಳ ವಿಧಾನದಿಂದ ಉತ್ತರವನ್ನು ಪಡೆಯಬಹುದು! ಮುಖ್ಯವಾಗಿ ನೊಣವು ತನ್ನ ಪ್ರತಿ ಹಾರಾಟವನ್ನು ಒಂದೇ ವೇಗದಲ್ಲಿ (ಗಂಟೆಗೆ ೩೦ ಕಿ.ಮೀ.) ನಡೆಸುತ್ತದೆಂಬುದನ್ನು ಗಮನಿಸಿ. ಅಲ್ಲದೆ ಈ ಹಾರಾಟದ ಪ್ರಕ್ರಿಯೆಯು, ವಿರುದ್ಧ ದಿಕ್ಕಿನಲ್ಲಿ ಚಲಿಸುತ್ತಿರುವ ಸೈಕಲ್ ಸವಾರರು ಪರಸ್ಪರ ಸಂಧಿಸುವವರೆಗೆ ನಡೆಯುತ್ತದೆ. ಈ ಸಂಧಿ ಕಾಲವು ಆರಂಭದಿಂದ ಸರಿಯಾಗಿ ಒಂದು ಗಂಟೆಯ ನಂತರದಲ್ಲಿ ನಡೆಯುತ್ತದೆ. ಹೀಗಾಗಿ ನೊಣವು ಆರಂಭದಿಂದ ಅಂತ್ಯದವರೆಗೆ ಗಂಟೆಗೆ ೩೦ ಕಿ.ಮೀ ವೇಗದಲ್ಲಿ ಸರಿಯಾಗಿ ಒಂದು ಗಂಟೆ ಕಾಲ ಹಾರಿತೆಂಬುದು ಸ್ಪಷ್ಟ. ಅಂದರೆ ಪ್ರಶ್ನೆಗೆ ಉತ್ತರ ೩೦ ಕಿ.ಮೀ!

ಈ ಪ್ರಶ್ನೆಯ ಒಡನಾಡಿಯಾಗಿಯೇ ಪ್ರಚಲಿತಗೊಂಡಿರುವ ರಂಜಕವಾದ ಒಂದು 'ದಂತ' ಕಥೆಯನ್ನು ಈ ಸಂದರ್ಭದಲ್ಲಿ ಹೇಳಲೇಬೇಕು!

ಜಾನ್ ನ್ಯೂಮನ್ (೧೯೦೩-೧೯೫೭) ಎಂಬ ಗಣಿತಶಾಸ್ತ್ರಜ್ಞ, ಆಧುನಿಕ ಗಣಕ ಯಂತ್ರದ ವಿನ್ಯಾಸ ಮತ್ತು ಉಪಯೋಗದ ಮೂಲತತ್ವಗಳನ್ನು ನಿರೂಪಿಸಿದ ಅಗ್ರಗಣ್ಯರಲ್ಲೊಬ್ಬ. ಇಪ್ಪತ್ತನೆಯ ಶತಮಾನದ ಅಗ್ರಗಣ್ಯ ಗಣಿತಶಾಸ್ತ್ರಜ್ಞರಲ್ಲೊಬ್ಬ. ಮೇಲಿನ ಪ್ರಶ್ನೆಯನ್ನು ಒಮ್ಮೆ ವಿನೋದ ಕೂಟವೊಂದರಲ್ಲಿ ತಿಳಿಹಾಸ್ಯದ ನೆವಮಾಡಿಕೊಂಡು ಯಾರೋ ಒಬ್ಬರು ನ್ಯೂಮನ್‌ಗೆ ಹಾಕಿದರಂತೆ. ಆತ ಮರುಕ್ಷಣವೇ ಸರಿಯಾದ ಉತ್ತರವನ್ನು ನೀಡಿದ. ಅಷ್ಟೇ ಅಲ್ಲ, ಈ ಹಿಂದೆ ಹೇಳಿದ ಪಶುಬಲ ಪ್ರಯೋಗದ ವಿಧಾನದಿಂದಲೇ ಲೆಕ್ಕಹಾಕಿ ಉತ್ತರವನ್ನು ತಾನು ಕಂಡುಕೊಂಡುದಾಗಿಯೂ ಸ್ಪಷ್ಟಪಡಿಸಿದ!

ಇಪ್ಪತ್ತನೆಯ ಶತಮಾನದ ಬೇರಾವುದೇ ಮೇಧಾವಿಗಿಂತ ಹೆಚ್ಚು ಶೀಘ್ರಗತಿಯಲ್ಲಿ, ಕಂಪ್ಯೂಟರ್‌ನಂತೆ ಕೆಲಸ ಮಾಡಬಲ್ಲ ಮೆದುಳು ಜಾನ್ ನ್ಯೂಮನ್‌ದೆಂದು ಅವನ ಸಹಪಾಠಿಗಳು ನಂಬಿದ್ದರಂತೆ!

## ಈ ತಿಂಗಳ ಪ್ರಶ್ನೆ

ಮುಳ್ಳೂರಿನ ಪ್ರಾಥಮಿಕ ಶಾಲೆಯಲ್ಲಿ ಅಧ್ಯಾಪಕರಾಗಿರುವ ಪಂಡಿತರಿಗೆ ಪಕ್ಕದ ಹುಲಿಯೂರಿನಲ್ಲಿರುವ ಪ್ರತಿ ಒಕ್ಕಲಿನ ವಶದಲ್ಲಿರುವ ಹಾಲು ನೀಡುವ ಜಾನುವಾರುಗಳ ಗಣತಿ ಮಾಡಿ ವರದಿ ಸಲ್ಲಿಸುವಂತೆ ಆಣತಿ ಬಂತು. ಪಂಡಿತರು ಮೇಲಧಿಕಾರಿಗಳಿಗೆ ಸಲ್ಲಿಸಿದ ವರದಿಯ ಸಾರಾಂಶ ಇಂತಿದೆ.

ಗ್ರಾಮದಲ್ಲಿರುವ ಒಟ್ಟು ಒಕ್ಕಲುಗಳ ಸಂಖ್ಯೆ ೧೦೦.

೪೫ ಒಕ್ಕಲುಗಳ ವಶದಲ್ಲಿ ತಲಾ ಒಂದರಂತೆ ಹಸುಗಳಿವೆ
೪೫ '' ಆಡುಗಳಿವೆ
೨೭ '' ಎಮ್ಮೆಗಳಿವೆ

ಒಂದು ಹಸು ಮತ್ತು ಒಂದು ಆಡು ಎರಡನ್ನೂ ಹೊಂದಿರುವ ಒಕ್ಕಲುಗಳು ೧೯.

ಒಂದು ಹಸು ಮತ್ತು ಒಂದು ಎಮ್ಮೆ ಎರಡನ್ನೂ ಹೊಂದಿರುವ ಒಕ್ಕಲುಗಳು ೮.

ಒಂದು ಎಮ್ಮೆ ಮತ್ತು ಒಂದು ಆಡು ಎರಡನ್ನೂ ಹೊಂದಿರುವ ಒಕ್ಕಲುಗಳು ೧೦.

ಮೇಲೆ ಹೇಳಿದ ಮೂರೂ ಜಾನುವಾರುಗಳನ್ನು ತಲಾ ಒಂದರಂತೆ ಹೊಂದಿರುವ ಒಕ್ಕಲುಗಳ ಸಂಖ್ಯೆ ೩ ಮಾತ್ರ.

ವರದಿಯನ್ನು ಪರಾಮರ್ಶಿಸಿದ ಮೇಲಧಿಕಾರಿಗಳು 'ಮನೆಯಲ್ಲಿಯೇ ಕುಳಿತು ಸುಳ್ಳು ವರದಿಯನ್ನು ಸಲ್ಲಿಸಿರುವ ನಿಮ್ಮನ್ನು ಏಕೆ ಶಿಕ್ಷಿಸಬಾರದೆಂಬುದಕ್ಕೆ ವಿವರಣೆ ಕೊಡಿ' ಎಂದು ಪಂಡಿತರಿಗೆ ನೋಟೀಸು ಕಳುಹಿಸಿದರು. ವರದಿಯ ಆಧಾರ ಸುಳ್ಳೆಂಬುದನ್ನು ವಿಶ್ಲೇಷಣೆಯಿಂದ ಮೇಲಧಿಕಾರಿಗಳು ಹೇಗೆ ಕಂಡುಕೊಂಡರು?



## ಸುಳ್ಳು-ಸತ್ಯ

ಅದುವರೆಗೆ
ಸಾವಿರ ಸುಳ್ಳು ಹೇಳಿದ್ದೆ
ಅವಳು ಸಂಶಯಿಸಿರಲಿಲ್ಲ;
ಮೊನ್ನೆ ಹೇಳಿದ್ದು
ಒಂದೇ ಒಂದು ಸತ್ಯ
ಆಕೆ ಕ್ಷಮಿಸಲೇ ಇಲ್ಲ!

ಶ್ರೀನಿವಾಸ ಕಾರ್ಕಳ
ಸಿ-೧೩೦, ಎಂ. ಸಿ. ಎಫ್. ಟೌನ್‌ಶಿಪ್, ಕುಂಜತ್ತಬೈಲು
ಮಂಗಳೂರು - ೫೭೫ ೦೧೫

**ಸುಪ್ರಸಿದ್ಧ ಗಾದೆಗಳು ಮತ್ತು ವಿಸ್ತರಣೆ**
*ನಿರೂಪಣೆ : ನಾಗರತ್ನ ಹೆಮ್ಮಿಗೆ*
**ಪುಟ : ೬೦** **ಬೆಲೆ : ರೂ. ೧೨**

**ಜೀವನ ದೀಪಿಕಾ** (ಲೇಖನ ಸಂಗ್ರಹ)
*ಗೀತಾ ರಾವ್*
**ಪುಟ : ೧೧೪** **ಬೆಲೆ : ರೂ. ೨೫**
ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ದಿವ್ಯ ಚಂದ್ರ ಪ್ರಕಾಶನ**
ನಂ. ೪೫, ಪಾಪಣ್ಣ ತೋಟ,
೧ನೇ ಮುಖ್ಯರಸ್ತೆ, ೨ನೇ ಅಡ್ಡರಸ್ತೆ
ಕರ್ನಾಟಕ ಹೌಸಿಂಗ್ ಬೋರ್ಡ್ ಕಾಲೋನಿ
೨ನೇ ಹಂತ, ಬಸವೇಶ್ವರನಗರ
ಬೆಂಗಳೂರು - ೫೬೦ ೦೭೯.

**ತೊಟ್ಟಿಕ್ಕುವ ಪದ್ಯಗಳು** (ಪದ್ಯ ಸಂಕಲನ)
*ಡಾ॥ ಆರ್ಕೆ, ಮಣಿಪಾಲ*
**ಪುಟ : ೬೦** **ಬೆಲೆ : ರೂ. ೨೫**

**ದಯಾಮರಣ**
*ಡಾ॥ ಸಿ. ಜಿ. ಕೇಶವ ಮೂರ್ತಿ*
**ಪುಟ : ೭೨** **ಬೆಲೆ : ರೂ. ೨೫**

**Astrology : Believe it or not?**
*Dr. S. Balachandra Rao*
**Pages : 156** **Rs. 65, US$ 10 (abroad)**

**ಚಂದಮಾಮನ ಮನೆಗೆ** (ಮಕ್ಕಳ ಕಥೆಗಳು)
*ನವಗಿರಿನಂದ*
**ಪುಟ : ೬೪** **ಬೆಲೆ : ರೂ. ೨೫**

**ಉದ್ಘಾ(ಚ್ಚಾ)ಟನೆ**

ಆದರೇನಂತೆ ಒಂದು
ಪಕ್ಷದಿಂದ 'ಉಚ್ಚಾಟನೆ!'
ಮರುದಿನವೇ ಮಾಡುವರು
ಹೊಸ ಪಕ್ಷದ ''ಉದ್ಘಾಟನೆ''!!




**ಅಶೋಕ ಯು. ಪತ್ತಾರ**
ಸ. ಹಿ. ಪ್ರಾ. ಶಾಲೆ. ಡೋಣಿ (ತಾಂಡ)
ತಾಲ್ಲೂಕು - ಮುಂಡರಗಿ,
ಗದಗ ಜಿಲ್ಲೆ - ೫೮೨ ೧೧೮.

**ಚೌಕಾಸಿಯ ಪಾಠ** *ನವಗಿರಿನಂದ*
**ಪುಟ : ೫೮** **ಬೆಲೆ : ರೂ. ೨೫**

**ವಿಚಿತ್ರ ಗಿಳಿ** *ನವಗಿರಿನಂದ*
**ಪುಟ : ೬೪** **ಬೆಲೆ : ರೂ. ೨೫**

**ಮಲ್ಲಿಗೆಯ ಮಳೆ** *ನವಗಿರಿನಂದ*
**ಪುಟ : ೬೪** **ಬೆಲೆ : ರೂ. ೨೫**
*ಮೇಲಿನ ೭ ಪುಸ್ತಕಗಳ ಪ್ರಕಾಶಕರು*
**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೦೧.

**ಪ್ರತೀಕ್ಷೆ** (ಕವನ ಸಂಕಲನ) *ಟಿ. ಎಸ್. ನಾಗರಾಜ ಶೆಟ್ಟಿ*
**ಪುಟ : ೬೦** **ಬೆಲೆ : ರೂ. ೩೦**
**ನಿರ್ಮಲ ಪ್ರಕಾಶನ,**
೯೫೭, 'ಸಂತೋಷ ಸಾಗರ'
ಗೋವಿನಪುರ ಬಡಾವಣೆ, ತಿಪಟೂರು - ೫೭೨ ೨೦೨.

**ಲೈಂಗಿಕ ಶಿಕ್ಷಣ** *ದೊಡ್ಡೇರಿ ವೆಂಕಟಗಿರಿ ರಾವ್*
**ಪುಟ : ೧೮೮** **ಬೆಲೆ : ರೂ. ೫೦**
**ಗೀತಾ ಬುಕ್ ಹೌಸ್** ಪ್ರಕಾಶಕರು, ಮೈಸೂರು

**ಸುಮ ವಸಂತ** (ಕಾದಂಬರಿ)
*ಪದ್ಮಾ ಗುರುರಾಜ್*
**ಪುಟ : ೧೭೬** **ಬೆಲೆ : ರೂ. ೫೦**
**ಶ್ರುತಿ ಪ್ರಕಾಶನ**, ೯೨೭, ಎರಡನೇ ಘಟ್ಟ,
೩ನೇ ಮುಖ್ಯರಸ್ತೆ, 'ಡಿ' ಬ್ಲಾಕ್
ರಾಜಾಜಿನಗರ, ಬೆಂಗಳೂರು - ೫೬೦ ೦೧೦

**ಕಾಂಚನ ಮಾಲೆ** (ಕಾದಂಬರಿ)
*ಪದ್ಮಾ ಗುರುರಾಜ್*
**ಪುಟ : ೧೬೦** **ಬೆಲೆ : ರೂ. ೭೦**
**ಗಿರಿ ಪ್ರಕಾಶನ**, ೮೬೩, ೧೪ನೇ ಮುಖ್ಯರಸ್ತೆ,
ಶ್ರೀನಿವಾಸ ನಗರ, ಬೆಂಗಳೂರು - ೫೬೦ ೦೫೦

**ಡಾಲರ್ ಸೊಸೆ** (ಕಾದಂಬರಿ) *ಸುಧಾ ಮೂರ್ತಿ*
**ಪುಟ : ೧೯೮** **ಬೆಲೆ : ರೂ. ೬೦**

**ಕಂಪ್ಯೂಟರ್ ಲೋಕದಲ್ಲಿ**
(ಕಂಪ್ಯೂಟರ್ ಪರಿಚಯ)
*ಸುಧಾ ಮೂರ್ತಿ*
**ಪುಟ : ೮೪** **ಬೆಲೆ : ರೂ. ೩೦**

**ತುಮುಲ** (ಕಾದಂಬರಿ) *ಸುಧಾ ಮೂರ್ತಿ*
**ಪುಟ : ೧೧೬** **ಬೆಲೆ : ರೂ. ೪೫**

**ಕಾವೇರಿಯಿಂದ ಮೆಕಾಂಗಿಗೆ** (ಪ್ರವಾಸ ಕಥನ)
*ಸುಧಾ ಮೂರ್ತಿ*
**ಪುಟ : ೧೧೦** **ಬೆಲೆ : ರೂ. ೪೦**

**ಶಾಲಾಮಕ್ಕಳಿಗಾಗಿ ಆರೋಗ್ಯ**
*ಡಾ॥ ಸುನಂದಾ ಕುಲಕರ್ಣಿ*
**ಪುಟ : ೫೭** **ಬೆಲೆ : ರೂ. ೧೫**
*ಮೇಲಿನ ೫ ಪುಸ್ತಕಗಳ ಪ್ರಕಾಶಕರು*
ಐ. ಬಿ. ಎಚ್. ಪ್ರಕಾಶನ, ೬೪೫/೬
೧೦ ಬಿ ಮುಖ್ಯರಸ್ತೆ, ನಾಲ್ಕನೇ ಬಡಾವಣೆ
ಜಯನಗರ, ಬೆಂಗಳೂರು - ೧೧

**ಗಿಳಿಶಾಸ್ತ್ರದ ಪ್ರಾಯೋಜಕರು**
(ವಿಡಂಬನ ಲೇಖನಗಳು) *ಸಂಡೂರು ವೆಂಕಟೇಶ*
**ಪುಟ : ೮೦** **ಬೆಲೆ : ರೂ. ೩೦**
**ಕುಸುಮಾ ಪ್ರಕಾಶನ,**
೭೪/೪, ೧೫ನೇ ಮುಖ್ಯರಸ್ತೆ, ೭ನೇ ಅಡ್ಡರಸ್ತೆ,
ಶ್ರೀನಿವಾಸನಗರ, ೨ನೇ ಹಂತ, ಬೆಂಗಳೂರು - ೫೦

**ಎರಡು ದಡಗಳ ನಡುವೆ** (ಕವನ ಸಂಕಲನ) *ರಾಗಂ*
**ಪುಟ : ೮೭** **ಬೆಲೆ : ರೂ. ೬೦**
**ಅಡವಿ ಪ್ರಕಾಶನ, ಧಾರವಾಡ**

**ಉದ್ಯೋಗಂ ಪುರುಷ ಲಕ್ಷಣಂ** (ಸೂಕ್ತಿ ಸಂಗ್ರಹ)
*ಟಿ. ವಿ. ವೆಂಕಟರಮಣಯ್ಯ*
**ಪುಟ : ೬೪** **ಬೆಲೆ : ರೂ. ೨೦**

**ಹುಟ್ಟು ಸಾವು** (ಸೂಕ್ತಿ ಸಂಗ್ರಹ)
*ಟಿ. ವಿ. ವೆಂಕಟರಮಣಯ್ಯ*
**ಪುಟ : ೫೬** **ಬೆಲೆ : ರೂ. ೧೫**

**ಸೂಕ್ತಿಗಳಲ್ಲಿ ಧರ್ಮ** *ಟಿ. ವಿ. ವೆಂಕಟರಮಣಯ್ಯ*
**ಪುಟ : ೪೪** **ಬೆಲೆ : ರೂ. ೧೫**
**ಟಿ. ವಿ. ವೆಂಕಟರಮಣಯ್ಯ**, ಇಡಬ್ಲ್ಯೂ ಎಸ್ ೨೧೮,
ಕೆ. ಎಚ್. ಬಿ. ಕಾಲೋನಿ, ೨ನೇ ಹಂತ, ೫ನೇ ಕ್ರಾಸ್,
ಬಸವೇಶ್ವರನಗರ, ಬೆಂಗಳೂರು - ೫೬೦ ೦೭೯

**ಬಾಳಿಗೊಂದು ಬೆಳಕು** *(ಲೇಖನಗಳು) ಶ್ರೀ ಮಿತ್ತೂರು*
**ಪುಟ ೧೦೪** **ಬೆಲೆ : ರೂ. ೩೦**
**ಜನಜೀವನ ಸಾಹಿತ್ಯ ಸದನ**, ಮೇದರಹಳ್ಳಿ,
ಚಿಕ್ಕಬಾಣಾವರ, ಬೆಂಗಳೂರು - ೫೬೦ ೦೯೦

**ಬೆಳೆ**

''ವಿದ್ಯಾರ್ಥಿಗಳು ಬತ್ತ ಬೆಳೆಯುವ
ಗದ್ದೆಗಳಾಗಬೇಕು!'' ಎಂದರು
ಕುವೆಂಪು.
ಆದರೆ ಈಗ ಬಹಳ ಮಂದಿ
(ಅಧ್ಯಾಪಕರೂ ಕೂಡ)
ಬೆಳೆಯುತ್ತಿದ್ದಾರೆ ಗಾಂಜಾ
ಹೊಗೆಸೊಪ್ಪುಗಳನ್ನು!



ಸಿ. ಪಿ. ಕೆ.
೨ನೇ ಮುಖ್ಯ ರಸ್ತೆ, ವಿನಾಯಕನಗರ,
ಮೈಸೂರು - ೫೭೦ ೦೧೨

# ಯುವಜನರು ಮತ್ತು ಸಾಮಾಜಿಕ ಬದಲಾವಣೆ

**ಜಿ. ರಾಮಕೃಷ್ಣ**

ನಮ್ಮ ದೇಶದ ಆರ್ಥಿಕ ನೀತಿಯು ಈಚಿನ ವರ್ಷಗಳಲ್ಲಿ ವಿಶ್ವವ್ಯಾಪಕತೆಯ ಲಕ್ಷಣವನ್ನು ಹಮ್ಮಿಕೊಂಡಿದೆ, ಹೆಚ್ಚು ಉದಾರತೆಯನ್ನು ಪ್ರದರ್ಶಿಸುತ್ತಿದೆ. – ಹೀಗೆಂದು ಸರ್ಕಾರದ ವಕ್ತಾರರು ಹೇಳಿಕೊಳ್ಳುತ್ತಿರುತ್ತಾರೆ. ವಿದೇಶದ ಬಂಡವಾಳವನ್ನು ಹೂಡಲು ಪರಿಣಾಮಕಾರಿ ವ್ಯವಸ್ಥೆಯನ್ನು ರಚಿಸಲಾಗಿದೆಯೆಂದೂ ಅವರು ಹೇಳುತ್ತಾರೆ. ದಿನ ಬೆಳಗಾದರೆ ಅಮೆರಿಕಾದಿಂದಲೋ, ಜರ್ಮನಿಯಿಂದಲೋ, ಜಪಾನಿನಿಂದಲೋ ಒಂದಲ್ಲ ಒಂದು ನಿಯೋಗ ಭಾರತದಲ್ಲಿ ಪ್ರವಾಸ ಮಾಡುತ್ತಿರುತ್ತದೆ ಮತ್ತು ನಮ್ಮ ಮಂತ್ರಿಗಳು ಹಾಗೂ ಅಧಿಕಾರಿಗಳು ಎಲ್ಲೆಲ್ಲೋ ಹೋಗಿ ಬಂಡವಾಳ ಹೂಡುವಂತೆ ಪ್ರೇರಣೆ ನೀಡುತ್ತಿರುತ್ತಾರೆ. ಕರ್ನಾಟಕದ ಮುಖ್ಯಮಂತ್ರಿಗಳು ಬಹುರಾಷ್ಟ್ರೀಯ ಕಂಪೆನಿಗಳನ್ನು ಸ್ವಾಗತಿಸುವುದರಲ್ಲಿ ಎಲ್ಲಿಲ್ಲದ ಉತ್ಸಾಹ ತೋರುತ್ತಾರೆ. ಮುಕ್ತ ಮಾರುಕಟ್ಟೆಯ ತಥಾಕಥಿತ ಉತ್ತಮ ಗುಣಗಳನ್ನು ಹೊಗಳದಿರುವ ಮಂತ್ರಿಗಳು, ಅಧಿಕಾರಿಗಳು ಮತ್ತು ಉದ್ದಿಮೆದಾರರು ವಿರಳ.

ಇವೆಲ್ಲಾ ಒಂದು ರೀತಿಯ ಬದಲಾವಣೆಗಳೇ. ಬಂಡವಾಳಶಾಹಿ ಹಾದಿಯನ್ನು ಸ್ವಾತಂತ್ರ್ಯ ಪಡೆದಾಗಿನಿಂದ ನಮ್ಮ ರಾಷ್ಟ್ರ ಅನುಸರಿಸುತ್ತಲೇ ಬಂದಿದೆ. ಬೇರೆ ಬೇರೆ ಹೆಸರುಗಳು ಆಗಾಗ್ಗೆ ಕೊಟ್ಟಿದ್ದರೂ ಮೂಲತಃ ಅವು ಸ್ಥಾನಿಕ ಮತ್ತು ವಿದೇಶಿ ಬಂಡವಾಳದ ಪ್ರಾಬಲ್ಯವೇ ಆಗಿದೆ. ಆದರೆ ಈಗಿನದು ತೀರಾ ನೇರವಾದ ಸಾಮ್ರಾಜ್ಯಶಾಹಿ - ನಿರ್ದೇಶಿತ ಬಂಡವಾಳದ ಹುಚ್ಚು ಕುಣಿತ. ಇದರಿಂದ ಸಮಾಜದ ಎಲ್ಲ ಭಾಗಗಳ ಮೇಲೂ ತೀವ್ರವಾದ ಪರಿಣಾಮಗಳು ಉಂಟಾಗುವುದು ಅನಿವಾರ್ಯ. ಇಂದಿನ ಯುವಕ ಪೀಳಿಗೆ ಇದನ್ನು ಸ್ಪಷ್ಟವಾಗಿ ಗುರುತಿಸದಿದ್ದರೆ ಅದರ ಭವಿಷ್ಯವು ಇನ್ನೂ ಮಸುಕಾಗುವುದು ಅನಿವಾರ್ಯವಾಗುತ್ತದೆ.

ಯುವಕರೆಂದರೆ ವಿದ್ಯಾರ್ಥಿಗಳು ಮಾತ್ರವಲ್ಲ. ಉದ್ಯೋಗಿಗಳು ಮತ್ತು ನಿರುದ್ಯೋಗಿಗಳಿಬ್ಬರೂ ಯುವಕರ ನಡುವೆ ಇದ್ದಾರೆ. ಅವರು ಅಕ್ಷರಸ್ಥರಿರಬಹುದು, ಅನಕ್ಷರಸ್ಥರೂ ಇರಬಹುದು. ನಗರ ಮತ್ತು ಹಳ್ಳಿಗಳೆರಡರಲ್ಲೂ ಅವರು ತುಂಬಿದ್ದಾರೆ. ಅವರನ್ನು ವರ್ಗೀಕರಿಸುವುದು ಸುಲಭವಲ್ಲ. ಏಕೆಂದರೆ ಅವರ ಹಿನ್ನೆಲೆ ಮತ್ತು ಆಕಾಂಕ್ಷೆಗಳು ಒಂದೇ ತೆರನಾಗಿಲ್ಲ. ಉತ್ಪಾದನಾ ಸಂಬಂಧಗಳ ದೃಷ್ಟಿಯಿಂದ ಇತರರಿಗೆ ಅನ್ವಯವಾಗುವ ವರ್ಗೀಕರಣ ಇವರಿಗೂ ಅನ್ವಯಿಸುತ್ತದೆ. ಸೈದ್ಧಾಂತಿಕ ನಂಬಿಕೆಗಳ ದೃಷ್ಟಿಯಿಂದಲೂ ಇವರಲ್ಲಿ ಅನೇಕ ಪ್ರಕಾರಗಳಿವೆ. ಆದ್ದರಿಂದ ಯುವಕರೆಂದರೆ ಸಾಧಾರಣೀಕರಿಸಿ ಏನನ್ನೂ ಹೇಳಬರುವುದಿಲ್ಲ.

ರಾಷ್ಟ್ರದ ಬಹು ಮುಖ್ಯ ವಿಭಾಗ ಇವರದು ಎಂಬುದರಲ್ಲಿ ಸಂಶಯವಿಲ್ಲ. ಅವರಲ್ಲಿ ಎಷ್ಟೋ ಮಂದಿ ರಾಜಕೀಯದಲ್ಲಿ ನೇರವಾಗಿ ತೊಡಗಿದ್ದಾರೆ ಇಲ್ಲವೆ ಬೇರೆ ಬೇರೆ ರಾಜಕೀಯ ವ್ಯಕ್ತಿಗಳ ಅಥವಾ ಗುಂಪುಗಳ ವಕ್ತಾರರು ಮತ್ತು ಕಾರ್ಯಕರ್ತರೂ ಆಗಿದ್ದಾರೆ. ವಿವಿಧ ಸಂದರ್ಭಗಳಲ್ಲಿ ಯಾವುದೇ ಕೆಲಸಕ್ಕೆ ಕೈಯಾಳುಗಳಾಗಿ ಭುಜಬಲ ಪ್ರದರ್ಶಿಸಲು ದೊರೆಯುವವರು ಬಹುಮಟ್ಟಿಗೆ ಯುವಕರು. ರಾಮಮಂದಿರ ಕಟ್ಟುವುದಿರಲಿ, ಮಸೀದಿ ಒಡೆಯುವುದಿರಲಿ, ಭಾಷಾಗೊಂದಲ ಉಂಟಾದಾಗ ಹಿಂಸೆಗೆ ಇಳಿಯುವುದಿರಲಿ, ಭ್ರಷ್ಟಾಚಾರದ ವಿರುದ್ಧ ಹೋರಾಡುವುದಿರಲಿ, ಕೋಮು ವಿದ್ವೇಷ ತಡೆಗಟ್ಟುವುದಿರಲಿ, ವಿದೇಶಿ ಬಂಡವಾಳದ ಕುತಂತ್ರವನ್ನು ಸೋಲಿಸುವುದಿರಲಿ, ಎಲ್ಲದರಲ್ಲೂ ಕ್ರಿಯೆಗೆ ಒದಗಿಬರುವ ಮಂದಿ ಇವರೇ. ಬೌದ್ಧಿಕ ಮತ್ತು ಸೈದ್ಧಾಂತಿಕ ನಾಯಕರಿಗೆ ಇವರ ಬೆಂಬಲ ಇಲ್ಲದೆ ಏನೂ ಜರುಗುವುದಿಲ್ಲ. ಅಂದರೆ, ಕ್ರಿಯಾತ್ಮಕವಿರಲಿ ವಿನಾಶಕರವಿರಲಿ ಭಾಗವಹಿಸುವಿಕೆಗೆ ಪ್ರಮುಖ ದಳ ಯುವಕರದು. ಇನ್ನೊಂದು ರೀತಿ ಹೇಳುವುದಾದರೆ ಬದಲಾವಣೆಯ ಹರಿಕಾರರು ಯುವಕರು; ಅದನ್ನು ಪ್ರತಿರೋಧ ಮಾಡುವವರೂ ಯುವಕರ ನಡುವಿನಿಂದಲೇ ಬಂದಿರುತ್ತಾರೆ. ಆದ್ದರಿಂದ ನಮ್ಮ ಇಂದಿನ ಸಾಂಸ್ಕೃತಿಕ ವಾತಾವರಣದಲ್ಲಿ ಅವರನ್ನು ಹೇಗೆ ಬಳಸಿಕೊಳ್ಳಲಾಗುತ್ತಿದೆ ಎಂಬುದು ಬಹಳ ಮುಖ್ಯವಾದ ಪ್ರಶ್ನೆ. ಅವರಿಗೆ ಯಾವ ಸೈದ್ಧಾಂತಿಕ ಪ್ರೇರಣೆ ನೀಡುತ್ತೇವೆ ? ಹಳಸು ಸಂಸ್ಕೃತಿಯ ಹತಾಶೆಯ ಪ್ರಜ್ಞೆ ಅವರಲ್ಲಿ ಮನೆ ಮಾಡಿಕೊಂಡರೆ ಒಂದು ವಿಧದ ಪರಿಣಾಮ, ಸಾಮೂಹಿಕ ಜೀವನದ ಮೌಲ್ಯಗಳು, ಆದರ್ಶಗಳು ವ್ಯಕ್ತಿತ್ವದ ಸಾರವಾದರೆ ಬೇರೊಂದು ರೀತಿಯ ಪರಿಣಾಮ. ಇದೇ ವಿಂಗಡಣೆಯು ಹಿರಿಯರಿಗೂ ಅನ್ವಯವಾಗುತ್ತದೆಯಾದರೂ ಯುವಕರ ಮನೋಧರ್ಮದ ಬಗ್ಗೆ ಹೆಚ್ಚು ಕಾಳಜಿ ಅಗತ್ಯ. ಅವರು ಹೇಗೆ ಸಂಘಟಿತರಾಗುತ್ತಾರೆಂಬುದು ಈ ಭಿನ್ನ ದೃಷ್ಟಿಗಳನ್ನು ಅವಲಂಬಿಸಿರುತ್ತದೆ.

ಒಂದು ಉದಾಹರಣೆ ನೋಡಿ : ನಗರದ ವಿದ್ಯಾಸಂಸ್ಥೆಗಳಲ್ಲಿ ಈಚೆಗೆ ''ಎತ್ನಿಕ್ ಡೇ'' ಎಂಬ ಆಚರಣೆ ವ್ಯಾಪಕವಾಗಿ

---

## ಆ ಒಂದು ಕ್ಷಣ

ಆ ಒಂದು ಕ್ಷಣ
ಗೊತ್ತಿದ್ದೂ ಮಾಡಿದ ತಪ್ಪು
ಹುಚ್ಚಂತೆ
ದಿನಾ ಆಡಿಸುತ್ತಿದೆ
ಭಯದಿಂದ ಹೆಡೆಯೆತ್ತಿದ ಹಾವಂತೆ

ನೆನಪಾದಾಗೆಲ್ಲ ಆಪಾದ ಮಸ್ತಕ
ಧಗ್ ಅಂತ ಹೊತ್ತಿಕೊಂಡಂತೆ
ಹೊಟ್ಟೆಯೊಳಗೆ ಬೆಂಕಿಕೊಳ್ಳಿ ಸಿದಗಾಡಿದಂತೆ
ಚಳಿ ಹಿಡಿದಂತೆ - ಯಾರೋ
ಬಲಗಾಲ ಮೆಟ್ಟಿ ಎಡಗಾಲ ಹಿಡಿದು ಸಿಗಿದಾಗ ಆಗುವಂತೆ
ಕ್ಷಣದ ಗಾಳಿ ಅನುಕ್ಷಣವು ಬೀಸಿ
ಉಕ್ಕೇರಿ ಬಡಿದಂತೆ ಜೀವಂತ ಸಾವು.

ಬಾಲ ಕಡಿದೊಂದು ಕ್ಷಣ ಮಗದೊಂದು ಕ್ಷಣ
ಹೊಸ ಹುರುಪು ಹೊಸ ಆಸೆ
ಮರೆವಿನ ಸುಳಿ ಆಹಾ ಸುಖದ ಸೆಲೆ

ಆ ಒಂದು ಕ್ಷಣ ಮತ್ತೆ
ಅಜ್ಞಾತ ಗರಗಸದಂತೆ ಬಂದಾಡಿ
ನನಗೆ ನಾನೇ ಲಾಲಿ ಹಾಡಿಕೊಂಡು
ಸಮಾಧಾನಿಸಿಕೊಳ್ಳುವೆ ತುಟಿ ಕಚ್ಚಿ

ಅನುಕ್ಷಣದ ಗೀಳಾಗಿ ಮರೆ ನೆನಹ ತಲ್ಲಣವು
ಒಳಗೊಳಗೆ ನರ್ತಿಸುವ ಈಟಿ
ಮೊನೆಗಮೃತದ ಲೇಪ.
ಹರಿದುಕೊಳ್ಳಲಾರೆ ನನ್ನೇ
ಇನ್ನೊಬ್ಬರ ಎದುರು
ನೆಮ್ಮದಿಗಾಗಿ
ಹಚ್ಚಿಕೊಳ್ಳಲಾರೆ ಮೈ ಹೆಡೆಗೆ ಬೆಂಕಿ
ಚಳಿಗೆ



ರಾಮಲಿಂಗಪ್ಪ ಟಿ. ಬೇಗೂರು
ನಂ. ೪೧೭, ೨ನೇ ಕ್ರಾಸ್, ಗೌರಿ ಪೇಟೆ, ಕೋಲಾರ - ೫೬೩ ೧೦೧

ಬೆಳೆಯುತ್ತಿದೆ. ವೈವಿಧ್ಯಗಳನ್ನು ಗುರುತಿಸಿ ಅವನ್ನು ಮಾನ್ಯ ಮಾಡುವ ಹೆಸರಿನಲ್ಲಿ ವಿಭಜನೆಯ ಬೀಜಗಳು ಅಂಕುರಿಸುತ್ತಿರುವುದು ಇದರಲ್ಲಿ ಸ್ಪಷ್ಟವಾಗಿ ಕಾಣಬರುತ್ತಿದೆ. ಈಗ ನಾಲ್ಕು ದಶಕಗಳ ಹಿಂದೆ ಯುವಕರಲ್ಲಿದ್ದ ಲಕ್ಷಣಾರಹಿತ ಬಣಗಳನ್ನು ಅಸಡ್ಡೆಯಿಂದ ನೋಡಿ ಸುಮ್ಮನೆ ''ಲಂಪನ್ ಎಲಿಮೆಂಟ್ಸ್'' ಎಂದು ಹೀಯಾಳಿಸುತ್ತಿದ್ದುದುಂಟು. ಆ ವಿಭಾಗಕ್ಕೆ ಸೇರ್ಪಡೆ ಹೊಂದುತ್ತಿರುವವರ ಸಂಖ್ಯೆ ಈಗ ಇನ್ನೂ ಹೆಚ್ಚಾಗಿದೆಯೆಂಬುದು ನಮ್ಮ ಸಾಂಸ್ಕೃತಿಕ-ಆರ್ಥಿಕ ಜೀವನದ ಒಂದು ದೊಡ್ಡ ವಿಪರ್ಯಾಸ. ಶೈಕ್ಷಣಿಕವಾಗಿ ಅವಕಾಶ ದೊರಕಿಸಿಕೊಂಡ ಮಂದಿ ಕೂಡ ಪಟಾಲಂಗಳನ್ನು ಕಟ್ಟುತ್ತಾರೆ, ಯಾರೋ ಮುತ್ಸದ್ದಿಯ ಚೇಲಾಗಳಾಗುತ್ತಾರೆ, ಅಸಹನೆ ಮತ್ತು ದ್ವೇಷಗಳನ್ನು ಬೆಳೆಸುತ್ತಾರೆ. ನಮ್ಮ ವಿದ್ಯಾಭ್ಯಾಸ ಕ್ರಮದ ಹಾಗೂ ಸಾಮಾಜಿಕ ಮೌಲ್ಯಗಳ ಅತ್ಯಂತ ದಾರುಣ ವಿಫಲತೆಯ ಸೂಚನೆ ಇದರಲ್ಲಿದೆ. ಅದನ್ನು ಕಂಡೂ ಕಾಣದೆ ಕುಳಿತಿರುವುದು ಬೇಜವಾಬ್ದಾರಿಯ ಕುರುಹು. ನಮ್ಮ ವ್ಯವಸ್ಥೆಯ ಹುಳುಕುಗಳ ಪರಿಣಾಮ ಇದು. ಇಂತಹ ಪರಿಸ್ಥಿತಿಯಲ್ಲಿ ನಾವು ಕಲ್ಪಿಸಿರುವ ದುಷ್ಟ ಪದ್ಧತಿಗಳಿಗೆ ಬಲವಾದ ಪ್ರತಿಕ್ರಿಯೆ ಬರಬೇಕಾದ್ದು ಯುವಕರಿಂದ. ಭ್ರಷ್ಟಾಚಾರ, ನಿರುದ್ಯೋಗ, ಮಾರಕ ಆರ್ಥಿಕ ನೀತಿ, ಜಡ್ಡು ಸಂಪ್ರದಾಯ, ಕೊಳಕು ಸಾಂಸ್ಕೃತಿಕ ಮಾದರಿಗಳ ಅಣಕ, ಇವುಗಳ ಬಗ್ಗೆ ಅಸಹನೆ ಮೂಡಬೇಕಾದ್ದು ಮತ್ತು ಅವುಗಳಿಗೆ ಪರ್ಯಾಯಗಳನ್ನು ರಚಿಸಲು ತವಕಿಸಬೇಕಾದ್ದು ಯುವಕರು. (ಯುವಕರೆಂದರೆ ಯುವತಿಯರೂ ಸೇರಿದಂತೆ ಎಂದು ಬೇರೆ ಹೇಳಬೇಕಾಗಿಲ್ಲವಷ್ಟೆ). ಮತೀಯ ಭಿನ್ನತೆಯನ್ನು ಮುಂದು ಮಾಡಿ ಯುವಕರಲ್ಲಿ ತಿರಸ್ಕಾರ ಮತ್ತು ದ್ವೇಷದ ಭಾವನೆಗಳನ್ನು ಬಿತ್ತುವವರಿಗೆ ಮೂಲಭೂತವಾದ ಸಾಮಾಜಿಕ ಮತ್ತು ಸಾಂಸ್ಕೃತಿಕ ಅಗತ್ಯಗಳ ಸಂದರ್ಭದಲ್ಲಿ ಯುವಕರನ್ನು ತೊಡಗಿಸಿಕೊಳ್ಳಬೇಕೆಂಬ ಒತ್ತಾಯ ಕಾಣುವುದಿಲ್ಲ.

ಇಂತಹ ಸನ್ನಿವೇಶದಲ್ಲಿ ಮೂರು ಮಾರ್ಗಗಳ ಪರಿಶೀಲನೆ ಆರೋಗ್ಯಕರವೆಂದು ತೋರುತ್ತದೆ : (ಅ) ನಮ್ಮ ರಾಜಕೀಯ ವಿಧಾನವನ್ನು ಸಮಗ್ರವಾಗಿ ವಿಮರ್ಶಿಸುವುದು. ಉದಾಹರಣೆಗೆ, ಜಾತಿ-ಮತಗಳ ಆಧಾರದಿಂದ ಸಾಮೂಹಿಕ ಜೀವನದ ಉದ್ದೇಶಿತ ಸೂತ್ರಗಳನ್ನು ವಿಷಮಗೊಳಿಸಿರುವುದನ್ನು ಗಮನಿಸಬಹುದು. ಎರಡು ದಶಕಗಳ ಹಿಂದಿನ ಸನ್ನಿವೇಶಕ್ಕಿಂತಲೂ ಕಲುಷಿತವಾದ ಸಂದರ್ಭವನ್ನು ನಾವಿಂದು ಸೃಷ್ಟಿಸಿಕೊಂಡಿದ್ದೇವೆ. ಮುನ್ನಡೆಯ ಬದಲು ಹಿನ್ನಡೆಯನ್ನು ಸಾಧಿಸಿದ್ದೇವೆ ! ಇದು ನಾಚಿಕೆಗೇಡಿನ ವಿಷಯ, ಆತಂಕದ ವಿಷಯ. ಕಾಶಿಯ ದೇವಸ್ಥಾನವನ್ನು ಸ್ವಚ್ಛಗೊಳಿಸುವ ಹುನ್ನಾರ, ವಿಧಾನಸೌಧದಲ್ಲಿ ರಂಜಾನ್ ಹಬ್ಬದ ಊಟ, ಹಜ್ ಯಾತ್ರಿಕರಿಗೆ ಐದು ಸಾವಿರ ರೂಪಾಯಿಗಳ ಸರ್ಕಾರಿ ದಾನ, ಕ್ರೈಸ್ತಧರ್ಮದ ಪಾದ್ರಿಗಳು ನಡೆಸುವ ವಿದ್ಯಾಸಂಸ್ಥೆಗಳ ಕಾನೂನು ಉಲ್ಲಂಘನೆಯನ್ನು ಲೆಕ್ಕಿಸದಿರುವುದು, ಯಾವುದೋ ಪುಸ್ತಕವನ್ನು ಬಹಿಷ್ಕರಿಸಬೇಕೆಂಬ ಮಾತೆಯ ಧೋರಣೆಗೆ ಬೆಂಬಲ, ಹಣ ಸೂರೆ ಮಾಡಲು ಬಾಬಾಸಾಹೇಬ್ ಅಂಬೇಡ್ಕರ್ ಅವರ ದಿನಾಚರಣೆಯನ್ನು ಬಳಸಿಕೊಳ್ಳುವುದು – ಇವೆಲ್ಲಾ ನಮ್ಮ ರಾಜಕೀಯ ವಿಧಾನದಲ್ಲಿ ನುಸುಳಿಕೊಂಡಿರುವ ಪಿಡುಗುಗಳು. ಕೆಲವರಿಗೆ ಅಸಮಾಧಾನವಾದರೂ ಸರಿಯೇ, ನಾವಿದನ್ನು ಬಹಿರಂಗವಾಗಿ ವಿಮರ್ಶಿಸಲು ಸಿದ್ಧರಾಗಬೇಕು. (ಆ) ಇದರೊಟ್ಟಿಗೆ, ಯಾವುದೇ ಪ್ರಸಂಗದ ಬಗೆಗೂ ವೈಜ್ಞಾನಿಕ ತಿಳಿವಳಿಕೆ ಉಂಟಾಗಲು ಒಂದು ಯೋಜನೆಯನ್ನು ಸಿದ್ಧಪಡಿಸಿಕೊಳ್ಳುವ ಅಗತ್ಯವಿದೆ. ವಿದ್ಯಾಭ್ಯಾಸದ ಕ್ಷೇತ್ರದಲ್ಲಿ ಮತ್ತು ಅದರ ಹೊರಗಿನ ವಲಯಗಳೆರಡರಲ್ಲೂ ಇದರ ಅವಶ್ಯಕತೆ ಕಾಣಬರುತ್ತದೆ. ಅಯೋಧ್ಯೆಯ ರಾಮನಿಂದ ಒಂದು ಹೆಜ್ಜೆ ಇಟ್ಟು ಕಾಶಿಯ ವಿಶ್ವನಾಥನನ್ನು ಎರಡನೆ ಹೆಜ್ಜೆಗಾಗಿ ಮೊರೆ ಹೋಗುವ ರಾಜಕೀಯ ಸಂಪ್ರದಾಯವನ್ನು ತಾರ್ಕಿಕವಾಗಿ ವಿಶ್ಲೇಷಣೆ ಮಾಡಲು ಯುವಕರಿಗೆ ಪರಿಕರವನ್ನೊದಗಿಸದೆ ಅವರ ಮತ್ತು ಬೇರೆಯವರ ಮೌಢ್ಯವನ್ನು ತೊಲಗಿಸಲು ಸಾಧ್ಯವಿಲ್ಲ. ''ಮತಧರ್ಮವು ರಾಜಕೀಯ ಆಕಾಂಕ್ಷೆಗಳಿಗೆ ಸಾಧನವಾದಾಗ ಅಧಿಕಾರಾತ್ಮಕವಾದ ಕ್ರೂರ ವಿಚಾರಣಾಕ್ರಮ ನೆಲೆಗೊಳ್ಳುತ್ತದೆ'' ಎಂದು ಆಲ್ಬರ್ಟ್ ಕಾಮು ಹೇಳಿದ್ದನಂತೆ. ನಾವು ಆ ಕಡೆಗೆ ಹೆಜ್ಜೆ ಹಾಕುತ್ತಿದ್ದೇವೆಯೆ ? ಹೀಗೆ ಬಲಿಯಾಗುವವರಿಗೆ ವಿವೇಕ

## ಕಾರ್ಗಿಲ್ಲಿನ ಮೇಲೆ ಪದ್ಯ ಬರೆಯುವುದಿಲ್ಲ

ಇಲ್ಲ, ನಾನು ಪದ್ಯ ಬರೆಯುವುದಿಲ್ಲ
ಕಾರ್ಗಿಲ್ಲಿನ ನರಸಂಹಾರ ಕುರಿತು.
ಖುಲ್ಲಂ ಖುಲ್ಲ ಮಾತು ನನ್ನದು
ಖಂಡಿತ ನಾನು ಪದ್ಯ ಬರೆಯುವುದಿಲ್ಲ.
ದೇಶ ಭಕ್ತರ ಕವಿ ಗೋಷ್ಠಿಯಲಿ ಓದಿ
ಚಪ್ಪಾಳೆ ತಟ್ಟಿ, ಗೌರವಕ್ಕೆ ಕೊಟ್ಟ ಕಡುಸುಡು ಪಾನೀಯ ಹೀರಿ
ಲೋಟ ಕುಟ್ಟಿ ಸೂಕ್ಷ್ಮಜ್ಞರು ಕೊಟ್ಟ ಗರಿ
ಸಿಕ್ಕಿಸಿಕೊಳ್ಳುವ ಛಾನ್ಸು ಹೊಡೆಯುವುದಿಲ್ಲ.
ಇಲ್ಲ
ರಕ್ತದ ಹೊಳೆ ಹರಿವ ಕನಸನ್ನೂ ಕಾಣದ
ನನ್ನ ಭಾಷೆಯ ವರ್ಣ ವರ್ಣಗಳಲ್ಲಿ
ರಕ್ತ ತೊಟ್ಟಿಕ್ಕುವುದಿಲ್ಲ
ಇಲ್ಲ
ನಾನು ಬರೆವಕ್ಷರಗಳಿಗೆ, ಕಾರ್ಗಿಲ್ಲ ಶೂನ್ಯಾತಿ ಶೂನ್ಯ ಚಳಿ
ಚೂರಿಯಾಗಿ ಉರಿವ ಗರಿಮೆ ಇಲ್ಲ
ಸಿಡಿವ ಸೆಡವಿಲ್ಲವೇ ಇಲ್ಲ.



ಇಲ್ಲ
ಬರೆಯುವುದಿಲ್ಲ ನಾನು ಕಾರ್ಗಿಲ್ಲ ಕುರಿತು
ನನ್ನ ಪದ್ಯ ಸಾಲು ಸಾಲು ವೀರಸ್ವರ್ಗವೇರಿದವರ
'ಕಂದ್ಸನ್ನ ಕಣ್ಣ್ಸನ ಕವಡಿ' ಉದುರಿಸುವ
ಬೆನ್ನೀರ ತಡೆಯುವುದಿಲ್ಲ
ಇಲ್ಲ
ತಣಿಸುವುದಿಲ್ಲ ನಾನು ಬರೆವ ಪದ್ಯದ ಸಾಲು
ವೀರ ಸ್ವರ್ಗದಲಿ ರಂಭಾದಿಗಳ ಜೊತೆಗೂಡಿರುವವನ
ಇಹದ ನಾರೀಮಣಿಯ ಎದೆಯ ತಿದಿಯ ಬೇಗುದಿಯ
ಮಣಿಸುವುದಿಲ್ಲ - ತಣಿಸುವುದಿಲ್ಲ..... ಮತ್ತು
ರಸರಸವಾದ ತುಟಿ ತಳಿರುಗಳಿಗೆ ಮುತ್ತನಿಕ್ಕುವುದಿಲ್ಲ
ಇಲ್ಲ
ನಾನು ಬರೆಯುವುದರಿಂದ
ಕಾರ್ಗಿಲ್ಲ ವೀರ, ಕೋಟ್ಯಧಿಪತಿಗಳ
ಬಿಕರಿ ಬಂಡವಾಳವಾಗುವುದು ತಪ್ಪುವುದಿಲ್ಲ.
ನಿರರ್ಥಕ ಜೀವಹಾನಿಗೆ ದ್ರವಿಸದ ಹೃದಯಗಳು
ಮಿಡಿಯುವುದಿಲ್ಲ. ಪಡಿನುಡಿಯುವುದಿಲ್ಲ.
ಇಲ್ಲ
ಕಾರ್ಗಿಲ್ಲ ಕವಿಯಾಗುವುದಕ್ಕೆ ನಾನು ಒಪ್ಪುವುದಿಲ್ಲ
ನೀರ್ಗಲ್ಲ ಮೇಲೆ ಶಿಲ್ಪ ಕೆತ್ತಲಾಗುವುದಿಲ್ಲ ಯೋಧನಂತೆ ನನಗೆ
ಕಾರ್ಗಿಲ್ಲ ಮೇಲೆ ಪದಪದವಿಟ್ಟು ಕಟ್ಟಲಾಗುವುದಿಲ್ಲ
ಪದ್ಯ ನನಗೆ
ನನ್ನ ಕಾವ್ಯ ಕನ್ನಿಕೆ, ಆ ಎತ್ತರದಲ್ಲಿ ನರ್ತಿಸುವುದಿಲ್ಲ
ನವರಸ ಹೊಮ್ಮುವ ಹಾಗೆ, ತುಂಬಿ ವರ್ತಿಸುವುದಿಲ್ಲ.
ಅದಕ್ಕಾಗಿ, ನಾನು ಪದ್ಯ ಬರೆಯುವುದಿಲ್ಲ.
ಕಾರ್ಗಿಲ್ಲ ಕವಿಯಾಗಿ ಏರುವುದಿಲ್ಲ ನಾನು ಗಲ್ಲ.

ದಂಡಿಸಲಿ ಇತಿಹಾಸ ಅದಕಾಗಿ ನನ್ನ
ತಪ್ಪಿ ಹೋಗಲಿ ಬಿಡು ನನ್ನ ಬಂಗಾರ ಸಣ್ಣದನ್ನ
'ಯಾಕಾಗಿ ಈ ಬವರ'
ಎಂಬುದು ಅರ್ಥವಾಗದ ಮುನ್ನ
ಹೇಗಾದರೂ ಬರೆಯಲಿ ಪದ್ಯವನ್ನ !


ಯು. ಎಸ್. ಶ್ರೀಧರ ಆರಾಧ್ಯ
ಕನ್ನಡ ಪ್ರಾಧ್ಯಾಪಕರು, ಶ್ರೀಮತಿ ಡಿ. ಚೆನ್ನಮ್ಮ ಜ್ಯೂನಿಯರ್ ಕಾಲೇಜ್, ಮದಾಪುರ ಪೋಸ್ಟ್, ನಾರ್ಥ್ ಕೊಡಗು-೫೭೧[illegible]

ಮೂಡುವುದೆಂತು ? ಯುವಜನಕ್ಕೆ ಇದನ್ನು ಕುರಿತಂತೆ ಆಸಕ್ತಿಯು ಎಷ್ಟು ವೃದ್ಧಿಯಾದರೂ ಸಾರ್ಥಕವೇ ಆಗಿರುತ್ತದೆ. (ಇ) ಅವಿವೇಕದ ಮಾರ್ಗದಲ್ಲಿ ಹೋಗುತ್ತಿರುವವರು ಕೇವಲ ನಿರುದ್ಯೋಗಿಗಳು ಮತ್ತು ಅನಕ್ಷರಸ್ಥರು ಅಲ್ಲವೆಂಬುದು ನಿಜವಾದರೂ ಪ್ರಾರಂಭಿಕ ದೆಸೆಯಲ್ಲಿ ಅವರ ಪರಿಸ್ಥಿತಿಯು ಅಭದ್ರತೆಯ ಮತ್ತು ಆಕಾಂಕ್ಷಾ ರಹಿತವಾದ ಪರಿಸ್ಥಿತಿಯೇ ಸರಿ. ಜಾಗ್ರತೆಯಾಗಿ ಹೇಗಾದರೂ ''ಮುಂದೆ ಬರಬೇಕು, ನಾಯಕರಾಗಬೇಕು'' ಎಂಬ ಅವಸರವು ಈ ಅಭದ್ರತೆಯನ್ನು ನೀಗಿಕೊಳ್ಳಲು ಕೆಲವರು ಕಂಡುಕೊಳ್ಳುವ ವಿಧಾನ.

ಇದು ಸಾರ್ವತ್ರಿಕವಾದ ಪರಿಹಾರ ಕ್ರಮವಂತೂ ಅಲ್ಲ. ದೇಶವು ನವಸಾಹತುಶಾಹಿಯ ದರ್ಪಕ್ಕೆ ಸಿಲುಕಿ ನಲುಗುವ ಸಾಧ್ಯತೆ ಹೆಚ್ಚುತ್ತಿರುವಾಗ ಒಂದು ಅರ್ಥಪೂರ್ಣ ಸ್ವಾತಂತ್ರ್ಯಕ್ಕಾಗಿ ಹೋರಾಡಲು ಯುವಕರು ಅಣಿಯಾಗ ಬೇಕಾಗಿದೆ. ಬೇರೆಲ್ಲ ವಿಷಮೂಲಗಳನ್ನು ಸಂಹರಿಸಲು ಈ ಕಾರ್ಯಾಚರಣೆಯು ಸಮರ್ಥವಾಗಿರುತ್ತದೆ.

ಅಪ್ರಸ್ತುತವಾದ ಅಂಶಗಳಿಗೆ ಆಗಿಂದಾಗ್ಗೆ ಜೀವ ಕೊಡುವ ಪ್ರವೃತ್ತಿ ನಮ್ಮ ಅನೇಕ ಹಿರಿಯರಲ್ಲಿದೆ. ನಮ್ಮ ಸಂಪ್ರದಾಯದಲ್ಲಿರುವ ಮಾರಕ ಸಂಗತಿಗಳನ್ನು ಪೋಷಿಸುವುದು ಅಂತಹ ಒಂದು ಕ್ರಮ. ಅಸ್ಪೃಶ್ಯತೆಗೆ ಶಾಸ್ತ್ರ ಸಮ್ಮತಿ ಇದೆ ಎನ್ನುವ ಪುರಿ ಶಂಕರಾಚಾರ್ಯ, ಶೂದ್ರರು ಕನಿಷ್ಠರೆಂದು ಬೋಧಿಸುವ ಧರ್ಮಶಾಸ್ತ್ರದ ಆರಾಧಕರಾದ ಕಾನೂನು ಪಂಡಿತರು, ಮಹಿಳೆಯರು ಪರಾವಲಂಬಿಗಳು ಮತ್ತು ಅವರು ವೇದಪಠಣ ಮಾಡುವುದು ಘೋರ ಅಪರಾಧವೆಂದು ಒಂದು ವಿಶ್ವವಿದ್ಯಾನಿಲಯದ ಆವರಣದಲ್ಲಿ ಒರಲುವ ಸ್ವಾಮಿಗಳು – ಇವರೆಲ್ಲಾ ಈ ಪಂಥದವರು. ಬೇರೆ ಮತಧರ್ಮಗಳಲ್ಲೂ ಇದಕ್ಕೆ ಸಮಾನವಾದ ತುಚ್ಛ ಆಚರಣೆಗಳಿವೆ, ಧರ್ಮಾಧಿಕಾರಿಗಳ ಸೊಕ್ಕು ಇದೆ. ವಸ್ತುಸ್ಥಿತಿಯಿಂದ ಇವೆಲ್ಲಾ ಎಷ್ಟೇ ದೂರವಿದ್ದರೂ ಭಾವನಾತ್ಮಕವಾಗಿ ಇವಕ್ಕೆ ಶಸ್ತ್ರದ ಶಕ್ತಿಯಿದೆ. ಇವರು ಹೇಳಿದರೆಂದು ಜಗತ್ತು ನಿಂತುಬಿಡುವುದಿಲ್ಲ. ಆದಾಗ್ಯೂ ಇವರೆಲ್ಲಾ ಜಗ್ಗಿ ಎಳೆಯುವುದರಿಂದ ವಿಕಾಸ ನಿಧಾನವಾಗುತ್ತದೆ, ಕಲುಷಿತವಾದ ಸಾಮಾಜಿಕ ಸಂಬಂಧಗಳು ಉಂಟಾಗುತ್ತವೆ; ಆದರಿಂದ ವ್ಯಕ್ತಿತ್ವಕ್ಕೆ ಮತ್ತು ಘನತೆಗೆ ಪೆಟ್ಟಾಗುತ್ತದೆ.

ಯುವಜನರ ಶ್ರೇಷ್ಠ ಜವಾಬ್ದಾರಿಯು ಇಂತಹ ಕಳಂಕಕ್ಕೆ ಅವಕಾಶವಿರದಂತೆ ಮಾಡುವುದೇ ಆಗಿದೆ. ವಿಶ್ವದ ಅನೇಕ ಕಡೆ ಇರುವಂತೆ ಭಾರತದಲ್ಲೂ ಎರಡು ಭಾರತಗಳಿವೆ : ಒಂದು ವಿಭಾಗಕ್ಕೆ ಐಷಾರಾಮದ ಜೀವನ ಮತ್ತು ಇನ್ನೊಂದಕ್ಕೆ ಶ್ರಮದ ಪ್ರತಿಫಲ ಸಹ ದಕ್ಕದ ಜೀವನ. ಇದರಿಂದಾಗಿ ಎರಡೂ ವಿಭಾಗಗಳ ವ್ಯಕ್ತಿಗಳಲ್ಲಿ ಹುದುಗಿರುವ ಎಲ್ಲ ಶಕ್ತಿಯೂ ಹೊರಬರಲು ಸಾಧ್ಯವಾಗುತ್ತಿಲ್ಲ. ಐಷಾರಾಮದ ಜೀವನ ನಡೆಸುತ್ತಿರುವ ವರಿಗೆ ಇನ್ನೂ ತೃಪ್ತಿ ಇಲ್ಲ. ದೇಶದ ಆರ್ಥಿಕ ಸ್ವಾವಲಂಬನೆಯ ಗುರಿಯನ್ನೇ ಅವರು ತಳ್ಳಿಹಾಕುತ್ತಿದ್ದಾರೆ ಮತ್ತು ಕ್ಷುದ್ರ ಸಾಂಸ್ಕೃತಿಕ ಹಲ್ಲೆಗೆ ದೇಶವನ್ನು ಗುರಿಮಾಡುತ್ತಿದ್ದಾರೆ. ಅಂದರೆ, ಈಗಾಗಲೇ ಏರುಪೇರು ಗಳಿಂದ ಅನೈಕ್ಯಗೊಂಡಿರುವ ಸಮಾಜವು ಇನ್ನೂ ಹರಿತವಾದ ವಿಭಜನೆಯ ದಿಕ್ಕಿನಲ್ಲಿ ಸಾಗುತ್ತಿದೆ. ಮಾನವಿಕ ಮೌಲ್ಯಗಳು ಈ ಹಿನ್ನೆಲೆಯಲ್ಲಿ ಜೀವಂತವಾಗಿರುವುದು ಅಶಕ್ಯ.

ಇದನ್ನು ಮನನ ಮಾಡಬೇಕಾದ್ದು ನಮ್ಮ ಯುವಕರ ನೈತಿಕ ಹೊಣೆ. ನಮ್ಮ ಮೇಲೆ ಎರಗುತ್ತಿರುವ ಅನೇಕ ಪಿಡುಗು ಗಳನ್ನು ದೂರಮಾಡಲು ಜಾಗೃತರಾಗಿ ಸಾಮುದಾಯಿಕ ಚಳುವಳಿಗಳನ್ನು ನಡೆಸಲು ಯುವಕರು ಸೈದ್ಧಾಂತಿಕವಾಗಿ ತರಬೇತಿ ಪಡೆಯುವ ಕಾಲ ಹಿಂದೆಂದಿಗಿಂತಲೂ ಈಗ ಪಕ್ವವಾಗಿದೆ. ಇದರಿಂದ ಅವರ ಏಳಿಗೆ ಹಾಗೂ ದೇಶದ ರಕ್ಷಣೆ ಎರಡೂ ಏಕಕಾಲದಲ್ಲಿ ಆಗಿಬರುತ್ತದೆ. ಉಪ್ಪೇ ಉಪ್ಪಿನ ಸತ್ವವನ್ನು ಕಳೆದುಕೊಂಡರೆ ನಾವು ಉಪ್ಪನ್ನು ಎಲ್ಲಿಂದ ತರೋಣ, ಎಂದು ಗಾಂಧೀಜಿಯವರು ಹೇಳುತ್ತಿದ್ದುದುಂಟು. ಅದರ ಭಾವ ನಮ್ಮ ಯುವಕರ ಮನದಾಳಕ್ಕೆ ತಟ್ಟಬೇಕು. ಅದು ತನಗೆ ತಾನೇ ಉಂಟಾಗುವ ಪ್ರಕ್ರಿಯೆಯಲ್ಲ. ಹೋರಾಟದ ಮಾರ್ಗವನ್ನು ಸರಿಸುತ್ತಿದ್ದಂತೆ ಸಾಮಾಜಿಕ ಪ್ರಜ್ಞೆಯ ಮೆಟ್ಟಿಲುಗಳನ್ನು ಏರಬಹುದೆಂಬುದು ವೈಜ್ಞಾನಿಕ ಸತ್ಯ. ಈ ಸತ್ಯದ ಆವಿಷ್ಕಾರವು ನಮ್ಮ ಯುವಕರಲ್ಲಿ ಆಗಬೇಕಾಗಿದೆ, ಆಗುತ್ತದೆ.

□□□

# ಕೊಳೆಗೇರಿ ವಾಸಿಗಳಿಗೆ ಬದುಕುವ ಹಕ್ಕು ಇದೆಯೆ?

ಅಡ್ಡೂರು ಕೃಷ್ಣ ರಾವ್

ಸರ್ವೋಚ್ಚ ನ್ಯಾಯಾಲಯವು ಇತ್ತೀಚೆಗೆ ಒಂದು ಮಹತ್ವದ ತೀರ್ಪಿನಲ್ಲಿ ಕೊಳೆಗೇರಿ ವಾಸಿಗಳ ಬಗ್ಗೆ ಪ್ರಸ್ತಾಪಿಸಿರುವ ವಿಷಯಗಳು ಗಮನಾರ್ಹವಾಗಿವೆ. ಯಾಕೆಂದರೆ ಕೊಳೆಗೇರಿ ವಾಸಿಗಳ ಬದುಕುವ ಹಕ್ಕಿಗೆ ಸಂಬಂಧಿಸಿದ ಆ ವಿಷಯಗಳು ಸಮಾಜದ ದುರ್ಬಲ ವರ್ಗದವರ ಬಗ್ಗೆ ನಮ್ಮ ಧೋರಣೆಯ ಮೇಲೆ ಬೆಳಕು ಚೆಲ್ಲುತ್ತವೆ (ದಾವೆಯ ಉಲ್ಲೇಖ: ಅಲ್ ಮಿತ್ರ ಎಚ್. ಪಟೇಲ್ ವಿರುದ್ಧ ಯೂನಿಯನ್ ಆಫ್ ಇಂಡಿಯ (೨೦೦೦) ೨ ಎಸ್‌ಸಿಸಿ ೬೭೮).

ಜಸ್ಟಿಸ್ ಶ್ರೀ ಬಿ. ಎನ್. ಕೃಪಾಲ್ ಅವರು ಈ ದಾವೆಯಲ್ಲಿ ಕೊಳೆಗೇರಿಗಳು ಮತ್ತು ಕೊಳೆಗೇರಿವಾಸಿಗಳ ವಿರುದ್ಧ ಕೆಲವು ಕಠಿಣ ಹೇಳಿಕೆಗಳನ್ನಿತ್ತಿದ್ದಾರೆ : ''ಕೊಳೆಗೇರಿಗಳ ಸ್ಥಾಪನೆ ಅಥವಾ ನಿರ್ಮಾಣ ಒಂದು ಉತ್ತಮ ದಂಧೆಯಾಗಿದೆ ಮತ್ತು ಬಹಳ ವ್ಯವಸ್ಥಿತವಾಗಿ ನಡೆಯುತ್ತಿದೆ ಎಂಬಂತೆ ತೋರುತ್ತಿದೆ. ಕಳೆದ ಕೆಲವು ವರುಷಗಳಲ್ಲಿ ಕೊಳೆಗೇರಿಗಳ ಸಂಖ್ಯೆ ಭಾರೀ ಪ್ರಮಾಣದಲ್ಲಿ ಹೆಚ್ಚಿದೆ. ವಿಸ್ತಾರವಾದ ಸಾರ್ವಜನಿಕ ಜಾಗಗಳು ಈ ರೀತಿಯಲ್ಲಿ, ಖಾಸಗಿ ಬಳಕೆಗಾಗಿ ಪುಕ್ಕಟೆಯಾಗಿ ಕಬಳಿಸಲ್ಪಟ್ಟಿವೆ. ಭೂಮಾಲಕತ್ವದ ಏಜೆನ್ಸಿಗಳು ಮತ್ತು/ಅಥವಾ ಮುನಿಸಿಪಲ್ ಅಧಿಕಾರಿಗಳು ನಿರ್ಲಿಪ್ತವಾಗಿ ಅಥವಾ ಸಕ್ರಿಯವಾಗಿ ಶಾಮೀಲಾಗದೆ ದೇಶದ ರಾಜಧಾನಿಯಲ್ಲಿ ಇದು ನಡೆಯಬಲ್ಲುದು ಎಂಬುದನ್ನು ನಂಬಲು ಕಷ್ಟವಾಗುತ್ತದೆ. ತೆರಿಗೆದಾರರ ಖರ್ಚಿನಲ್ಲಿ ಕೊಳೆಗೇರಿ ಜೋಪಡಿಯ ಬದಲಾಗಿ ಪುಕ್ಕಟೆ ಜಾಗ ಸಿಗುತ್ತದೆಂಬ ಖಾತರಿಯು ಹೆಚ್ಚೆಚ್ಚು ಜಾಗ ಕಬಳಿಕೆದಾರರನ್ನು ಆಕರ್ಷಿಸುವ ಯೋಜನೆಯಾಗಿ ಬಿಡುತ್ತದೆ. ಸಾರ್ವಜನಿಕ ಜಾಗದ ಅತಿಕ್ರಮಣಕಾರನಿಗೆ ಪುಕ್ಕಟೆ ಬದಲಿ ಸೈಟನ್ನು ಬಹುಮಾನವಾಗಿ ಕೊಡುವುದು ಕಿಸೆಗಳ್ಳನಿಗೆ ಬಹುಮಾನ ಕೊಟ್ಟಂತೆ.''



**ನ್ಯಾಯಾಲಯದ ಎದುರಿಗಿದ್ದ ಪ್ರಶ್ನೆ**

ಈ ದಾವೆಯಲ್ಲಿ ಕೋರ್ಟಿನ ಎದುರಿಗಿದ್ದ ಮಹತ್ವದ ಪ್ರಶ್ನೆ: ಪ್ರಪಂಚದ ಅತ್ಯಂತ ದೊಡ್ಡ ಪ್ರಜಾಪ್ರಭುತ್ವವಾದಿ ದೇಶದ ರಾಜಧಾನಿಯನ್ನು ಹದಗೆಡಿಸುತ್ತಿರುವ ಮಾಲಿನ್ಯದ ಬೃಹತ್ ಸಮಸ್ಯೆಯ ವ್ಯಾಪ್ತಿಯಲ್ಲಿ ಘನತ್ಯಾಜ್ಯ ನಿರ್ವಹಣೆಗೆ ಸಂಬಂಧಿಸಿದ್ದು.

ಸುಪ್ರೀಂಕೋರ್ಟ್ ಈ ದಾವೆಯ ಸಂದರ್ಭದಲ್ಲಿ, ಡಾ॥ ಬಿ. ಎಲ್. ವಧೇರಾ ವಿರುದ್ಧ ಯೂನಿಯನ್ ಆಫ್ ಇಂಡಿಯ (೧೯೯೬) ೨ ಎಸ್‌ಸಿಸಿ ೫೯೪ ದಾವೆಯಲ್ಲಿ, ಡೆಲ್ಲಿಯ ಸ್ವಚ್ಛತೆ ಕಾಪಾಡಲಿಕ್ಕಾಗಿ ತಾನು ನೀಡಿದ್ದ ೧೪ ನಿರ್ದೇಶನಗಳನ್ನು ಬೊಟ್ಟುಮಾಡಿ ತೋರಿಸಿತು. ಅವುಗಳಲ್ಲಿ ಯಾವುದೇ ನಿರ್ದೇಶನವನ್ನೂ ಈತನಕ ಕಾರ್ಯಗತಗೊಳಿಸದಿರುವ ಬಗ್ಗೆ ಕೋರ್ಟ್ ತನ್ನ ತೀವ್ರ ಅಸಮಾಧಾನವನ್ನು ವ್ಯಕ್ತಪಡಿಸಿತು.

ಕೊಳೆಗೇರಿಯ ಸಮಸ್ಯೆಯು ಮಾಲಿನ್ಯದ ಪ್ರಮುಖ ಕಾರಣಗಳಲ್ಲೊಂದು ಎಂಬುದನ್ನು ಮನಗಂಡ ಸುಪ್ರೀಂಕೋರ್ಟ್, ಈ ಬಗ್ಗೆ ನೇರಮಾತುಗಳನ್ನು ನುಡಿದಿದೆ: ''ಕೊಳೆಗೇರಿಗಳನ್ನು ನಿರ್ಮೂಲ ಮಾಡುವ ಬದಲು ದೆಹಲಿಯಲ್ಲಿ ಕೊಳೆಗೇರಿಗಳನ್ನು ನಿರ್ಮಿಸಲಾಗುತ್ತಿದೆ. ಇದರಿಂದಾಗಿ ಗೃಹತ್ಯಾಜ್ಯಗಳನ್ನು ಖಾಲಿ ಜಾಗಗಳಲ್ಲಿ ಹಾಗೂ ಕೊಳೆಗೇರಿಗಳ ಸುತ್ತಮುತ್ತ ಎಸೆಯಲಾಗುತ್ತಿದೆ''.

'ವ್ಯಕ್ತಿಗಳೆಲ್ಲರೂ ತಮ್ಮ ತಮ್ಮ ಕಾರ್ಯ ವಿಧಾನಗಳನ್ನು ತಾವೇ ಆಯ್ಕೆ ಮಾಡುವ ವಿಚಾರವಾದಿಗಳು' ಎಂಬ ಯೋಚನಾಹಂದರದಿಂದ ಸುಪ್ರೀಂಕೋರ್ಟಿನ ಈ ಹೇಳಿಕೆಗಳು ಪ್ರೇರೇಪಿತವಾದಂತೆ ತೋರುತ್ತದೆ.

ಕೊಳೆಗೇರಿಗಳ ಸಮಸ್ಯೆಯನ್ನು ನಾವು ಯಾವ ದೃಷ್ಟಿಯಿಂದ ನೋಡುತ್ತೇವೆ ಎಂಬುದರ ಮೇಲೆ ಇಂಥ ಯೋಚನೆಗಳು ಗಾಢ ಪರಿಣಾಮ ಬೀರುತ್ತವೆ. ಆದ್ದರಿಂದ ಅವನ್ನು ನಾವು ಗಂಭೀರವಾಗಿ ಪರಿಶೀಲಿಸಬೇಕಾಗಿದೆ.

**ನಗರೀಕರಣದ ಸೃಷ್ಟಿ - ಕೊಳೆಗೇರಿ**

ಕೊಳೆಗೇರಿಗಳು ಅಸಮತೋಲ ಅಭಿವೃದ್ಧಿ ಪ್ರಕ್ರಿಯೆಯಿಂದಾಗಿ ಹುಟ್ಟಿಬರುತ್ತವೆ ಎಂಬುದು ಸ್ಪಷ್ಟ. ನಗರ ಪ್ರದೇಶಗಳು ವಿಸ್ತರಿಸುವಾಗ ಕೊಳೆಗೇರಿಗಳೂ ಕಣ್ಣಿಗೆ ರಾಚುವಂತೆ ಬೆಳೆಯುತ್ತವೆ ಎಂಬುದು ವಾಸ್ತವ.

ದೆಹಲಿ, ಮುಂಬೈ, ಬೆಂಗಳೂರು, ಚೆನ್ನೈ ಇತ್ಯಾದಿ ಬೃಹತ್ ನಗರಗಳಲ್ಲಿ ಗಗನಚುಂಬಿ ಕಟ್ಟಡಗಳೂ ಕೊಳೆಗೇರಿಗಳೂ ಅಕ್ಕಪಕ್ಕದಲ್ಲೇ ಬೆಳೆಯುತ್ತಿವೆ. ಇಂಥ ನಗರಗಳೊಳಗೆ ಎರಡು ಜಗತ್ತುಗಳಿರುವುದು ಸತ್ಯ. ಅಲ್ಲಿ ಜನಸಂಖ್ಯೆಯ ಒಂದು ವರ್ಗ ತೀವ್ರ ಬಡತನದಲ್ಲಿ ಜೀವಿಸುತ್ತಿದ್ದರೆ ಇನ್ನೊಂದು ವರ್ಗ ಭಾರಿ ಐಶ್ವರ್ಯದಲ್ಲಿ ಸಂಭ್ರಮಿಸುತ್ತಿದೆ.

ಕೊಳೆಗೇರಿ ವಾಸಿಗಳು ನಗರ ಜೀವನದ ಅವಿಭಾಜ್ಯ ಅಂಗವಾಗಿದ್ದಾರೆ. ಇವರಿಲ್ಲದಿದ್ದರೆ ನಗರಗಳಲ್ಲಿ ಇಂದು ಹೆಚ್ಚಾಗಿ ಕಂಡುಬರುತ್ತಿರುವ ಆಡಂಬರವೂ ಇರುತ್ತಿರಲಿಲ್ಲ ಎಂಬುದು ಖಂಡಿತ. ಕಟ್ಟಡ ನಿರ್ಮಾಣ, ಮನೆಗೆಲಸ ಇತ್ಯಾದಿಗಳಿಗೆ ಇವರು ತಮ್ಮ ದುಡಿಮೆ ಸಮರ್ಪಿಸುತ್ತಲೇ ಇದ್ದಾರೆ.

ನಗರದ ಸಮಾಜವು ತನಗೆ ಬೇಕೆಂದಾಗೆಲ್ಲ ಯಾವುದೇ ಹಿಂಜರಿಕೆಯಿಲ್ಲದೆ ಇವರನ್ನು ಸ್ವಾಗತಿಸುತ್ತದೆ. ಆದರೆ ಕೊಳೆಗೇರಿ ವಾಸಿಗಳು ಒಂದು ನಗರದ ನಿರ್ಮಾಣದಲ್ಲಿ ತಮ್ಮ ಪಾತ್ರ ಪೂರೈಸಿದ ಬಳಿಕ ಅದೇ ನಗರದಲ್ಲಿ ತಮ್ಮ ಬದುಕಿಗೊಂದು ದಾರಿ ಕಂಡುಕೊಳ್ಳಲು ಪ್ರಯತ್ನಿಸುವಾಗ ಮಾತ್ರ ಅವರನ್ನು ಉಪದ್ರವಕಾರಿಗಳೆಂದು ಪರಿಗಣಿಸಲಾಗುತ್ತದೆ!

ಕೊಳೆಗೇರಿ ವಾಸಿಗಳಲ್ಲಿ ಬಹುಪಾಲು ಜನರು ತಮ್ಮ ಇಚ್ಛೆಯಿಂದಲೇ ನಗರಗಳಿಗೆ ಬರುವುದಿಲ್ಲ ಎಂಬುದನ್ನು ಅರ್ಥಮಾಡಿಕೊಳ್ಳಬೇಕಾಗಿದೆ. ಅವರ ಬದುಕಿನ ಪರಿಸ್ಥಿತಿ - ಮೇಲು ಕೀಳೆಂಬ ಜಾತಿಯ ಬಂಧನದಿಂದ ಪಾರಾಗುವ ಹವಣಿಕೆ ಅಥವಾ ಉತ್ತಮ ಬದುಕಿನ ಆಶೆ - ಅವರನ್ನು ನಗರಗಳಿಗೆ ತಳ್ಳುತ್ತದೆ. ಇದನ್ನು ಅರ್ಥ ಮಾಡಿಕೊಳ್ಳದಿದ್ದರೆ, ಅಲ್ ಮಿತ್ರ ಪಟೇಲ್ ದಾವೆಯ ತೀರ್ಪಿನಲ್ಲಿರುವಂಥ ಹೇಳಿಕೆಗಳ ಪುನರಾವರ್ತನೆ ಆದೀತು.

ಸತ್ಯ ಹೇಳಬೇಕೆಂದರೆ, ನಗರಗಳು ಕೊಳೆಗೇರಿ ವಾಸಿಗಳ ಬದುಕಿನೊಂದಿಗೆ ಕ್ರೂರ ಆಟ ಆಡುತ್ತವೆ - ಅವರದೆಲ್ಲವನ್ನೂ ಕಿತ್ತುಕೊಂಡು ಅವರನ್ನು ಇನ್ನಷ್ಟು ಬಡವರನ್ನಾಗಿ ಮಾಡುತ್ತವೆ. ಅವರ ತಲೆಯ ಮೇಲಿನ ಸೂರು, ಹೊಟ್ಟೆಯ ಅನ್ನ ಮಾತ್ರವಲ್ಲ ಅವರ ಆತ್ಮಗೌರವವನ್ನೇ ನಗರಗಳು ನಾಶಮಾಡುತ್ತವೆ.

ಸರಕಾರಿ ಅಧಿಕಾರಿಗಳು ಕೊಳೆಗೇರಿ ವಾಸಿಗಳ ಬಗ್ಗೆ ನಿರ್ಲಕ್ಷ್ಯದ ಧೋರಣೆ ಪ್ರದರ್ಶಿಸುತ್ತಾರೆ. ಇವರನ್ನು ಸುಂದರ ನಗರದ ಕೊಳಕು ಜೀವಿಗಳೆಂದು ಪರಿಗಣಿಸುತ್ತಾರೆ, ತಮ್ಮ ಮಾನಸಿಕ ಕೊಳಕುತನವನ್ನು ಮುಚ್ಚಿಕೊಳ್ಳಲು ಹವಣಿಸುತ್ತಾರೆ. ಈ ಅಧಿಕಾರಿಗಳ ಅನುಸಾರ, ಕೊಳೆಗೇರಿಗಳಿಂದ ಅಲ್ಲಿನ ನಿವಾಸಿಗಳನ್ನು ಹೊರತಳ್ಳುವುದು ನಗರದ ಸೊಬಗು ಹೆಚ್ಚಿಸಲು ಅವಶ್ಯಕವಾದ ಒಂದು ಕೆಲಸ. ಆದರೆ, ಕೊಳೆಗೇರಿ ವಾಸಿಗಳಿಗೆ ಅದೊಂದು ಭಯಾನಕ ಪರಿಸ್ಥಿತಿ - ಅವರ ನೆಲೆಯಿಂದ ಅವರನ್ನು ಕಿತ್ತಾಗ

ಅವರು ತಮ್ಮದೆಲ್ಲವನ್ನು ಕಳೆದುಕೊಳ್ಳುತ್ತಾರೆ; ಆಕಾಶವೇ ಸೂರಾಗಿ, ಪ್ರಕೃತಿಯ ಏರುಪೇರುಗಳಿಗೆ ಬಲಿಪಶುಗಳಾಗುತ್ತಾರೆ.

**ಬಡವರಿಗೆ ಹಕ್ಕುಗಳಿವೆಯೇ?**

ಭಾರತದ ಸಂವಿಧಾನವು ಹಲವಾರು ಉದಾತ್ತ ಧ್ಯೇಯಗಳನ್ನು ಒಳಗೊಂಡಿದೆ. ಭೌತಿಕ ಸಂಪನ್ಮೂಲಗಳ ಹಂಚುವಿಕೆ ಮತ್ತು ನಿಯಂತ್ರಣವನ್ನು ಪರಿಚ್ಛೇದ ೩೯ (ಬಿ) ಪ್ರತಿಪಾದಿಸುತ್ತದೆ. ಅದೇ ರೀತಿ, ಪರಿಚ್ಛೇದ ೩೯ (ಎಫ್) ಸ್ವಾತಂತ್ರ್ಯ ಮತ್ತು ಸ್ವಾಭಿಮಾನಗಳನ್ನು ಪ್ರಜೆಗಳಲ್ಲಿ ಬಲಪಡಿಸಲು ಅಗತ್ಯವಾದ ಅವಕಾಶಗಳು ಮತ್ತು ಸೌಲಭ್ಯಗಳನ್ನು ನಿರ್ದೇಶಿಸುತ್ತದೆ.

ಅದೇನಿದ್ದರೂ, ವಾಸ್ತವದಲ್ಲಿ ಕೊಳೆಗೇರಿಗಳ ಬಡಪಾಯಿ ವಾಸಿಗಳಿಗೆ ತಮ್ಮ ಅಹವಾಲನ್ನು ಹೇಳಲಿಕ್ಕೂ ಅವಕಾಶ ನೀಡಲಾಗುವುದಿಲ್ಲ. ಆದ್ದರಿಂದಲೇ ಕಾನೂನು ವ್ಯವಸ್ಥೆಯು ಶ್ರೀಮಂತರ ಪರವಾಗಿದೆ ಮತ್ತು ಬಡವರ ವಿರುದ್ಧವಾಗಿದೆ ಎಂದು ಜನರು ಭಾವಿಸುವುದರಲ್ಲಿ ಆಶ್ಚರ್ಯವೇನಿಲ್ಲ.

ಕೊಳೆಗೇರಿಗಳಿಂದ ನಿವಾಸಿಗಳನ್ನು ಬಲಾತ್ಕಾರವಾಗಿ ಎಬ್ಬಿಸುವುದು ಸಮಸ್ಯೆಯ ಆಳಕ್ಕಿಳಿಯುವ ಬದಲು, ಅದರ ಮೇಲ್ಪದರವನ್ನಷ್ಟೇ ಕೆದಕುವ ಪ್ರಯತ್ನ. ಇದು ರೋಗಕ್ಕಿಂತಲೂ ಚಿಕಿತ್ಸೆಯೇ ಅಪಾಯಕಾರಿ ಎಂಬಂತಾಗುತ್ತದೆ. ಇದು ನಗರಗಳ ಜೀವನಕ್ಕೆ ಕೊಳೆಗೇರಿ ವಾಸಿಗಳ ಕೊಡುಗೆಯನ್ನು ನಿರ್ಲಕ್ಷಿಸುವ ಕೆಲಸವಲ್ಲದೆ ಮತ್ತೇನು?

ನಗರವಾಸಿಗಳು ತಮ್ಮ ನಗರಗಳ ಗಗನಚುಂಬಿಗಳ ಬಗ್ಗೆ ಹೆಮ್ಮೆ ಪಟ್ಟುಕೊಳ್ಳುವಾಗ, ಈ ಅದ್ಭುತಗಳನ್ನು ನಿರ್ಮಿಸಿದ ಕೆಲಸಗಾರರನ್ನೂ, ಇದಕ್ಕಾಗಿ ತಮ್ಮದೆಲ್ಲವನ್ನೂ ಧಾರೆಯೆರೆದ ಅವರ ದುಡಿಮೆಯನ್ನೂ ಮರೆತುಬಿಡುವುದು ನ್ಯಾಯವೇ?

ಕೊಳೆಗೇರಿ ವಾಸಿಗಳ ಬದುಕಿನೊಂದಿಗೆ ರಾಜಕಾರಣಿಗಳೂ ಚೆಲ್ಲಾಟವಾಡುತ್ತಾರೆ- ಚುನಾವಣೆಯಲ್ಲಿ ಅವರ ಓಟುಗಳನ್ನು ಗಳಿಸಲಿಕ್ಕಾಗಿ. ಆದರೆ, ಕೊಳೆಗೇರಿ ವಾಸಿಗಳ ಬದುಕಿನ ಹಕ್ಕು ಇದೆಲ್ಲದಕ್ಕಿಂತ ಮಿಗಿಲಾದುದು ಎಂಬುದನ್ನು ಅರ್ಥಮಾಡಿಕೊಳ್ಳಬೇಕಾಗಿದೆ. ಅವರ ಬೇಡಿಕೆಗಳು ಕೇವಲ ರಾಜಕೀಯ ಘೋಷಣೆಗಳು ಎಂದು ಅವನ್ನು ಬದಿಗೊತ್ತುವಂತಿಲ್ಲ.

ಅವರು ತಮಗೆ ಆಕಾಶದಿಂದ ಚಂದ್ರನನ್ನು ತಂದುಕೊಡಿ ಎಂದು ಕೇಳುತ್ತಿಲ್ಲ. ಬದಲಾಗಿ ತಲೆಯ ಮೇಲೊಂದು ಸೂರು ಕಟ್ಟಲಿಕ್ಕಾಗಿ ಒಂದು ತುಂಡು ಜಾಗ ಕೇಳುತ್ತಿದ್ದಾರೆ. ನಗರದ ಜೀವನದ ವಿವಿಧ ರಂಗಗಳಿಗೆ ಅವರ ದುಡಿಮೆಯ ಕೊಡುಗೆ ಗಮನಿಸಿದಾಗ, ಅವರ ಈ ಬೇಡಿಕೆ ನ್ಯಾಯಬದ್ಧ ಅನಿಸುತ್ತದೆ.




*ಇವನು ಹೆಂಡ ಕುಡಿದು ಮೋರಿಗೆ ಮಗುಚಿಕೊಳ್ಳದಿದ್ದರೆ ಹೊಸವರ್ಷ ಹೇಗೆ ತಾನೆ ಬಂದೀತು !*



**ಕೊಳೆಗೇರಿ ಸಮಸ್ಯೆಗೆ ಪರಿಹಾರ ಏನು?**

''ಕೊಳೆಗೇರಿಗಳ ನಿರ್ಮೂಲನ'' ದ ಬಗ್ಗೆ ಅಬ್ಬರದ ಪ್ರಚಾರದ ಸುದ್ದಿಗಳನ್ನು ಓದುತ್ತಲೂ ಕೇಳುತ್ತಲೂ ಇರುತ್ತೇವೆ. ಆದರೆ ಇಂಥ ನಿರ್ಮೂಲನಗಳು ನಗರಗಳಲ್ಲಿ ನಿವಾಸಯೋಗ್ಯ ಮನೆಗಳ ಲಭ್ಯತೆಯ ಸಮಸ್ಯೆಯನ್ನು ಪರಿಹರಿಸಲಾರವು. ಈ ಸಮಸ್ಯೆಯ ಪರಿಹಾರಕ್ಕಾಗಿ ಪರಿಣಾಮಕಾರಿ ಕಾರ್ಯಕ್ರಮಗಳು ಕಾರ್ಯಗತವಾಗದಿದ್ದರೆ, ಕೊಳೆಗೇರಿಗಳು ಮತ್ತೆ ಮತ್ತೆ ಹುಟ್ಟಿಕೊಳ್ಳುತ್ತಲೇ ಇರುತ್ತವೆ.

ಯಾಕೆಂದರೆ, ಕೊಳೆಗೇರಿಗಳಿಂದ ನಿವಾಸಿಗಳನ್ನು ಒದ್ದೋಡಿಸಿದರೆ ಅವರೇನು ಮಾಡುತ್ತಾರೆ? ಅವರು ಇನ್ನೊಂದು ಕೊಳೆಗೇರಿಗೆ ಹೋಗಿ ತಳವೂರುತ್ತಾರೆ ಅಥವಾ ಹೊಸತೊಂದನ್ನು ನಿರ್ಮಿಸುತ್ತಾರೆ. ಅವರಿಗೂ ಜೀವಿಸಲಿಕ್ಕೊಂದು ಜಾಗ ಬೇಕು ತಾನೇ?

ಆದ್ದರಿಂದ, ಕೊಳೆಗೇರಿ ವಾಸಿಗಳ ಪುನರ್ವಸತಿಗಾಗಿ ಸರಕಾರವು ನೀತಿಯೊಂದನ್ನು ರೂಪಿಸಬೇಕಾಗಿದೆ. ನಗರಗಳಿಂದ ೫೦ ಕಿ.ಮೀ. ದೂರದೊಳಗೆ ಕಡಿಮೆ ಬಾಡಿಗೆಯ ಮನೆಗಳನ್ನು, ಕಡಿಮೆ ದರದ ಸಾರ್ವಜನಿಕ ಸಾರಿಗೆ ವ್ಯವಸ್ಥೆಯನ್ನು ಒದಗಿಸಿದರೆ, ಕೊಳೆಗೇರಿಗಳ ಸಮಸ್ಯೆ ಪರಿಹರಿಸಲು ಸಾಧ್ಯ. ಆ ಮನೆಗಳ ಪರಿಸರವು ಮತ್ತೆ ಕೊಳೆಗೇರಿಯಾಗದಂತೆ ಯೋಜಿಸಬೇಕಾದ್ದು ಅವಶ್ಯಕ. ಈ ರೀತಿಯಲ್ಲಿ ಪುನರ್ವಸತಿ ಒದಗಿಸಿದರೆ, ಅದು ಕೊಳೆಗೇರಿ ವಾಸಿಗಳ ಜೀವನೋಪಾಯವನ್ನು ಕಿತ್ತುಕೊಳ್ಳುವುದಿಲ್ಲ. ಓಲ್ಗಾ ಟೆಲ್ಲಿಸ್ (ಎಐಆರ್ ೧೯೮೬ ಎಸ್‌ಸಿ ೧೮೦) ದಾವೆಯ ತೀರ್ಪಿನಲ್ಲಿ, ಭಾರತದ ಸಂವಿಧಾನದ ಪರಿಚ್ಛೇದ ೨೧ ಪ್ರಜೆಗಳಿಗೆ ನೀಡಿರುವ ಬದುಕುವ ಹಕ್ಕಿನ ಒಂದು ಮುಖ್ಯ ಅಂಶ ಏನೆಂಬುದನ್ನು ಸುಪ್ರೀಂಕೋರ್ಟ್ ಘೋಷಿಸಿದೆ: ''ಅದು ಜೀವನೋಪಾಯದ ಹಕ್ಕು, ಯಾಕೆಂದರೆ ಜೀವನೋಪಾಯ ಇಲ್ಲದಿದ್ದರೆ ಯಾವೊಬ್ಬ ವ್ಯಕ್ತಿಯೂ ಬದುಕಲಾರ.'' ಅದೇ ತೀರ್ಪಿನಲ್ಲಿ, ಜೀವನೋಪಾಯವನ್ನು ಕಿತ್ತುಕೊಳ್ಳುವುದರಿಂದಾಗಿ, ''ಜೀವನದ ಅಂತಃಸತ್ವ ಮತ್ತು ಅರ್ಥವೇ ಕಳೆದುಹೋಗುತ್ತದೆಯಲ್ಲದೆ, ಬದುಕುವುದೇ ಅಸಾಧ್ಯವಾಗುತ್ತದೆ'' ಎಂದು ಸುಪ್ರೀಂಕೋರ್ಟ್ ಸಾರಿದೆ.

ನಮ್ಮ ದೇಶದಲ್ಲಿ ಹಲವಾರು ಸಂದರ್ಭಗಳಲ್ಲಿ, ಬಡತನವನ್ನು ನಿರ್ಮೂಲ ಮಾಡುವ ಬದಲು ಸರಕಾರದ ಧೋರಣೆಗಳು ಬಡವರ ನಿರ್ಮೂಲ ಮಾಡುವುದನ್ನು ನಾವು ಕಾಣುತ್ತೇವೆ. ಕೊಳೆಗೇರಿ ವಾಸಿಗಳ ಬಗೆಗಿನ ಧೋರಣೆ ಇದಕ್ಕೊಂದು ಜೀವಂತ ನಿದರ್ಶನ. ಕೊಳೆಗೇರಿ ವಾಸಿಗಳು ತಾವು ಇಚ್ಛೆಸುವ ಬದುಕನ್ನು ಆಯ್ದುಕೊಳ್ಳುವ ಸ್ವಾತಂತ್ರ್ಯವಿಲ್ಲದ ಬಡಪಾಯಿಗಳು. ಸರಕಾರದ ಹಳಿತಪ್ಪಿದ ಧೋರಣೆಗಳಿಂದಾಗುವ ಅನ್ಯಾಯಕ್ಕೆ ಅವರು ಬಲಿಪಶುಗಳಾಗಬೇಕೇ?

ಅವರ ಸಮಸ್ಯೆಯ ಮೂಲ ಕಾರಣಗಳಿಗೆ ದೀರ್ಘಕಾಲಿಕ ಪರಿಹಾರ ಒದಗಿಸಬಲ್ಲ ಕಾರ್ಯಕ್ರಮಗಳನ್ನು ಕಾರ್ಯಗತಗೊಳಿಸಿದರೆ ಮಾತ್ರ ಕೊಳೆಗೇರಿ ವಾಸಿಗಳ ಬದುಕುವ ಹಕ್ಕು ಅರ್ಥಪೂರ್ಣವಾಗುತ್ತದೆ.

**ಅಡ್ಡೂರು ಕೃಷ್ಣ ರಾವ್**
ಮ್ಯಾನೇಜರ್, ಕಾರ್ಪೊರೇಷನ್ ಬ್ಯಾಂಕ್, ಎಂ. ಜಿ. ರಸ್ತೆ, ಚಿಕ್ಕಮಗಳೂರು - ೫೭೭ ೧೦೧

# ವಿಜ್ಞಾನ ವಿವೇಚನೆಯ ಗಡಿ ದಾಟಿದಾಗ

ಟಿ . ಆರ್. ಅನಂತರಾಮು

ಖಗೋಳ ವಿಜ್ಞಾನದ ಇತ್ತೀಚಿನ ಪುಸ್ತಕವೊಂದನ್ನು ಓದುತ್ತಿದ್ದೆ. ಥಟ್ಟನೆ ಅದರಲ್ಲಿದ್ದ ಭಯಾನಕ ಸಂಗತಿಯೊಂದರ ವಿವರಣೆ ಕಣ್ಣಿಗೆ ಬಿತ್ತು. ೧೯೮೯ರಲ್ಲಿ ಭೂಮಿಯ ಸಮೀಪ ಕ್ಷುದ್ರಗ್ರಹವೊಂದು ಹಾದು ಹೋಗಿ ಆತಂಕ ಮೂಡಿಸಿದ್ದರ ವರದಿ ಅದು. ಒಂದು ವೇಳೆ ೬ ಗಂಟೆ ಮುಂಚೆ ಅದು ಹಾದು ಹೋಗಿದ್ದರೆ ಭೂಮಿಯ ಮೇಲೆ ಎರಗಿ ಇಲ್ಲಿ ನಾಲ್ಕು ಕಿ.ಮೀ. ಅಗಲದ ಕುಳಿಯನ್ನು ಮೂಡಿಸುತ್ತಿತ್ತಂತೆ. ಭೂಮಿಯ ವೇಳಾಪಟ್ಟಿಗೂ ಈ ಆಕಾಶಬಾಂಬಿನ ಕಾರ್ಯಕ್ರಮಕ್ಕೂ ತಾಳೆಯಾಗದೆ ಅಂತೂ ನಾವೆಲ್ಲ ಬಚಾವಾದೆವಲ್ಲ ಎನ್ನಿಸಿತು ಅದನ್ನು ಓದಿದ ನಂತರ.

ವಾಸ್ತವವಾಗಿ ಇಂಥ ಸಂಕಲನ-ವ್ಯವಕಲನಗಳು ವಿಜ್ಞಾನಿಗಳ ಎದೆಗಳಲ್ಲಿ ಒಂದಷ್ಟು ಗೊಂದಲ ಗಾಬರಿ ಹುಟ್ಟಿಸಬಹುದೇ ವಿನಾ ನಮ್ಮ ನಿಮ್ಮಂತಹ ಸಾಮಾನ್ಯರು ಇಂಥ ಆಕಾಶದ ವಿದ್ಯಮಾನಕ್ಕೆ ಕವಡೆ ಕಿಮ್ಮತ್ತನ್ನೂ ಕೊಟ್ಟಿಲ್ಲ. ಹಿಂದೆಯೂ ಎಷ್ಟೋ ಬಾರಿ ಹೀಗಾಗಿದೆ. ಅವು ನಮ್ಮ ಅರಿವಿಗೂ ಬಂದಿಲ್ಲ. ಅಥವಾ ವಿಜ್ಞಾನಿಗಳು ಇಂಥ ಅಪಾಯಗಳನ್ನು ನಮ್ಮ ಗಮನಕ್ಕೆ ತಂದಿದ್ದರೂ ನಾವೇನೂ ನಿತ್ಯ ವ್ಯವಹಾರವನ್ನು ಬದಿಗೊತ್ತಿ ಈ ಕುರಿತೇ ಚಿಂತಾಕ್ರಾಂತರಾಗುತ್ತಿರಲಿಲ್ಲ. ಹೆಚ್ಚೆಂದರೆ ಇಂಥ ಸಂದರ್ಭಗಳನ್ನು ನಿಭಾಯಿಸುವ ತಾಕತ್ತು ಇಂದಿನ ಮುಂದುವರಿದ ತಂತ್ರಜ್ಞಾನಕ್ಕಿಲ್ಲವೇ ಎಂದು ವಿಜ್ಞಾನದ ಮೇಲೆ ಇದ್ದಕ್ಕಿದ್ದಂತೆ ಭರವಸೆ ಇಡುತ್ತೇವೆ. ಅಥವಾ ನವಗ್ರಹಗಳ ಪೂಜೆಗೆ ಅಣಿಮಾಡಲು ಅಡ್ಡಿ ಇಲ್ಲವಲ್ಲ!

ಈ ಪ್ರಸಂಗದ ಪ್ರಸ್ತಾವನೆ ಈಗ ಏಕೆ ? ಇನ್ನೊಂದು ಕ್ಷುದ್ರಗ್ರಹ ಬಡಿಯುವ ಅಪಾಯವಿದೆಯೆ ? ಅಮೆರಿಕದ ನಾಸಾ ವಿಜ್ಞಾನಿಗಳೇನಾದರೂ ನಮ್ಮನ್ನು ಥಕಥೈ ಕುಣಿಸಲು ಸಂಚು ಮಾಡಿದ್ದಾರೆಯೆ ? ಇಂಥ ಯಾವ ಪ್ರಸಂಗಗಳೂ ಈಗ ನಮ್ಮೆದುರಿಗಿಲ್ಲ. ನನಗೆ ಕುತೂಹಲ ಕಾಡಿದ್ದು ಕ್ಷುದ್ರಗ್ರಹಗಳೆಂಬ ಆಕಾಶದ ಆತಂಕವಾದಿಗಳ ಪಟ್ಟಿಯಲ್ಲಿ ಎಂತೆಂಥವೋ ಹೆಸರುಗಳು ಸೇರಿರುವುದು. ಚಿಕಾಗೋ, ರಾಮಾನುಜನ್, ಕ್ಯಾಲಿಫೋರ್ನಿಯಾ ಇತ್ಯಾದಿ. ಇದರ ಜೊತೆಗೆ ಇತ್ತೀಚೆಗೆ ಸ್ಯಾಲಿರೈಡ್ ಎಂಬ ಹೆಸರೂ ಇದೆ ನಿಜ. ಒಂದು ಲಕ್ಷಕ್ಕಿಂತಲೂ ಹೆಚ್ಚಿನ ಕ್ಷುದ್ರಗ್ರಹಗಳನ್ನು ವಿಜ್ಞಾನಿಗಳು ಗುರುತಿಸಿದ್ದಾರೆ. ಅವಕ್ಕೆಲ್ಲ ತಮಗೆ ಬೇಕಾದ ಹೆಸರುಗಳನ್ನು ಕೊಟ್ಟಿದ್ದಾರೆ. ಚಿಕಾಗೋ, ರಾಮಾನುಜನ್ ಇವೆಲ್ಲ ಸರಿಯೇ; ಪರಿಚಿತ ಹೆಸರುಗಳು. ಆದರೆ ಯಾರು ಈ ಸ್ಯಾಲಿರೈಡ್ ? ಹೆಸರಿನ ಬೆನ್ನು ಹಿಡಿದು ಹೊರಟಾಗ ಸಿಕ್ಕಿದ್ದು ಈ ನತದೃಷ್ಟ ಶಾಲಾ ಅಧ್ಯಾಪಕಿಯ ಹೆಸರು. ೧೯೮೬ರಲ್ಲಿ ಛಾಲೆಂಜರ್ ನೌಕೆ ಗಗನದಲ್ಲಿ ಸ್ಫೋಟಿಸಿದಾಗ ಈಕೆಯೂ ಸೇರಿದಂತೆ ಏಳು ಮಂದಿ ಖಗೋಳಯಾತ್ರಿಗಳು ಸಹಸ್ರ ಹೋಳುಗಳಾಗಿ ಸಿಡಿದಿದ್ದರು. ಈ ಏಳೂ ಮಂದಿಯ ಹೆಸರುಗಳನ್ನು ಹೊತ್ತ ಕ್ಷುದ್ರಗ್ರಹಗಳು ಈಗಲೂ ಅಂಡಲೆಯುತ್ತಿವೆ, ಆ ದಾರುಣ ಸಂಗತಿಯನ್ನು ಮತ್ತೆ ಮತ್ತೆ ನಮ್ಮ ಎದೆಯೊಳಗೆ ತುರುಕುತ್ತ. ಇವುಗಳ ಹೆಸರು ಕೇಳಿದೊಡನೆ ಎದೆಯಲ್ಲಿ ಈಟಿ ಹೊಕ್ಕ ಅನುಭವವಾಗುತ್ತದೆ. ನಿಜ, ತಂತ್ರಜ್ಞಾನ ಅವಿವೇಕವಲ್ಲದಿರಬಹುದು. ಆದರೆ ಅದನ್ನು ನಿಭಾಯಿಸುವ ಪರಿ, ಆಗುವ ಎಡವಟ್ಟುಗಳು, ಬೇಡುವ ಬಲಿಗಳು ? ನಾಗಸಾಕಿ ಹಿರೋಷಿಮದ ಮೇಲೆ ಹಾಕಿದ ಬಾಂಬು ಉದ್ದೇಶಪೂರ್ವಕ. ಆದರೆ ಛಾಲೆಂಜರ್ ನೌಕೆಯ ಸ್ಫೋಟ ಅಚಾತುರ್ಯ, ಅವಿವೇಕದ



ಪರಮಾವಧಿ. ಕಳೆದ ಇಪ್ಪತ್ತು ವರ್ಷಗಳಲ್ಲಿ ವಿಜ್ಞಾನ - ತಂತ್ರಜ್ಞಾನ ಮಾಡಿದ ಕುಖ್ಯಾತ ಸಾಧನೆಯ ಪಟ್ಟಿಯಲ್ಲಿ ಛಾಲೆಂಜರ್ ದುರಂತವೂ ಸೇರಿಬಿಟ್ಟಿದೆ. ಈಚಿನ ಡಿಸ್ಕವರ್ ಪತ್ರಿಕೆ ಇಂಥ ದುರಂತ, ಅವಿವೇಕ, ಅಹಮಿಕೆಗಳನ್ನು ಪಟ್ಟಿ ಮಾಡುತ್ತ ವಿಜ್ಞಾನದ ಹೆಸರಿನಲ್ಲಾಗುವ ಅನರ್ಥಗಳನ್ನು ಸಾರ್ವಜನಿಕರ ಮುಂದಿಟ್ಟಿವೆ.

ಆಲ್ಬರ್ಟ್ ಐನ್‌ಸ್ಟೈನ್ ಅವರ ಉಲ್ಲೇಖನೀಯ ನುಡಿಯೊಂದಿದೆ: ''ಎರಡು ವಿಚಾರಗಳು ನನಗೆ ತಿಳಿದಿರುವಂತೆ 'ಅನಂತ'. ಒಂದು ವಿಶ್ವ, ಇನ್ನೊಂದು ಮಾನವ ಮೂಢಮತಿ. ಮೊದಲದರ ಬಗ್ಗೆ ನನಗೆ ಸ್ಪಷ್ಟ ತಿಳಿವಿದೆ.'' ವೈಜ್ಞಾನಿಕ ಪ್ರಗತಿಯ ಉನ್ನತ ಹಂತದ ಈ ಘಳಿಗೆಯಲ್ಲೂ ಈ ಮಾತು ಪ್ರಸ್ತುತ.

ಅಂತರಿಕ್ಷ ಷಟಲ್‌ಗಳಿಗೆ ಉದ್ದಿಷ್ಟ ಗುರಿಯಿದೆ. ಅವು ಗಗನಯಾತ್ರಿಗಳನ್ನೂ, ಅಲ್ಲಿ ರೀಪೇರಿ ಮಾಡಬಲ್ಲ ಯಂತ್ರ ಸಾಧನಗಳನ್ನೂ ಒಯ್ಯಬಲ್ಲವು. ಉದ್ದಿಷ್ಟ ಗುರಿ ನೆರವೇರಿದೊಡನೆ ಮರಳಿ ಕರೆತರುವ ಸಾಮರ್ಥ್ಯವಿರುವಂತೆ ರೂಪಿಸಿರುತ್ತದೆ. ಛಾಲೆಂಜರ್ ಈ ಬಗೆಯ ಒಂದು ಷಟಲ್. ೧೯೮೧ರಲ್ಲಿ ಕೊಲಂಬಿಯ ಹೆಸರಿನ ಷಟಲ್ ಒಂದನ್ನು ಪ್ರಥಮ ಬಾರಿಗೆ ಅಮೆರಿಕ ಉಡಾಯಿಸಿ ಯಶಸ್ವಿಯಾದ ಹಿನ್ನೆಲೆಯಲ್ಲಿ ಛಾಲೆಂಜರನ್ನು ಕಕ್ಷೆಗೇರಿಸಲು ಯೋಚಿಸಿತ್ತು. ಯಾಂತ್ರಿಕ ಕಾರಣಗಳಿಂದಾಗಿ ಗಗನಕ್ಕೆ ಚಿಮ್ಮುವ ಯೋಜನೆಯನ್ನು ಐದು ಬಾರಿ ಮುಂದೂಡಲಾಗಿತ್ತು. ಆರನೆಯ ಬಾರಿ ಯಶಸ್ವಿಯಾಯಿತು. ಸ್ಯಾಲಿರೈಡ್ ಸೇರಿದಂತೆ ಏಳು ಮಂದಿ ಗಗನಯಾತ್ರಿಗಳು ನಗುನಗುತ್ತ ಷಟಲ್ ಪ್ರವೇಶಿಸಿದರು. ೧೯೮೬ರ ಜನವರಿ ೨೮, ಬೆಳಗಿನ ೧೧ ಗಂಟೆ, ೩೯ ಮಿನಿಟು, ೧೩ ಸೆಕೆಂಡು : ಛಾಲೆಂಜರ್ ಹದಿನಾಲ್ಕು ಕಿ.ಮೀ. ಮೇಲೆ ಚಿಮ್ಮಿತ್ತು. ೭೩ ಸೆಕೆಂಡು ಅಬಾಧಿತವಾಗಿ ಗಗನಮುಖಿಯಾಗಿ ಪಯಣ ಸಾಗಿಸಿತ್ತು. ಮುಂದಿನ ಒಂದು ನಿಮಿಷದಲ್ಲಿ ಛಾಲೆಂಜರ್ ದೊಡ್ಡ ಜ್ವಾಲಾಮುಖಿಯಂತೆ ಬಿಳಿ ಮೋಡ ಉಗುಳುತ್ತ ಭಯಂಕರವಾಗಿ ಸ್ಫೋಟಿಸಿ ಛಿದ್ರಛಿದ್ರವಾಗಿ ಹೋಯಿತು. ಇತ್ತ ತಮ್ಮ ಅಧ್ಯಾಪಕಿಯನ್ನು ಬೀಳ್ಕೊಡಲು 'ರೈಡ್ ಸ್ಯಾಲಿ ರೈಡ್' ಎಂದು ಹುರಿದುಂಬಿಸುತ್ತಿದ್ದ ಮಕ್ಕಳ ಬಾಯಿ ನೋಡ ನೋಡುತ್ತಲೇ ಕಟ್ಟಿಹೋಯಿತು. ಅತ್ತ ಸ್ಯಾಲಿರೈಡ್ ಛಾಲೆಂಜರನ್ನು ರೈಡ್ ಮಾಡುತ್ತಿದ್ದರೆ, ಇತ್ತ ಸಾವು ಏಳೂ ಮಂದಿಯ ಮೇಲೆ ಸವಾರಿ ಮಾಡುತ್ತಿತ್ತು. ಈ ಘಟನೆಯಿಂದ ಕಂಗಾಲಾದ ನಾಸಾ ಸಂಸ್ಥೆ ಮುಂದಿನ ಎರಡೂವರೆ ವರ್ಷಗಳ ಕಾಲ ದಿಗ್ಭ್ರಮೆಗೊಂಡು ಯಾವ ಷಟಲ್ ಯೋಜನೆಗಳನ್ನೂ ಕೈಗೆತ್ತಿಕೊಳ್ಳುವ ಸಾಹಸ ಮಾಡಲಿಲ್ಲ. ಸ್ವತಃ ಅಮೆರಿಕದ ಅಧ್ಯಕ್ಷರೇ ಎನ್‌ಕ್ವೈರಿ ಕಮಿಟಿ ನೇಮಿಸಿದರು. ಕಮಿಟಿ ವರದಿ ಸಲ್ಲಿಸಿತು.

ಛಾಲೆಂಜರ್‌ನ ರಾಕೆಟ್ ಬೂಸ್ಟರುಗಳ ಪೈಕಿ ಒಂದರ ಬಳೆ ಕೂಡಿಕೆ ಜಾಗದಲ್ಲಿ ರಂಧ್ರವಾಗಿತ್ತು. ಇಲ್ಲಿಂದ ಹೊರಬಂದ ಅನಿಲ ಆ ಮಹಾ ಒತ್ತಡದಲ್ಲಿ ಇಂಧನದ ಟ್ಯಾಂಕನ್ನು ಉರಿಸಿ, ಅವಘಡ ಮಾಡಿತ್ತು. ಈ ಬಳೆಯನ್ನು ತಾಂತ್ರಿಕವಾಗಿ 'O' ರಿಂಗ್ ಎನ್ನುತ್ತಾರೆ. ಇಂಥ ಪ್ರಯೋಗಕ್ಕೆ ಮೊದಲು ಸಾಕಷ್ಟು ಪರೀಕ್ಷೆ ಆಗಬೇಕಿತ್ತು. ಅದೂ ಆಗಿತ್ತು. ವಾತಾವರಣದ ಉಷ್ಣತೆ ತುಂಬ ಇಳಿಮುಖವಾಗಿದ್ದರೆ ಈ ರಿಂಗ್‌ಗಳು ಕೆಲಸ ಮಾಡಲು ನಕಾರ ಮಾಡುತ್ತವೆ. ಐದು ಬಾರಿ ಉಡಾವಣೆಯನ್ನು ಮುಂದೂಡಿದ್ದೂ ನಿಜ. ಎಂಜಿನಿಯರುಗಳು ಈ ಅಪಾಯದ ಬಗ್ಗೆ ಎಚ್ಚರಿಕೆ ನೀಡಿದ್ದೂ ನಿಜ - ಅಪಾಯ ಎರಗಿದ್ದೂ ನಿಜ. ಆ ದಿನದ ವಾತಾವರಣದ ಉಷ್ಣತೆ ಮೊದಲು ಉಡಾವಣೆ ಮಾಡಿದಾಗ ಇದ್ದುದಕ್ಕಿಂತ ೧೫

ಡಿಗ್ರಿ ಕಡಿಮೆ. ಈಗ ಛಾಲೆಂಜರ್ ಎಂದರೆ ಕೆಟ್ಟ ಕನಸು ಕಂಡಂತೆ ನಾಸಾ ವಿಜ್ಞಾನಿಗಳು ಬೆಚ್ಚುತ್ತಾರೆ. ಉಪೇಕ್ಷೆಗೆ ತೆತ್ತ ಬೆಲೆ ಅನೂಹ್ಯ.

**ಅಡಿ, ಮೀಟರು ಮತ್ತು ನಷ್ಟ!**

ಮನೆ ಮುಂದೆ ಬರುವ ತರಕಾರಿ ಕೊಳ್ಳುತ್ತೀರಿ. ನೋಟನ್ನು ಕೊಡುತ್ತೀರಿ. ಚಿಲ್ಲರೆ ಕೊಡಿ ಎನ್ನುತ್ತಾಳೆ ತರಕಾರಿ ಮಾರುವ ಹೆಂಗಸು. ಜೇಬನ್ನು ತಡಕಾಡುತ್ತೀರಿ. ಉಹುಂ ಎನ್ನುತ್ತೀರಿ. ಆಕೆ ಹಾಗೂ ಹೀಗೂ ಚಿಲ್ಲರೆ ಜೋಡಿಸಿ ನಿಮಗೆ ಕೊಡುವಾಗ ನಾಲ್ಕಾಣೆ ಕಡಿಮೆ ಇದೆ ಎನ್ನುತ್ತಾಳೆ. ನೀವು ಅಷ್ಟೇನೂ ತಲೆ ಕೆಡಿಸಿಕೊಳ್ಳದೆ ಚಿಲ್ಲರೆಯನ್ನು ಜೇಬಿಗೆ ಸೇರಿಸುತ್ತೀರಿ. ಬಸ್‌ನಲ್ಲೂ ಇದೇ ಪ್ರಸಂಗದ ಪುನರಾವರ್ತನೆ. 'ನಾಲ್ಕಾಣೆ ಇಲ್ಲ ಆಮೇಲೆ ಕೇಳಿ.' ಬಸ್ಸಿನಿಂದ ಇಳಿಯುವಾಗ ನಿಮಗೆ ನೆನಪಿರುತ್ತದೆ, ಆದರೂ ಕೆಲವೊಮ್ಮೆ ಕೇಳುವುದಿಲ್ಲ. 'ಸರಿ ಬಿಡು, ನಾಲ್ಕಾಣೆ ತಾನೆ' ಎನ್ನುತ್ತದೆ ನಿಮ್ಮ ಮನಸ್ಸು.

ನಿಮ್ಮ ಸೈಟಿನ ಅಳತೆಯನ್ನು ಎಂದಾದರೂ ಮೀಟರಿನಲ್ಲಿ ಹೇಳಿದ್ದೀರಾ ? ೩೦ x ೪೦ ತಾನೇ ನಿಮ್ಮ ನಾಲಿಗೆಯ ಮೇಲೆ ಥಟ್ಟನೆ ನಿಲ್ಲುವುದು ? ಹೌದು. ರೂಪಾಯಿ, ಆಣೆ, ಕಾಸು ಲೆಕ್ಕ, ಅಡಿ ಲೆಕ್ಕ ಚುಕ್ತವಾಗಿ ಹತ್ತಿರ ಹತ್ತಿರ ೪೫ ವರ್ಷಗಳಿಗೆ ಬಂತು. ಆದರೂ ನಮ್ಮ ನಿತ್ಯ ಅನುಭವದಲ್ಲಿ ಆಣೆ, ಕಾಸುಗಳು, ಅಡಿ ಲೆಕ್ಕಗಳು ಜೀವಂತವಾಗಿಬಿಟ್ಟಿವೆ. ಇವೆಲ್ಲ ಅಂಥ ಗಂಭೀರ ಸಮಸ್ಯೆಯನ್ನು ಒಡ್ಡದಿರಬಹುದು. ಆದರೆ ಆಕಾಶದಲ್ಲಿ ಒಂದು ಪದ್ಧತಿಯಿಂದ ಇನ್ನೊಂದು ಪದ್ಧತಿಗೆ ಪರಿವರ್ತನೆ ಮಾಡದಿದ್ದರೆ ಆಗುವ ಅನಾಹುತ ತುಂಬ ದೊಡ್ಡದು; ಹಾಗೆಯೇ ನಷ್ಟದ ಪ್ರಮಾಣವೂ ಕೂಡ.

ಅಮೆರಿಕದ ನಾಸಾ ಸಂಸ್ಥೆ ಮಂಗಳ ಗ್ರಹಕ್ಕೆ 'ಮಾರ್ಸ್ ಕ್ಲೈಮೇಟ್ ಆರ್ಬಿಟರ್' ಎಂಬ ಉಪಗ್ರಹವನ್ನು ಉಡಾಯಿಸಿತು. ಮಂಗಳನ ಮೂಲೆ ಮಡಕುಗಳನ್ನು ಶೋಧಿಸಿ, ಅದರ ಹಿಮದ ಚರಿತ್ರೆಯನ್ನು ಬಗೆದು, ಧ್ರುವದ ಮೇಲಿನ ಹಿಮಟೋಪಿಯನ್ನು ಕುರಿತು ವರದಿ ಮಾಡುವ ಹೊಣೆ ಇದರ ಮೇಲಿತ್ತು. ಇಡೀ ಯೋಜನೆಗೆ ೧೬೫ ದಶಲಕ್ಷ ಡಾಲರ್ ಖರ್ಚಾಗಿತ್ತು. ೧೯೯೯ರ ಸೆಪ್ಟೆಂಬರ್ ತಿಂಗಳು ಇದು ಮಂಗಳನನ್ನು ಮೂಸಿ ನೋಡುವ ಬದಲು ಅದರ ನೆಲಕ್ಕೆ ಅಪ್ಪಳಿಸಿತು. ಅಲ್ಲಿಗೆ ಅದರ ಕತೆ ಮುಗಿಯಿತು. ಏಕೆ ಹೀಗಾಯಿತೆಂದು ನಾಸಾ ವಿಜ್ಞಾನಿಗಳು ತಲೆ ಕೆಡಿಸಿಕೊಂಡರು. ಆರ್ಬಿಟರ್‌ನ ಎಲ್ಲ ಬಿಡಿ ಭಾಗಗಳೂ ಅವುಗಳ ಕಾರ್ಯವನ್ನು ಯಶಸ್ವಿಯಾಗಿಯೇ ನಿರ್ವಹಿಸುತ್ತಿದ್ದವು. ಯಾವುದೇ ಯಂತ್ರ ದೋಷವು ಇರಲಿಲ್ಲ. ಕಮಾಂಡ್ ಕೊಟ್ಟದ್ದೂ ಸರಿಯಾಗಿಯೇ ಇತ್ತು.

ಆದದ್ದು ಇಷ್ಟು. ಉಪಗ್ರಹ ಹೇಗೆ ಕಾರ್ಯ ನಿರ್ವಹಿಸಬೇಕೆಂದು ಒಂದು ತಂಡ ಇದಕ್ಕೆ ನೀಡಿದ ಆದೇಶ ಅಡಿ, ಪೌಂಡ್ ಏಕಮಾನದಲ್ಲಿ. ಇನ್ನೊಂದು ತಂಡ ಆಣತಿ ನೀಡಿದ್ದು, ನ್ಯೂಟನ್, ಮೀಟರ್ ಏಕಮಾನದಲ್ಲಿ . ಪೋಲಾರ್ ಆರ್ಬಿಟರ್ ಕಕ್ಕಾಬಿಕ್ಕಿಯಾಯಿತು. ಎರಡೂ ಆದೇಶಗಳನ್ನು ಪಾಲಿಸಲಿಲ್ಲ. ಪರಿಣಾಮ ಅದು ಮಂಗಳನ ಮಡಿಲಿಗೇ ಬಿದ್ದು ಆತ್ಮಾಹುತಿ ಮಾಡಿಕೊಂಡಿತು. ಇದು ನಿಜಕ್ಕೂ ತಂತ್ರಜ್ಞಾನದ ಸೋಲಲ್ಲ. ಬದಲಾದ ಗಣನೆಯ ವ್ಯವಸ್ಥೆಗೆ ಹೊಂದಿಕೊಳ್ಳಲಾಗದ ಮನೋಭಾವಕ್ಕೆ ತೆತ್ತ ಭಾರಿ ಬೆಲೆ.

ಅಮೆರಿಕ ಏಕೆ ಇಂಥ ಎಡವಟ್ಟು ಮಾಡಿತ್ತು ? ೧೯೬೪ರಲ್ಲೇ 'ಅಮೆರಿಕದ ನ್ಯಾಷನಲ್ ಬ್ಯೂರೋ ಆಫ್ ಸ್ಟ್ಯಾಂಡರ್ಡ್ಸ್' ಮೆಟ್ರಿಕ್ ಏಕಮಾನವನ್ನು ರೂಢಿಗೆ ತಂದಿತ್ತು. ಗುಣಾಕಾರ ಸುಲಭ ಎನ್ನುವ ಕಾರಣವೂ ಒಂದು. ಆದರೆ ಅಲ್ಲಿ ಯಾರೂ ಕ್ಯಾರೆ ಎನ್ನಲಿಲ್ಲ. ೧೯೭೦ರಲ್ಲಿ ಅಧ್ಯಕ್ಷ ಜಿಮ್ಮಿ ಕಾರ್ಟರ್ ರಾಷ್ಟ್ರಾದ್ಯಂತ ಏಕ ರೀತಿಯಲ್ಲಿ ಮೆಟ್ರಿಕ್ ಪದ್ಧತಿ ಬಳಕೆಗೆ ಬರಲೇಬೇಕೆಂದು ಘೋಷಿಸಿದರು. ಆಗಲೂ ಯಾರೂ ಕ್ಯಾರೆ ಎನ್ನಲಿಲ್ಲ. ಹೊಸ ವ್ಯವಸ್ಥೆಯನ್ನು ಒಪ್ಪಿಕೊಳ್ಳಲು ಅಮೆರಿಕ ಯಾವ ಕಾಳಜಿಯನ್ನೂ ತೋರಲಿಲ್ಲ. ಈಗಲೂ ಅಲ್ಲಿನ ಸಾರ್ವಜನಿಕರು ಹೇಳುತ್ತಾರೆ : 'ನಾವು ಒಂದು ಗ್ಯಾಲನ್ ನೀರು ಬೇಕು ಎಂದು ಕೇಳುತ್ತೇವೆಯೇ ಹೊರತು ೩.೭೮೫ ಲೀಟರು ಬೇಕೆಂದು ಕೇಳುವುದಿಲ್ಲ.'



ಚಿತ್ರ ಬಿಡಿಸುವುದು ನಿಲ್ಲಿಸಿ ಸಿನಿಮಾ ಮಾಡಲು ಬಂದೆಯಾ ? ನಿನ್ನನ್ನೂ ಆ ನಿನ್ನ ಮಾಧುರಿಯನ್ನೂ ಮುಗಿಸಿಬಿಡುತ್ತೇವೆ ಹುಷಾರ್. ನಾವು ಸಾಂಸ್ಕೃತಿಕ ಪೊಲೀಸ್ ಗೂಂಡಾಗಳು ತಿಳಿಯಿತೆ ? ನಮ್ಮನ್ನು ಕೇಳದೆ ಕಲೆ-ಗಿಲೆ ಅಂದರೆ ಈಗಲೇ ನಿನಗೆ ಮೋಕ್ಷ, ನೋಡು !!


*ಆದಿಮ ಪಕ್ಷಿಯ ರೆಕ್ಕೆ, ಡೈನೋಸಾರ್ ಬಾಲ*

**ಪಿಲ್ಟ್‌ಡೌನ್ ಮ್ಯಾನ್ - ಹಯಗ್ರೀವ ಮತ್ತು ಮಿಸ್ಸಿಂಗ್ ಡೈನೋಸಾರ್**

ಈ ಮೇಲಿನ ಕ್ರಮವನ್ನು ಬದಲಾಯಿಸಿ ಈ ಪ್ರಸಂಗವನ್ನು ಹಯಗ್ರೀವನೊಂದಿಗೆ ಪ್ರಾರಂಭಿಸೋಣ. ಹಯಗ್ರೀವ ಎಂದರೆ ಕುದುರೆಮುಖದ ವಿಷ್ಣು. ಲಕ್ಷ್ಮಿಯೊಡನೆ ವಿಷ್ಣು ಸರಸ ಸಲ್ಲಾಪದಲ್ಲಿ ತೊಡಗಿದ್ದಾಗ ಜೋಕ್ ಹೆಸರಿನಲ್ಲಿ ಸ್ವಲ್ಪ ಸೀರಿಯಸ್ ಆಗೇ ವ್ಯಂಗ್ಯ ಆಡಿದ. ಲಕ್ಷ್ಮಿಗೆ ಕೋಪ ಬಂದು ನಿನ್ನ ತಲೆ ಉರುಳಲಿ ಎಂದು ಶಾಪ ಕೊಡುವುದೇ ? ಶಾಪ ಎಂದಮೇಲೆ ಅದು ಕಾರ್ಯರೂಪಕ್ಕೆ ಬರಲೇಬೇಕಲ್ಲ.

ಮಧುಕೈಟಭರ, ಎಂದರೆ ವಿಷ್ಣುವಿನ ಕಿವಿಯ ಕುಗ್ಗೆಯಿಂದ ಹುಟ್ಟಿದ ದೈತ್ಯರ, ಹಾವಳಿಗೆ ಕಂಗೆಟ್ಟ ದೇವತೆಗಳು ಯಥಾಪ್ರಕಾರ ವಿಷ್ಣುವಿನ ಮೊರೆಹೊಕ್ಕರು. ವಿಷ್ಣು ಮಹಾಶೇಷನ ಸುಪ್ಪತ್ತಿಗೆ, ಶಾರ್ಙ್ಗ ಧನುಸ್ಸಿನ ದಿಂಬಿನಲ್ಲಿ ಒರಗಿ ವಿಶ್ರಾಂತಿಸುತ್ತಿದ್ದ. ಅವನನ್ನು ಹೇಗೆ ಎಚ್ಚರಗೊಳಿಸುವುದು. ದೇವತೆಗಳು ಕಾಮನ್‌ಸೆನ್ಸ್ ಉಪಯೋಗಿಸಿದರು. ಗೆದ್ದಲು ಹುಳುಗಳಿಗೆ ಯಜ್ಞದಲ್ಲಿ ಆವಿರ್ಭಾಗ ಕೊಡುವುದಾಗಿ ಪುಸಿಹೊಡೆದು ಧನುಸ್ಸನ್ನು



*ಪಕ್ಷಿ ಪಳೆಯುಳಿಕೆ ?*

ಕತ್ತರಿಸಲು ಹೇಳಿದರು. ಗೆದ್ದಲು ಹತ್ತಿದರೆ ಕೇಳಬೇಕೆ ? ಧನುಸ್ಸು ಮುರಿದು, ಪಟಾರ್ ಎಂದು ಸಿಡಿದು ವಿಷ್ಣುವಿನ ತಲೆಯನ್ನೇ ಕತ್ತರಿಸಿತು. ಗಾಬರಿಗೊಂಡ ದೇವತೆಗಳು ಕುದುರೆಯ ಮುಖವೊಂದನ್ನು ತಂದು ವಿಷ್ಣುವಿನ ಮುಂಡಕ್ಕೆ ಜೋಡಿಸಿದರು. ವಿಷ್ಣು ಹಯಗ್ರೀವನಾದ. ದೇವೀ ಭಾಗವತದಲ್ಲಿ ಈ ಪ್ರಸಂಗದ ವರ್ಣನೆಯಿದೆ. ತುಂಬುರ ಕೂಡ ಹಯವದನ ತಾನೆ ?

ಈ ಹಿನ್ನೆಲೆ ಈಗ ಏಕೆ ಎನ್ನುವಿರಾ ? 'ಪಿಲ್ಟ್‌ಡೌನ್ ಮ್ಯಾನ್' ಕತೆಯೂ ಇದೆ. ಮಾನವ ವಿಕಾಸದ ಚರಿತ್ರೆಯ ಬಗ್ಗೆ ಆಸಕ್ತಿ ಇದ್ದವರಿಗೆಲ್ಲ ಈ ಹೆಸರು ಪರಿಚಿತ. ಈ ಪ್ರಸಂಗದ ಹಿನ್ನೆಲೆ ಡೈನೋಸಾರ್‌ಗಳನ್ನು ಕುರಿತು ಮುನ್ನೆಲೆಯೂ ಆಗುವುದರಿಂದ ಒಂದಷ್ಟು ಒಳನೋಟ ಆವಶ್ಯಕ.

೧೯೦೮-೧೨ರ ನಡುವೆ ಒಂದು ಕುತೂಹಲ ಸಂಗತಿ ನಡೆಯಿತು. ಇಂಗ್ಲೆಂಡಿನ ಸಸೆಕ್ಸ್ ಭಾಗದ ಒಂದು ಸಾಧಾರಣ ಪ್ರದೇಶ ಪಿಲ್ಟ್‌ಡೌನ್. ಅಲ್ಲಿ ದೊರೆತ ಪಳೆಯುಳಿಕೆಯೊಂದು ವಿಕಾಸವಾದವು ಬೆಂಬಲಿಸಿದ ಜೀವಿ ವಿಜ್ಞಾನಿಗಳಿಗೆ ಅತ್ಯಾನಂದ ತಂದಿತು. ಮಾನವ ಮತ್ತು ಏಪ್ಸ್ ನಡುವಿನ ಕೊಂಡಿ ಸಿಕ್ಕಿದರೆ ಏನನ್ನಿಸಬೇಡ ? ಡಾಸನ್ ಎಂಬ ಮಹಾಶಯ ಅಲ್ಲಿನ ಕಲ್ಲಿನ ಗಣಿಯೊಂದರಲ್ಲಿ ಪಳೆಯುಳಿಕೆ ಹುಡುಕಿ ತೆಗೆದಿದ್ದ : ದವಡೆ ಹಾಗೂ ಹಲ್ಲು ಪಕ್ಕಾ ಏಪ್‌ಗಿರುವಂತೆ. ತಲೆ ಬುರುಡೆ ಮಾನವನದ್ದು. ನಾವು ಇದನ್ನು 'ಕಪಿಮಾ' ಎನ್ನೋಣ. ಜೀವಿ ವಿಜ್ಞಾನಿಗಳ ಪಡೆಗಳೇ ಈ ಪಳೆಯುಳಿಕೆಗಳ ಬಗ್ಗೆ ಉದ್ದುದ್ದ ಥೀಸಿಸ್ ಬರೆದವು. ೪೦ ವರ್ಷಗಳ ಕಾಲ ಇದನ್ನು ಜೀವಿ ವಿಜ್ಞಾನದ ಅತ್ಯುತ್ತಮ ಪಳೆಯುಳಿಕೆಯ ಮಾದರಿ ಎಂದು ತಲೆಯ ಮೇಲಿಟ್ಟು ಕುಣಿಸಿದ್ದೂ ಆಯಿತು. ಯಾರೋ ಒಬ್ಬ ಆಸಾಮಿಗೆ ಸಂಶಯ ಬಂತು. ರೇಡಿಯೋ ಕಾರ್ಬನ್ ವಿಧಾನದಿಂದ ಪಳೆಯುಳಿಕೆಯ ವಯೋಮಾನವನ್ನು ನಿರ್ಧರಿಸಿದಾಗ ಅದು ೧೩ನೇ ಶತಮಾನದ ಒಂದು ಮಾನವ ಬುರುಡೆ ಎಂಬ ಸಂಗತಿ ಬೆಳಕಿಗೆ ಬಂತು. ಆದರೆ ದವಡೆ ? ಹೌದು. ಹಲ್ಲನ್ನೆಲ್ಲ ಮಸೆದು ಮಸೆದು ಮೊಂಡ ಮಾಡಿ ಏಪ್ ಹಲ್ಲಿನಂತೆ ರೂಪುಕೊಟ್ಟು ಪುಣ್ಯಾತ್ಮ ಭಟ್ಟಿ ಇಳಿಸಿದ್ದ. ಯಾವುದು ಬುರುಡೆ ? ಯಾರ ಬುರುಡೆ ? ಹೀಗಾಗಿ ಇದು ಬುರುಡೆ ಪ್ರಸಂಗವಾಗಿ ವಿಜ್ಞಾನ ಪ್ರಪಂಚದಲ್ಲಿ ಕುಖ್ಯಾತವಾಗಿದೆ.

ಈಗ ಅಸಲೀ ವಿಚಾರಕ್ಕೆ ಮರಳೋಣ. ಕಳೆದ ವರ್ಷದ ನವೆಂಬರ್ ತಿಂಗಳ ನ್ಯಾಷನಲ್ ಜಿಯಾಗ್ರಫಿಕ್ ಪತ್ರಿಕೆಯಲ್ಲಿ ಹಾರುವ ಡೈನೋಸಾರ್ ಕುರಿತು ಪ್ರಕಟವಾಗಿರುವ ಈ ವಿವರಣೆ ನೋಡಿ :

'ಆದಿಮ ಪಕ್ಷಿಯ ರೆಕ್ಕೆ. ಡೈನೋಸಾರ್ ಬಾಲ. ಈ ಪ್ರಾಣಿಯ ಅವಶೇಷ ದೊರೆತಿರುವುದು ಚೀನದ ಲಿಯೋನಿಂಗ್ ಪ್ರಾಂತ್ಯದಲ್ಲಿ. ಡೈನೋಸಾರ್ ಮತ್ತು ಹಕ್ಕಿಗಳ ನಡುವಿನ ಕಳಚಿಹೋಗಿದ್ದ ಕೊಂಡಿ ಸಿಕ್ಕಿದೆ. ನ್ಯಾಷನಲ್ ಜಿಯೋಗ್ರಾಫಿಕ್ ವಿಜ್ಞಾನಿಗಳ ತಂಡ ಇದಕ್ಕೆ ಆರ್ಕಿಯೋಪ್ಟಾರ್ ಲಿಯೋನಿಸ್ ಜೆನಿಸಿಸ್ ಎಂದು ನಾಮಕರಣ ಮಾಡಿದೆ. ಅತಿ ನೇರಳೆ ಕಿರಣ ಬಳಸಿ, ಕಂಪ್ಯೂಟರ್ ನೆರವಿನಿಂದ ಈ ಜೀವಿಯ ಅವಶೇಷದ ಮೂರು ಆಯಾಮದ ಚಿತ್ರ ತೆಗೆದಿದ್ದಾರೆ. ಇದು ಆದಿಮ ಪಕ್ಷಿ ಆರ್ಕಿಯಾಪ್ಟೆರಿಕ್ಸ್‌ಗಿಂತ ಹೆಚ್ಚು ಸುಸಂಬದ್ಧವಾಗಿ ಹಾರಾಡುತ್ತಿತ್ತು. ಆದರೆ ಬಾಲ ? ನಿಗುರಿ ನಿಂತ ಮಾಂಸಾಹಾರಿ ಡೈನೋಸಾರ್‌ಗಳ ಬಾಲದಂತಿದೆ. ಇದನ್ನೇ ಅಲ್ಲವೇ ವಿಜ್ಞಾನಿಗಳು ಕಾಣಲು ತವಕಿಸುತ್ತಿದ್ದುದು.'

ಈ ವಿವರಗಳೊಂದಿಗೆ ಪತ್ರಿಕೆ ಇನ್ನೊಂದು ತೀರ್ಪನ್ನು ನೀಡಿದೆ. ''ಈಗ ನಾವು ದೃಢವಾಗಿ ಒಂದು ಮಾತನ್ನು ಹೇಳಬಹುದು. ಹಕ್ಕಿಗಳೆಂದರೆ ಮಾಂಸಾಹಾರಿ, ದ್ವಿಚರಿ ಡೈನೋಸಾರ್‌ಗಳು. ಮಾನವನನ್ನು ಸ್ತನಿ ಎನ್ನುವುದಿಲ್ಲವೆ ಹಾಗೆ.''

ಈ ಅತ್ಯಪರೂಪದ, ಕ್ರಾಂತಿಯ ಬಿರುಗಾಳಿಯನ್ನೇ ಎಬ್ಬಿಸಿದ ಸಂಗತಿ ಕೇಳಿ ಅಮೆರಿಕದ ಮ್ಯೂಸಿಯಮ್ ಡೈರಕ್ಟರೊಬ್ಬ ಚೀನಕ್ಕೆ ದೌಡಾಯಿಸಿ ಬಂದು, ಭಾರಿ ಮೊತ್ತ ತೆತ್ತು ಮ್ಯೂಸಿಯಮ್‌ಗೆ ಆ ಪಳೆಯುಳಿಕೆಯನ್ನು ಸೇರಿಸಿದ. ಚೀನದ ಸರ್ಕಾರ ಅಲ್ಲಿನ ಒಂದು ಕವಡೆಯನ್ನು ಹೊರದೇಶಕ್ಕೆ ಸಾಗಿಸಲು ಬಿಡುವುದಿಲ್ಲ. ಅಲ್ಲಿ ಏನೇ ದೊರೆತರೂ ಅದು ರಾಷ್ಟ್ರೀಯ ಆಸ್ತಿ. ಹೊರಗೆ ಹೋದರೆ ಅದು ಕಳ್ಳ ಮಾಲು. ''ನಮ್ಮ ಅಧ್ಯಯನ ಮುಗಿದ ನಂತರ ಇದನ್ನು ನಿಮಗೇ ಹಿಂತಿರುಗಿಸುತ್ತೇವೆ'' ಎಂಬ ಷರತ್ತಿನೊಂದಿಗೆ ಈ ಡೈನೋ ಹಕ್ಕಿಯನ್ನು ಅಮೆರಿಕದ ಮ್ಯೂಸಿಯಮ್‌ಗೆ ಒಯ್ಯಲಾಗಿತ್ತು. ಒಡನೆಯೇ ಇದಕ್ಕಾಗಿಯೇ ಒಂದು ವೆಬ್‌ಸೈಟನ್ನು ತೆಗೆಯಲಾಯಿತು. ಪಳೆಯುಳಿಕೆಯ ತಜ್ಞರು ಚೀನದ ಅದೇ ಪ್ರಾಂತ್ಯದಲ್ಲಿ ಮುಂದೊಂದು ದಿನ ಹಾರುವ ರೆಕ್ಕೆಯುಳ್ಳ ಟೈರನೋಸಾರಸ್ ಎಂಬ ಡೈನೋಸಾರ್‌ನ ಪಳೆಯುಳಿಕೆಯೂ ಸಿಗಬಹುದೆಂಬ ವಿಶ್ವಾಸ ತಳೆದರು. ಈಗ ? ನಿಜ. ಈ ಹಾರಾಟ ಚೀರಾಟ ಎಲ್ಲ ನಿಂತಿದೆ.

'ಪಿಲ್ಟ್‌ಡೌನ್ ಮ್ಯಾನ್'ನಂತೆ ಇದೂ ಕೈಚಳಕ. ಬೇಕೆಂದರೆ ಕರಾಮತ್ತು ಎನ್ನಿ. ಈ ಪಳೆಯುಳಿಕೆಯನ್ನು ನೆಲದಿಂದ ಬಗೆದು ತೆಗೆದ ರೈತನ ಬಳಿ ಓಡಿ ಅವನನ್ನು ಬಾಯಿ ಬಿಡಿಸಿದಾಗ ಸತ್ಯ ಹೊರಬಿತ್ತು. ತಪ್ಪು ರೈತನದಲ್ಲ. ಮತ್ತೆ ? ಆತ ನೆಲವನ್ನು ಬಗೆದು ಪಳೆಯುಳಿಕೆಯನ್ನು ಬಿಡಿಸಿ ಮೇಲೆತ್ತಿದಾಗ ಒಂದೇ ಸಮಾಧಿಯಿಂದ ಹಕ್ಕಿಯ ದೇಹದ ಪಂಜರವೂ ಬಂತು, ಡೈನೋಸಾರ್‌ನ ಹಿಂಬದಿಯ ಉಳಿಕೆಗಳೂ ಕೈಸೇರಿದುವು. ಆತ ನೀಟಾಗಿ ಎರಡನ್ನೂ ಜೋಡಿಸಿದ್ದ ಅಷ್ಟೇ. ಆ ಎರಡೂ ಜೀವಿಗಳು ಒಟ್ಟಿಗೇ ಸಾಯಬಾರದೆಂಬ ನಿಯಮವೇನೂ ಇಲ್ಲವಲ್ಲ ?

ಕಳೆದ ಎರಡು ದಶಕಗಳಲ್ಲಿ ವಿಜ್ಞಾನ ಇಂಥ ಅಪಾಯಕಾರಿ ಸಂದರ್ಭಗಳಿಗೆ ತನ್ನನ್ನು ತಾನು ಒಡ್ಡಿಕೊಂಡಿದೆ. ಅತಿ ವಿಶ್ವಾಸದ ಅವಿವೇಕ ಒಂದೆಡೆ, ವೈಜ್ಞಾನಿಕ ಪರಿಣಾಮದ ವೈಭವೀಕರಣ ಇನ್ನೊಂದೆಡೆ, ದಾರಿ ತಪ್ಪಿಸುವ ಸಂಶೋಧನೆಗಳು ಮತ್ತೊಂದೆಡೆ, ಅಂತೂ ವಿಜ್ಞಾನ ರಂಗದಲ್ಲಿ ಎಲ್ಲವನ್ನೂ ಸಾರಾಸಗಟಾಗಿ ಒಪ್ಪಿಕೊಳ್ಳುವ ಸ್ಥಿತಿಯಲ್ಲಿ ಇಂದು ನಾವಿಲ್ಲ. ಡಿಸ್ಕವರಿ ಪತ್ರಿಕೆ ಇಂಥ ಹತ್ತು ಹಲವು ಸಂಗತಿಗಳನ್ನು ಈಗ ಮುಲಾಜಿಲ್ಲದೆ ಬಯಲಿಗೆಳೆದಿದೆ. ಋಜುಮಾರ್ಗದಲ್ಲಿ ನಿಸರ್ಗದ ವಿದ್ಯಮಾನಗಳತ್ತ ನಮ್ಮನ್ನು ಸಳೆಯಬೇಕಾಗಿದ್ದ ವಿಜ್ಞಾನ, ತಂತ್ರಜ್ಞಾನ ಯಾರ ಯಾರ ಕೈಯಲ್ಲೋ ಸಿಕ್ಕಿ ನರಳುತ್ತಿದೆ. ಆತ್ಮಸಾಕ್ಷಿಯನ್ನು ಅಡವಿಡಬಾರದಷ್ಟೇ.

**ಟಿ. ಆರ್. ಅನಂತರಾಮು**
ನಂ. ೩೮೭೧, ೧೩ನೇ ಮುಖ್ಯ ರಸ್ತೆ, ಕುಮಾರಸ್ವಾಮಿ ಬಡಾವಣೆ
೨ನೇ ಹಂತ, ಬೆಂಗಳೂರು - ೫೬೦ ೦೭೮




ಲೀ ಪಿಂಗ್

# ಭಾರತ - ಚೀಣಾ ಸಂಬಂಧಗಳ ವರ್ಧನೆಯ ಮುಖ್ಯತ್ವ

ಭಾರತ-ಚೀಣಾಗಳ ನಡುವೆ ಸಂಬಂಧಗಳು ಉತ್ತಮಗೊಳ್ಳುವ ಲಕ್ಷಣಗಳು ಕಾಣುತ್ತಿರುವುದು ಶುಭ ಸೂಚನೆ. ಕಳೆದ ವರ್ಷ ಮೇ ತಿಂಗಳಲ್ಲಿ ಚೀಣಾಗೆ ರಾಷ್ಟ್ರಪತಿ ಕೆ. ಆರ್. ನಾರಾಯಣನ್ ಅವರು ನೀಡಿದ ಸೌಹಾರ್ದ ಭೇಟಿ ಹಾಗೂ ಅದೇ ತಿಂಗಳಲ್ಲಿ ಗಡಿ ವಿವಾದಕ್ಕೆ ಸಂಬಂಧಿಸಿದಂತೆ ಎರಡೂ ದೇಶಗಳ ಮಧ್ಯೆ ನಕಾಶೆಗಳ ಪರಸ್ಪರ ವಿನಿಮಯ ಸಂಬಂಧಗಳ ಸುಧಾರಣೆಯತ್ತ ಪ್ರಮುಖ ಹೆಜ್ಜೆ. ಅದನ್ನನುಸರಿಸಿ ಈಚೆಗೆ ಚೀಣಾದ ಉನ್ನತ ನಾಯಕರಲ್ಲೊಬ್ಬರಾದ ಲೀ ಪಿಂಗ್ ಅವರು ಭಾರತಕ್ಕೆ ನೀಡಿದ ಭೇಟಿಯೂ ಸ್ವಾಗತಾರ್ಹವಾದ ಬೆಳವಣಿಗೆ. ಏಷಿಯಾದ ಈ ಎರಡು ಬೃಹತ್ ರಾಷ್ಟ್ರಗಳ ಮಧ್ಯೆ ಉತ್ತಮ ಮೈತ್ರಿ ಬಾಂಧವ್ಯಗಳು ಜಗತ್ತಿನ ಇಂದಿನ ಸನ್ನಿವೇಶದಲ್ಲಿ ಅಪೇಕ್ಷಣೀಯವಷ್ಟೇ ಅಲ್ಲ, ಬಹು ಮುಖ್ಯ ಅಂಶವೂ ಆಗಿದೆ. ಎರಡೂ ದೇಶಗಳ ನಡುವೆ ಇನ್ನೂ ಬಗೆಹರಿಯದಿರುವ ಹಲವು ಪ್ರಶ್ನೆಗಳಿರುವುದು ನಿಜ. ಆದರೆ ಸದ್ಭಾವನೆಯಿಂದ ಅನುಕೂಲಕರ ವಾತಾವರಣ ಸೃಷ್ಟಿಸಿದಲ್ಲಿ ಕ್ರಮೇಣ ವಿವಾದಗಳನ್ನು ಬಗೆಹರಿಸುವುದು ಕಷ್ಟವಾಗದು. ಇದಕ್ಕೆ ಆ ದಿಶೆಯಲ್ಲಿ ದಿಟ್ಟ ಹೆಜ್ಜೆ ಇರಿಸಬೇಕು ಅಷ್ಟೆ.

ಮೂರು ವರ್ಷಗಳ ಹಿಂದೆ ವಾಜಪೇಯಿ ಸರಕಾರ ಪೋಕ್ರಾನಿನಲ್ಲಿ ನಡೆಸಿದ ನ್ಯೂಕ್ಲಿಯರ್ ಅಸ್ತ್ರಪರೀಕ್ಷಾ ಸ್ಫೋಟನೆ, ಅದರ ನಂತರ ರಕ್ಷಣಾ ಸಚಿವ ಜಾರ್ಜ್ ಫರ್ನಾಂಡಿಸ್ ನೀಡಿದ ಬೇಜವಾಬ್ದಾರಿ ಹೇಳಿಕೆಗಳು ಮತ್ತು ಪ್ರಧಾನಮಂತ್ರಿ ವಾಜಪೇಯಿ ನ್ಯೂಕ್ಲಿಯರ್ ಪರೀಕ್ಷಾಸ್ಫೋಟನೆಯನ್ನು ಸಮರ್ಥಿಸಿಕೊಳ್ಳಲು ಅಮೆರಿಕದ ಧಣಿಗಳಿಗೆ ನೀಡಿದ ಸಮಜಾಯಿಷಿಯಲ್ಲಿ ಚೀಣಾದ ಕಡೆ ಬೊಟ್ಟು ಮಾಡಿ ಹೊರಿಸಿದ ಆರೋಪಗಳು ಭಾರತ-ಚೀಣಾ ಸಂಬಂಧಗಳಲ್ಲಿ ಅನಗತ್ಯವಾದ ವಿರಸವನ್ನುಂಟುಮಾಡಿದುವು, ಪರಸ್ಪರ ಸಂಶಯಗಳನ್ನು ಹೆಚ್ಚಿಸಿದುವು. ಇದರಿಂದಾಗಿ ಸುಧಾರಿಸುತ್ತಿದ್ದ ಮೈತ್ರಿ ಸಂಬಂಧಗಳು ತಣ್ಣಗಾದುವು. ಈಗ ಮತ್ತೆ ಸಂಬಂಧಗಳು ಉತ್ತಮಗೊಳ್ಳುವ ಸಂಭವವಿರುವಾಗ ವಾಜಪೇಯಿ ಸರಕಾರದಲ್ಲಿ ಉನ್ನತ ಸ್ಥಾನಗಳಲ್ಲಿರುವವರು, ಮುಖ್ಯವಾಗಿ ಕಟ್ಟಾ ಚೀಣಾ ವಿರೋಧಿ ರಕ್ಷಣಾ ಸಚಿವ ಜಾರ್ಜ್ ಫರ್ನಾಂಡಿಸ್‌ನಂಥವರು, ಬೇಜವಾಬ್ದಾರಿಯುತ ಹೇಳಿಕೆಗಳನ್ನು ನೀಡಿ ಹುಳಿ ಹಿಂಡುವ ಸಾಧ್ಯತೆ ಇದೆ. ಅಂಥವರ ಮೇಲೆ ನಿಗಾ ಇರಿಸುವುದು ಅಗತ್ಯ. ಅಮೆರಿಕದ ಧಣಿಗಳನ್ನು ತಣಿಸುವುದಕ್ಕೆ ಕಾತುರವಾಗಿರುವ ನಮ್ಮ ಸರಕಾರ ಭಾರತ-ಚೀಣಾಗಳ ಮಧ್ಯೆ ಬಾಂಧವ್ಯಗಳು ಹಳಸದ ಹಾಗೆ ಸೂಕ್ತ ಕ್ರಮ ಕೈಗೊಳ್ಳಬೇಕಾಗಿದೆ. ಇಂದಿನ ಸಂಕೀರ್ಣ ಅಂತರರಾಷ್ಟ್ರೀಯ ಪರಿಸ್ಥಿತಿಯಲ್ಲಿ ಭಾರತ- ಚೀಣಾಗಳ ಉತ್ತಮ ಮೈತ್ರಿ ಸಂಬಂಧಗಳು ಏಷಿಯ - ಆಫ್ರಿಕಾ ಖಂಡಗಳ ಅಭಿವೃದ್ಧಿಶೀಲ ರಾಷ್ಟ್ರಗಳಿಗೆ ಒತ್ತಾಸೆಯಾಗಿರುತ್ತದೆ. ಇದನ್ನು ಗಮನದಲ್ಲಿರಿಸಿಕೊಂಡು ಮೈತ್ರಿ ಸಂಬಂಧಗಳನ್ನು ಬೆಳೆಸಿ, ಬಲಪಡಿಸುವುದು ಅವಶ್ಯಕ.

ಸೀಯಾರ್ಕೆ

ಭಾರತ-ಚೀಣಾ ಸಂಬಂಧಗಳು ಇಂದು ನಿನ್ನೆಯದಲ್ಲ, ಐತಿಹಾಸಿಕವಾದದ್ದು. ನೂರಾರು ವರ್ಷಗಳ ಕಾಲದಿಂದ ಬೆಳೆದುಬಂದದ್ದು. ಭಾರತದಲ್ಲಿ ಗುಪ್ತರ ಆಳ್ವಿಕೆಯ ಕಾಲಕ್ಕೆ ಬಹಳ ಹಿಂದೆಯೇ ಭಾರತ ಮತ್ತು ಚೀಣಾಗಳ ಮಧ್ಯೆ ವಾಣಿಜ್ಯ ಸಂಬಂಧಗಳಿದ್ದುವು. ಭಾರತದಲ್ಲಿ ಉಗಮಿಸಿದ ಬೌದ್ಧ ಧರ್ಮವನ್ನು ಚೀಣಾದ ಲಕ್ಷಗಟ್ಟಲೆ ಜನ ಅಂಗೀಕರಿಸಿದರು. ಗುಪ್ತರ ಕಾಲದಲ್ಲಿ ಚೀಣಾದಿಂದ ಭಾರತಕ್ಕೆ ಬಂದಿದ್ದ ಫಾಹಿಯಾನ್ ಮತ್ತು ಹ್ಯೂಯೆನ್‌ತ್ಸಾಂಗ್ ಇವರು ಭಾರತದ ಬಗ್ಗೆ ದಾಖಲಿಸಿರುವ ಸಂಗತಿಗಳು ಇಂದಿಗೂ ಅಮೂಲ್ಯ. ಆಧುನಿಕ ಕಾಲಕ್ಕೆ ಸಂಬಂಧಿಸಿದ ಹಾಗೆ ಕಳೆದ ಶತಮಾನದ ಪ್ರಾರಂಭದ ದಶಕಗಳಲ್ಲಿಯೇ ಜಪಾನೀ ಸಾಮ್ರಾಜ್ಯಶಾಹಿಗಳ ವಿರುದ್ಧವಾಗಿ ಚೀಣಾದ ಜನತೆ ಹೋರಾಡುತ್ತಿದ್ದಾಗ ಭಾರತದ ಜನತೆ ಬೆಂಬಲ ಸೂಚಿಸಿದ್ದುದನ್ನು ಇಲ್ಲಿ ನೆನಪಿಸಿಕೊಳ್ಳಬಹುದು. ಭಾರತದ ಜನತೆ ಆ ಕಾಲದಲ್ಲಿಯೇ ಹೋರಾಡುತ್ತಿದ್ದ ಚೀಣೀಯರಿಗೆ ನೆರವಾಗಲು ವೈದ್ಯರ ತಂಡವೊಂದನ್ನು ಕಳಿಸಿದ್ದುದು, ಅದರ ನೇತೃತ್ವ ವಹಿಸಿದ್ದ ಡಾ॥ ಕೋಟ್ನಿಸ್ ಚೀಣಾದಲ್ಲಿ ಸೇವೆಸಲ್ಲಿಸುತ್ತಿದ್ದು, ಅಲ್ಲಿಯೇ ಅಸು ನೀಗಿ ಅಮರರಾದದ್ದು ಇತಿಹಾಸ. ಅದೇ ಪರಂಪರೆಯಲ್ಲಿಯೇ ಸ್ವತಂತ್ರ ಭಾರತ ಚೀಣೀ ಜನತಾ ಗಣರಾಜ್ಯ ಅಸ್ತಿತ್ವಕ್ಕೆ ಬಂದ ಕೂಡಲೇ ಅದಕ್ಕೆ ಮಾನ್ಯತೆ ನೀಡಿ ರಾಯಭಾರ ಸಂಬಂಧಗಳನ್ನು ಸ್ಥಾಪಿಸಿದ್ದು ಗಮನಾರ್ಹ. ಅನಂತರ ಅಮೆರಿಕ ಚೀಣಾಗೆ ಮಾನ್ಯತೆ ನೀಡದೆ, ವಿಶ್ವಸಂಸ್ಥೆಯಲ್ಲಿ ಅದಕ್ಕೆ ನ್ಯಾಯವಾಗಿ ಸಲ್ಲಬೇಕಾಗಿದ್ದ ಸ್ಥಾನವನ್ನು ತಡೆಹಿಡಿದಿದ್ದಾಗ, ಭಾರತ ಚೀಣಾದ ಪರವಾಗಿ ವಿಶ್ವಸಂಸ್ಥೆಯಲ್ಲೂ ಹೊರಗೂ ನಡೆಸಿದ ಪ್ರಯತ್ನಗಳೂ ಗಮನಾರ್ಹ.

ಸ್ವತಂತ್ರ ಭಾರತ ಮತ್ತು ಚೀಣೀ ಜನತಾ ಗಣರಾಜ್ಯಗಳ ನಿಕಟ ಬಾಂಧವ್ಯ ಹೊಸದಾಗಿ ಸ್ವತಂತ್ರಗೊಂಡಿದ್ದ ಏಷಿಯಾ ಮತ್ತು ಆಫ್ರಿಕಾ ಖಂಡಗಳ ದೇಶಗಳಿಗೆ ಆಶಾದೀಪವಾಗಿತ್ತು ಎಂದರೆ ಉತ್ಪ್ರೇಕ್ಷೆ ಏನಲ್ಲ. ಸಾಮ್ರಾಜ್ಯಶಾಹಿಗಳ, ಮುಖ್ಯವಾಗಿ ಅಮೆರಿಕದ, ಒತ್ತಡಗಳನ್ನು ಎದುರಿಸಲು ಆ ಸಂಬಂಧಗಳು ಆಸರೆಯಾಗಿತ್ತು. ಇಂಡೋನೇಷಿಯದ ಬಾಂಡುಂಗ್ ನಗರದಲ್ಲಿ ಐವತ್ತರ ದಶಕದ ಪ್ರಾರಂಭದಲ್ಲಿ ಜರುಗಿದ ಏಷಿಯ ಆಫ್ರಿಕ ಖಂಡಗಳ ಸ್ವತಂತ್ರ ರಾಷ್ಟ್ರಗಳ ಸಮ್ಮೇಳನದಲ್ಲಿ ಭಾರತ ಮತ್ತು ಚೀಣಾಗಳು ವಹಿಸಿದ ಪಾತ್ರ, ನೀಡಿದ ನೇತೃತ್ವ ಹಾಗೂ ಆ ಸಮ್ಮೇಳನದಲ್ಲಿ ರಾಷ್ಟ್ರಗಳ ನಡುವೆ ಸಂಬಂಧಗಳ ಸ್ಥಾಪನೆಗೆ ನಿರೂಪಿಸಿದ ಸೂತ್ರಗಳು ಇತಿಹಾಸ ಪ್ರಸಿದ್ಧ, ಶಾಶ್ವತ ಮಾರ್ಗದರ್ಶಿ. ಮುಂದೆ ಈ ಸೂತ್ರಗಳೇ ಭಾರತ-ಚೀಣಾಗಳು ಅಂಗೀಕರಿಸಿದ 'ಪಂಚಶೀಲ' ತತ್ವಗಳಿಗೆ ಆಧಾರವಾಗಿದ್ದುವು. ಎರಡೂ ದೇಶಗಳ ಮಧ್ಯೆ ಮೈತ್ರಿ ಹೀಗೇ ಬೆಳೆದಿದ್ದರೆ ಪರಿಸ್ಥಿತಿಯೇ ಬೇರೆಯಾಗಿರುತ್ತಿತ್ತು. ಭಾರತ-ಚೀಣಾ ಮತ್ತು ಅಂದಿನ ಸೋವಿಯತ್ ಒಕ್ಕೂಟಗಳ ಮೈತ್ರಿ ಅಚಲವಾಗಿದ್ದಿದ್ದರೆ ಅಮೆರಿಕ ಹಾಗೂ ಇತರ ಸಾಮ್ರಾಜ್ಯಶಾಹಿ ದೇಶಗಳಿಗೆ ದೊಡ್ಡ ಸವಾಲಾಗಿರುತ್ತಿತ್ತು. ಜಗತ್ತಿನ ಚಹರೆಯೇ ಬದಲಾಗುತ್ತಿತ್ತು. ಆದರೆ ದುರದೃಷ್ಟವಶಾತ್ ಹಾಗಾಗಲಿಲ್ಲ.

ಭಾರತ-ಚೀಣಾಗಳ ನಡುವಣ ಹಾಗೂ ಚೀಣಾ- ಸೋವಿಯತ್ ಒಕ್ಕೂಟಗಳ ನಡುವಣ ಸಂಬಂಧಗಳು ನಾನಾ ಕಾರಣಗಳಿಂದ ಹದಗೆಡತೊಡಗಿದುವು. ಕಾರಣಗಳೇನೇ ಇರಲಿ ಅದರ ಪರಿಣಾಮಗಳನ್ನು ಇಂದೂ ನಾವು ಕಾಣುತ್ತಿದ್ದೇವೆ. ಭಾರತ-ಚೀಣಾಗಳ ಮಧ್ಯೆ ವಿರಸ ಬೆಳೆದು ಸಂಬಂಧ ಹಳಸಲು ಮುಖ್ಯ ಕಾರಣಗಳಲ್ಲೊಂದು ಟಿಬೇಟಿನಲ್ಲಿ ನಡೆದ ಘಟನೆಗಳು. ಅದರ ಹಿಂದೆಯೇ ಟಿಬೇಟಿನ ಧರ್ಮಗುರು ದಲಾಯಿ ಲಾಮಾ ಹಾಗೂ ಆತನ ಅನುಯಾಯಿಗಳು ಭಾರತದಲ್ಲಿ ಆಶ್ರಯಪಡೆದಿದ್ದು. ಈಗಲೂ ಕೂಡ ಭಾರತದ ನೆಲದಿಂದ ದಲಾಯಿ ಲಾಮಾ ನಡೆಸುತ್ತಿರುವ ಚಟುವಟಿಕೆಗಳು ಭಾರತ-ಚೀಣಾ ಸಂಬಂಧಗಳಲ್ಲಿ ಒಂದು ಮುಳ್ಳಾಗಿಯೇ ಇವೆ. ಈ ಹಿನ್ನೆಲೆಯಲ್ಲಿಯೇ ಉದ್ಭವಿಸಿದ್ದು ಗಡಿ ವಿವಾದ, ಅನಂತರ ೧೯೬೨ರಲ್ಲಿ ನಡೆದ ಸಶಸ್ತ್ರ ಘರ್ಷಣೆ. ಪರಸ್ಪರ ಸಂಶಯದಿಂದ ನೋಡದೆ ಎರಡೂ ದೇಶಗಳೂ ಸಕಾಲದಲ್ಲಿ ಸೌಹಾರ್ದತೆಯಿಂದ ವರ್ತಿಸಿದ್ದರೆ ಈ ದುರಂತ ತಪ್ಪುತ್ತಿದ್ದಿತೇನೊ. ಅದು ಏನೇ ಇರಲಿ ಸಂಬಂಧಗಳನ್ನು ಸರಿಪಡಿಸಲು ಕೆಲವು ದಶಕಗಳೇ ಆದುವೆಂಬುದನ್ನು ಮರೆಯುವಂತಿಲ್ಲ.

ಇಂದಿನ ಪರಿಸ್ಥಿತಿಯಲ್ಲಿ ಭಾರತ ಮತ್ತು ಚೀಣಾಗಳು ವಿವಾದಾತ್ಮಕ ವಿಷಯಗಳನ್ನು ಇತ್ಯರ್ಥಗೊಳಿಸಲು ಸೂಕ್ತ ಕ್ರಮ ಕೈಗೊಳ್ಳುವುದರ ಜೊತೆಗೇ ರಚನಾತ್ಮಕವಾದ ರೀತಿಯಲ್ಲಿ ಸಂಬಂಧಗಳನ್ನು ವಿಸ್ತರಿಸುವುದು ಬಹುಮುಖ್ಯ. ಈ ದಿಶೆಯಲ್ಲಿ ಇನ್ನೂ ಬಹುದೂರ ಕ್ರಮಿಸಬೇಕಾಗಿದೆ. ಏತನ್ಮಧ್ಯೆ ಎರಡೂ ದೇಶಗಳ ನಡುವೆ ವ್ಯಾಪಾರ ಸಂಬಂಧಗಳು ಕುದುರಬೇಕು. ಪರಸ್ಪರರ ದೇಶಗಳಲ್ಲಿ ಜಂಟೀ ಉದ್ಯಮಗಳ ಸ್ಥಾಪನೆ, ವೈಜ್ಞಾನಿಕ ಸಂಶೋಧನೆಗಳ ವಿನಿಮಯ, ವಿಮಾನಯಾನ ಸಂಪರ್ಕ ಹಾಗೂ ಪ್ರವಾಸಿಗಳ ಭೇಟಿ ಮೊದಲಾದವುಗಳನ್ನು ಬೆಳೆಸಲು ಅಡ್ಡಿಯಿಲ್ಲ. ಮೂರನೇ ರಾಷ್ಟ್ರಗಳೊಂದಿಗಿನ ಸಂಬಂಧಗಳು, ಅದರಲ್ಲೂ ಮುಖ್ಯವಾಗಿ ಪಾಕಿಸ್ತಾನದೊಂದಿಗಿನ ಸಂಬಂಧಗಳು, ದ್ವಿಪಕ್ಷೀಯ ಸಂಬಂಧಗಳಿಗೆ ಅಡ್ಡಿಯಾಗದಂತೆ ನೋಡಿಕೊಳ್ಳುವುದೀಗ ಮುಖ್ಯ. ಇದು ಎರಡೂ ದೇಶಗಳ ನಾಯಕತ್ವದ ಹೊಣೆಯಾಗಬೇಕು. ವಾಜಪೇಯಿ ನೇತೃತ್ವದಲ್ಲಿರುವ ಸರಕಾರದ ವರಿಷ್ಠರು ಇದನ್ನು ಗಮನಿಸಬೇಕು. ಪ್ರಪಂಚದ ಜನಸಂಖ್ಯೆಯಲ್ಲಿ ಸುಮಾರು ಮೂರನೇ ಒಂದು ಭಾಗವನ್ನು ಪ್ರತಿನಿಧಿಸುವ ಭಾರತ-ಚೀಣಾ ಸಂಬಂಧಗಳ ವರ್ಧನೆ ಇಡೀ ಜಗತ್ತಿನ ಆಗುಹೋಗುಗಳ ಮೇಲೆ ಪರಿಣಾಮ ಬೀರಬಲ್ಲವು. ಹಾಗಾಗಬೇಕೆಂಬುದೇ ನಮ್ಮ ಅಪೇಕ್ಷೆ. ❑❑❑

# ಬಳಲಿದಾಗ ಬಾಳೆಹಣ್ಣು ತಿನ್ನಿ

ಮಿತ ಬೆಲೆಯ, ವರ್ಷವಿಡೀ ಲಭ್ಯವಿರುವ, ರುಚಿಕರ ಹಣ್ಣುಗಳಲ್ಲಿ ಬಾಳೆಹಣ್ಣು ಒಂದಾಗಿದೆ. ಬಾಳೆಯಲ್ಲಿ ಪೂವನ್, ರಸಬಾಳೆ, ನೇಂದ್ರ, ಮೈಸೂರು, ಯಾಲಕ್ಕಿಬಾಳೆ, ಚಂದ್ರಬಾಳೆ, ರೊಬಸ್ಟ, ಕ್ಯಾವೆಂಡಿಶ್ ಮೊದಲಾದ ಹಲವಾರು ಜಾತಿಗಳಿವೆ. ಇವುಗಳ ಗಾತ್ರ, ರುಚಿ, ಬಣ್ಣಗಳಲ್ಲಿ ವೈವಿಧ್ಯತೆಯಿದೆ. ದೇಹದ ಬೆಳವಣಿಗೆಗೆ ಅವಶ್ಯವಿರುವ ಶರ್ಕರಪಿಷ್ಟ, ಜೀವಸತ್ವ ಮತ್ತು ಖನಿಜಗಳು ಬಾಳೆಹಣ್ಣಿನಲ್ಲಿರುವುದರಿಂದ ಅದೊಂದು ಜನಪ್ರಿಯ ಹಣ್ಣಾಗಿದೆ.



ಈ ಜನಪ್ರಿಯ ಹಣ್ಣಿನಲ್ಲಿ ಏನೇನು ಪೋಷಕಾಂಶಗಳಿವೆ ಎಂಬುದನ್ನು ತಿಳಿದುಕೊಳ್ಳೋಣ. ಬಾಳೆಕಾಯಿಯಲ್ಲಿ ಶರ್ಕರ ಪಿಷ್ಟಗಳ ಅಂಶವೇ ಅಧಿಕವಾಗಿರುತ್ತದೆ. ಬಾಳೆಹಣ್ಣಿನಲ್ಲಿ ಕಾಯಿಗಿಂತ ಅಧಿಕ ಪೊಟ್ಯಾಶಿಯಂ ಅಂಶವಿರುತ್ತದೆ. ಬಾಳೆಯ ಜಾತಿಯನ್ನನುಸರಿಸಿ ಪ್ರತಿ ೧೦೦ ಗ್ರಾಂ.ಗೆ ೯೦ರಿಂದ ೪೦೦ ಮಿ.ಗ್ರಾಂ.ಗಳಷ್ಟು ಪೊಟ್ಯಾಶಿಯಂ ಇರುತ್ತದೆ. ಕಾಯಿಗಳು ಹಣ್ಣಾದಂತೆ ಶರ್ಕರಪಿಷ್ಟಗಳು ಕರಗುವ ಸಕ್ಕರೆಗಳಾಗಿ ಮಾರ್ಪಡುತ್ತವೆ. ಒಟ್ಟು ಸಕ್ಕರೆಯ ಪ್ರಮಾಣ ಶೇಕಡಾ ೨ ರಿಂದ ೧೫-೨೦ ರಷ್ಟಕ್ಕೇರುತ್ತದೆ. ಗ್ಲೂಕೋಸ್, ಫ್ರಕ್ಟೋಸ್ ಮತ್ತು ಸುಕ್ರೋಸ್ ಬಾಳೆಹಣ್ಣಿನಲ್ಲಿರುವ ಸಕ್ಕರೆಗಳು. ಬಾಳೆಹಣ್ಣಿನ ವಿಲಕ್ಷಣ ವಾಸನೆಗೆ ೩೫೦ಕ್ಕಿಂತ ಅಧಿಕ ಆವಿಯಾಗುವ ಮೂಲವಸ್ತುಗಳು ಕಾರಣವೆಂದು ಗುರುತಿಸಲಾಗಿದೆ. ಇದರಲ್ಲಿ ಎಸಿಟಿಕ್, ಪ್ರೊಪಿಯೋನಿಕ್ ಮತ್ತು ಬ್ಯುಟಿರಿಕ್ ಆಮ್ಲಗಳ ಎಸ್ಟರುಗಳು ಪ್ರಾಮುಖ್ಯವಾದವುಗಳು.

ಬಾಳೆಹಣ್ಣಿಗೆ ಕೆಲವು ಕಾಯಿಲೆಗಳನ್ನು ದೂರವಿರಿಸುವ ಗುಣವಿದೆ. ಬಾಳೆಹಣ್ಣಿನ ಚಿಕಿತ್ಸಾ ಗುಣಗಳಿಗೆ ಅದರಲ್ಲಿರುವ ರಾಸಾಯನಿಕ ಮೂಲವಸ್ತುಗಳೇ ಕಾರಣ. ಬಾಳೆಹಣ್ಣಿನಲ್ಲಿ ಶರೀರ ಕ್ರಿಯೆಯಲ್ಲಿ ಪ್ರಮುಖ ಪಾತ್ರ ವಹಿಸುವ ಸೆರೆಟೋನಿನ್ ಮತ್ತು ನಾರ್ ಎಪಿನೆಫ್ರಿನ್ ಎಂಬ ಎರಡು ಸಂಯುಕ್ತ ವಸ್ತುಗಳಿವೆ. ಸೆರೆಟೋನಿನ್ ಹೊಟ್ಟೆಯ ರಸಗ್ರಂಥಿಗಳ ಸ್ರಾವವನ್ನು ಕಡಿಮೆಮಾಡಿ ಸ್ನಾಯುಗಳನ್ನು ಉದ್ರೇಕಿಸುತ್ತದೆ. ನಾರ್ ಎಪಿನೆಫ್ರಿನ್ ಸಂಕುಚಿತಗೊಳಿಸುವ ಒಂದು ಮಾಧ್ಯಮವಾಗಿ ಕಾರ್ಯ ನಿರ್ವಹಿಸುತ್ತದೆ.

ಹಾಲಿನೊಂದಿಗೆ ಬಾಳೆಹಣ್ಣು ಸೇವಿಸಿದರೆ ಅದೊಂದು ಪುಷ್ಟಿದಾಯಕ ಸಂಪೂರ್ಣ ಆಹಾರವೇ ಆಗಿಬಿಡುತ್ತದೆ. ಇದು ಸುಲಭವಾಗಿ ಪಚನವಾಗುವುದರಿಂದ ಮಕ್ಕಳಿಗೆ ಮತ್ತು ವೃದ್ಧರಿಗೆ ಅನುಕೂಲ ಆಹಾರ. ಹೊಟ್ಟೆಹುಣ್ಣಿನಿಂದ ಬಳಲುತ್ತಿರುವವರಿಗೆ ಉತ್ತಮ ಆಹಾರ. ಕಡಿಮೆ ಕೊಲೆಸ್ಟರಾಲ್, ಕೊಬ್ಬು ಮತ್ತು ಸೋಡಿಯಂ ಲವಣವುಳ್ಳ ಆಹಾರ ಕ್ರಮವನ್ನು ಅನುಸರಿಸಬೇಕಾದವರಿಗೆ ಇದೊಂದು ಸುಲಭವಾಗಿ ಆಯ್ಕೆಮಾಡಬಹುದಾದ ಆಹಾರಪದಾರ್ಥ. ಕೊಬ್ಬನ್ನು ಜೀರ್ಣಿಸಿಕೊಳ್ಳಲಾರದ, ಅತಿಸಾರಪೀಡಿತ ಮಕ್ಕಳಿಗೆ ಬಾಳೆಹಣ್ಣನ್ನು ಶಿಫಾರಸ್ಸು ಮಾಡಲಾಗುತ್ತಿದೆ. ಬಾಳೆಯ ಎಲೆ, ಕಾಂಡ, ಹೂಗಳು ಬೇರೆ ಬೇರೆ ವಿಧದಲ್ಲಿ ಉಪಯೋಗಿಸಲ್ಪಡುತ್ತವೆ.

ತಾಜಾ ಬಾಳೆಹಣ್ಣಿನಲ್ಲಿ ಶೇಕಡಾ ೨೨ರಷ್ಟು ಸಕ್ಕರೆ ಮತ್ತು ೭೮ರಷ್ಟು ನೀರು ಇದೆ ಎಂದಿಟ್ಟುಕೊಂಡರೆ ಒಣ ಪದಾರ್ಥದಲ್ಲಿ ಶೇಕಡಾ ೮೫ರಷ್ಟು ಸಕ್ಕರೆಯ ಅಂಶವಿದೆ. ಈ ಕಾರಣದಿಂದಾಗಿಯೇ ಉತ್ತಮ ನಿರ್ವಹಣೆಗಾಗಿ ಕ್ರೀಡಾಳುಗಳು ಬಾಳೆಹಣ್ಣಿಗೆ ಪ್ರಾಶಸ್ತ್ಯ ನೀಡುತ್ತಾರೆ. ಬಾಳೆಹಣ್ಣಿನಲ್ಲಿರುವ ಸಕ್ಕರೆಯ ಅಂಶ ಕಠಿಣ ಶ್ರಮಗಳಿಗೆ ಅವಶ್ಯವಿರುವ ಶಕ್ತಿಯನ್ನು ಶೀಘ್ರವಾಗಿ ಒದಗಿಸುತ್ತದೆ.

'ದಿನನಿತ್ಯ ಬಾಳೆಹಣ್ಣು ತಿಂದು ಮಾನಸಿಕ ಉದ್ವೇಗವನ್ನು ದೂರವಿರಿಸಿ' ಎಂಬ ಹೊಸ ಮಂತ್ರವೊಂದನ್ನು ಆಹಾರ ತಜ್ಞರು ಉಚ್ಚರಿಸಿದ್ದಾರೆ. ಪೊಟ್ಯಾಶಿಯಂ ಅಂಶ ಅಧಿಕವಾಗಿರುವ ಬಾಳೆಹಣ್ಣು ಅಧಿಕ ರಕ್ತದೊತ್ತಡವನ್ನು ಮಿತಿಯಲ್ಲಿಡಬಹುದೆಂದು ಅವರು ಅಭಿಪ್ರಾಯಪಟ್ಟಿದ್ದಾರೆ. ರಕ್ತನಾಳಗಳನ್ನು ಸಂಕುಚಿಸಿ ಅಧಿಕ ರಕ್ತದೊತ್ತಡವನ್ನುಂಟು ಮಾಡುವ 'ಎಂಜಿಯೊಟೆನ್ಸಿನ್' ಎಂಬ ಕಿಣ್ವದ ಉತ್ಪಾದನೆಯನ್ನು ಬಾಳೆಹಣ್ಣು ಸೇವನೆ ಕಡಿಮೆಮಾಡುತ್ತದೆ. ಈ ಕಿಣ್ವದ ಉತ್ಪಾದನೆಯನ್ನು ಕಡಿಮೆಮಾಡುವ ಘಟಕಗಳು ಮಾನಸಿಕ ಉದ್ವೇಗದಿಂದ ಬಳಲುವವರಿಗೆ ವರಪ್ರಸಾದವಾಗಬಹುದೆಂಬುದು ಆಹಾರ ತಜ್ಞರ ಅಭಿಪ್ರಾಯ. ಈ ಕುರಿತು ಹೆಚ್ಚಿನ ಸಂಶೋಧನೆಗಳನ್ನು ಕೈಗೊಳ್ಳುವ ಅವಶ್ಯಕತೆಯಿದೆ. ಆದೇನಿದ್ದರೂ, ದಿನನಿತ್ಯ ಬಾಳೆಹಣ್ಣು ತಿನ್ನುವುದು ಆರೋಗ್ಯಕ್ಕೆ ಉತ್ತಮ.

**ಡಾ|| ಪಿ. ಶಿವರಾಮ ರೈ**
ನಂ. ೧೬, ಗುರುಪ್ರಸಾದ ಲೇನ್, ಕಂಕನಾಡಿ, ಮಂಗಳೂರು - ೫೭೫ ೦೦೨

## ಸುದ್ದಿ ಚಿತ್ರ



ಸರಪಳಿಯಿಂದ ಬಂಧಿತನಾದ ಆದಂ ಪಂಡಾರಿ

### ಬೇಡಿ ಕಳಚಿತು !

'ಹೊಸತು' ನವೆಂಬರ್ ೯೯ರ ಸಂಚಿಕೆಯಲ್ಲಿ ಪ್ರಕಟವಾಗಿರುವ 'ಅನಾಥರ ಕಣ್ಣೀರು ಒರೆಸುವ ಕೈಗಳು' ಲೇಖನವನ್ನು ಓದುಗರು ಮರೆತಿರಲಾರರು. ಮಾನಸಿಕ ಅಸ್ವಸ್ಥನಾಗಿದ್ದ ಬಾಗಲಕೋಟೆಯ ಆದಂ ಪಂಡಾರಿ ಕಬ್ಬಿಣದ ಸರಪಳಿಗಳಿಂದ ಬಂಧಿತನಾಗಿ ಬೀದಿಗಳಲ್ಲಿ ಅಲೆದಾಡುತ್ತಿದ್ದ. ಈ ಸುದ್ದಿಯನ್ನು ಪತ್ರಿಕೆಗಳ ಮೂಲಕ ತಿಳಿದ ಚೆನ್ನೈನ 'ಉದವುಂ ಕರಂಗಳ್' ಸಂಸ್ಥೆಯ ವಿದ್ಯಾಕರ್ ಆತನನ್ನು ಕರೆದೊಯ್ದು ಶುಶ್ರೂಷೆ ಚಿಕಿತ್ಸೆ ನೀಡಿದರು. ಸುಮಾರು ಎರಡು ವರ್ಷಗಳಲ್ಲಿ ಚಿಕಿತ್ಸೆಗೆ ಫಲ ದೊರಕಿತು. ಆತ ಮತ್ತೆ ಸಾಮಾನ್ಯ ಮನುಷ್ಯನಾದ. ತನ್ನ ಕುಟುಂಬದವರನ್ನು ಸೇರಿಕೊಳ್ಳಲು ತವಕಿಸಿದ. ಆತನನ್ನು ಬರಮಾಡಿಕೊಳ್ಳಲು ಕುಟುಂಬದವರೂ ಮುಂದೆ ಬಂದರು. ೧೮.೧.೨೦೦೧ರಂದು ಬೆಂಗಳೂರಿನಲ್ಲಿ ಆದಂ ಪಂಡಾರಿಯ ಕುಟುಂಬದವರು ಬಂದು ಆತನನ್ನು ಊರಿಗೆ ಕರೆದೊಯ್ದರು. ಹೈಟೆಕ್ ಆಸ್ಪತ್ರೆಗಳು ಸುದ್ದಿಯಲ್ಲಿರುವ ಈ ದಿನಗಳಲ್ಲಿ ಸಮಾಜ ಸೇವಕ ವಿದ್ಯಾಕರ್ ತಮ್ಮ ನಿಸ್ವಾರ್ಥ ಸೇವೆಯಿಂದ ಮನೋರೋಗಿಯ ಬೇಡಿ ಕಳಚಿದರು! ಇಂಥ ಸಮಾಜ ಸೇವಕರ ಅಗತ್ಯ ಈಗ ಹಿಂದೆಂದಿಗಿಂತಲೂ ಹೆಚ್ಚಾಗಿದೆ.



ಗುಣವಾದನಂತರ ಸೈಕಲ್ ಸವಾರಿ

# ಕೋಲ್ಡ್ರಿಂಕ್ಸ್ ಎಷ್ಟು ಸುರಕ್ಷಿತ...

ಡಾ॥ ಕರವೀರಪ್ರಭು ಕ್ಯಾಲಕೊಂಡ

ಬೇಸಿಗೆಯಲ್ಲಿ ಹೆಚ್ಚುವುದು ದಣಿ. ಬಿಸಿಲಿನ ಬೇಗೆ, ಸಂಕಟ ಸುರಿಸುವ ಸೆಕೆ. ಕೋಲ್ಡ್ರಿಂಕ್ಸ್‌ಗೆ ಎಲ್ಲಿಲ್ಲದ ಬೇಡಿಕೆ. ಜನರಿಗೂ ಅವನ್ನು ಕುಡಿಯುವ ತವಕ. ಇದಕ್ಕೆ ಕಂಪೆನಿಗಳು ನೀಡುವ ಮನಮೋಹಕ ಜಾಹಿರಾತುಗಳು ಪೂರಕ. ಪೋಷಕ ಉತ್ಪ್ರೇಕ್ಷೆ ಮಾಡಿ ಹೇಳಿದ್ದನ್ನೇ ಸತ್ಯವೆಂದು ನಂಬುವ ಯುವ ಜನಾಂಗ ಕೋಲ್ಡ್ರಿಂಕ್ಸ್ ಕಟ್ಟಾಭಿಮಾನಿಗಳಾಗುವರು. ಮೇಲಿಂದ ಮೇಲೆ ಕೋಲ್ಡ್ರಿಂಕ್ಸ್ ಕುಡಿಯುವ ರೂಢಿ ಮಾಡಿಕೊಳ್ಳುವರು. ಕಂಪೆನಿಗಳ ಕಮಾಂಡರುಗಳ ಕಪ್ಪು ಹಣಕ್ಕೆ ಸರಕಾರವೂ ಸೊಪ್ಪುಹಾಕುವುದು. ಅಂತಃಕರಣ ಉಕ್ಕುವುದು. ರಿಯಾಯಿತಿಗಳನ್ನು ನೀಡುವುದು. ಕಂಪೆನಿಯವರು ಹೇಳಿದ್ದಕ್ಕೆ ಕಾಲೆತ್ತಿನಂತೆ ನಮ್ಮನ್ನಾಳುವ ನೇತಾರರು ಗೋಣು ಹಾಕುವರು. ಪರಿಣಾಮವಾಗಿ ಮೆಗಾ, ಜಂಬು, ಸೂಪರ್ ಜಂಬು ಪ್ಯಾಕುಗಳು ಮಾರುಕಟ್ಟೆಗೆ ಬಿಡುಗಡೆಯಾಗಿವೆ. ಅವು ಕ್ರಮವಾಗಿ ೩೦೦ ಮಿಲಿ, ೫೦೦ ಮಿಲಿ ಹಾಗೂ ೧.೫ ಲೀಟರ್‌ಗಳ ಬಾಟಲುಗಳಾಗಿರುತ್ತವೆ. ಮೋಹಕ ಬಣ್ಣ, ಆಕರ್ಷಕ ಆಕಾರಗಳಲ್ಲಿ ಅಂಗಡಿಗಳಲ್ಲಿ ಅಲಂಕೃತಗೊಂಡು ಯುವಕರಿಗೆ ಮೋಡಿ ಮಾಡುತ್ತವೆ. ಅಂತರರಾಷ್ಟ್ರೀಯ ಕ್ರೀಡೆಗಳನ್ನು ಪ್ರಾಯೋಜಿಸಿ ಪ್ರಚಾರ ಗಿಟ್ಟಿಸುತ್ತವೆ.

ಕೋಲ್ಡ್ರಿಂಕ್ಸ್ ಉತ್ಪಾದಕರು ಅವುಗಳ ಸೇವನೆಯಿಂದ ಉದ್ಭವಿಸಬಹುದಾದ ಆರೋಗ್ಯ ಸಮಸ್ಯೆಗಳತ್ತ ಸ್ವಲ್ಪವೂ ತಲೆ ಬಿಸಿ ಮಾಡಿಕೊಂಡಿಲ್ಲ. ಯಾವ ತಂತ್ರಗಳನ್ನು ಬಳಸುವುದರಿಂದ ಜನರನ್ನು ಮರುಳು ಮಾಡಲು ಸಾಧ್ಯ ಎಂಬುದರ ಕಡೆಗೆ ಗಮನವಿಟ್ಟು, ಆ ನಿಟ್ಟಿನಲ್ಲಿ ಅಧ್ಯಯನಗಳನ್ನು ಮಾಡುವರು. ಪ್ರಚಾರ ವೈಭವೀಕರಣಗೊಳಿಸುವರು. ಕೋಲ್ಡ್ರಿಂಕ್ಸ್‌ಗಳಲ್ಲಿ ಕೆಫಿನ್, ಫಾಸ್ಫೇಟ್, ಕರಗಿದ ಕಾರ್ಬನ್ ಡೈ ಆಕ್ಸೈಡ್ ಇತ್ಯಾದಿಗಳು ಅಡಕವಾಗಿರುತ್ತವೆ. ೨೦೦ ಮಿಲಿಗಿಂತ ದೊಡ್ಡ ಪ್ರಮಾಣದ ಬಾಟಲುಗಳಲ್ಲಿಯ ಪೇಯಗಳನ್ನು ಕುಡಿಯುವಾಗ ಅದು ಮಕ್ಕಳು, ಯುವಕ, ಯುವತಿಯರನ್ನು ಇನ್ನಷ್ಟು ಕುಡಿಯುವಂತೆ ಪ್ರೇರೇಪಿಸುತ್ತದೆ. ಇದರಿಂದಾಗಿ ಇವುಗಳ ಸೇವನೆ ನಿತ್ಯ ನಿರಂತರವಾಗುತ್ತದೆ. ಹೆಚ್ಚು ಪೇಯ ಸೇವನೆ, ಹೆಚ್ಚೆಚ್ಚು ರಸಾಯನಗಳ ಸೇವನೆಗೂ ಹಾದಿ ಮಾಡುವುದು. ಹೀಗಾಗಿ ಅವುಗಳ ತೀವ್ರ ವಿಷಮತೆ (acute toxicity) ತಲೆದೋರಬಹುದು. ಅನೇಕ ತೊಡಕು ತೊಂದರೆಗಳು ಹಣಕಿ ಹಾಕಬಹುದು. ಆರೋಗ್ಯದ ಮೇಲಾಗುವ ದುಷ್ಪರಿಣಾಮಗಳು ಮಕ್ಕಳ ಮೇಲೆ ಉಳಿದವರಿಗಿಂತ ಹೆಚ್ಚಾಗುವುದರಿಂದ ಭವಿಷ್ಯ ಎಷ್ಟೊಂದು ಭೀಕರವಾಗಿರಬಹುದು ಎಂಬುದನ್ನು ಯಾರಾದರೂ ಊಹಿಸಬಹುದು !

**ರಸಾಯಣಗಳ ರಸದೂಟ**

ಮಾರುಕಟ್ಟೆಯಲ್ಲಿ ಲಭ್ಯವಿರುವ ಹೆಸರಾಂತ ಕೋಲ್ಡ್ರಿಂಕ್ಸ್‌ಗಳಲ್ಲಿ ಅಡಕವಾಗಿರುವ ರಸಾಯಣ (chemicals)ಗಳನ್ನು ಪ್ರಯೋಗಾಲಯದಲ್ಲಿ ವಿಶ್ಲೇಷಿಸಿದ್ದು ಅವು ಹೀಗಿವೆ:

– ತಂಪು ಪಾನೀಯ (cold drinks)ಗಳ ವಿಶ್ಲೇಷಣೆ ವಿವರ (ಪ್ರತಿ ೧.೫ ಲೀಟರದಲ್ಲಿ)

| | ಪೆ ಎಚ್ | ಕೆಫಿನ್ | ಫಾಸ್ಫೇಟ್ |
|---|---|---|---|
| ಬ್ರ್ಯಾಂಡ್ 'ಅ' | ೨.೬೧ | ೭೫೦ಮಿ.ಗ್ರಾಂ. | ೭೦೨ಮಿ.ಗ್ರಾಂ. |
| '' 'ಆ' | ೨.೫೪ | ೪೫೦ಮಿ.ಗ್ರಾಂ. | ೭೦೮ಮಿ.ಗ್ರಾಂ. |
| '' 'ಇ' | ೨.೫೫ | ೬೦೦ಮಿ.ಗ್ರಾಂ. | ೮೧೩ಮಿ.ಗ್ರಾಂ. |

ಕೋಲ್ಡ್ರಿಂಕ್ಸ್‌ಗಳಲ್ಲಿ ಸಕ್ಕರೆ ಬಳಕೆ ಪ್ರಮಾಣಕ್ಕೆ ಮಿತಿಯನ್ನು ಹಾಕಿಲ್ಲ. ಅವುಗಳ ಉತ್ಪಾದಕರು ಮನಬಂದಂತೆ ಕೃತಕ ಸಕ್ಕರೆಯನ್ನು ಬಳಸುವರು. ಹೀಗಾಗಿ ಇವುಗಳನ್ನು ಸೇವಿಸಿದಾಗ ತಕ್ಷಣ ಹೆಚ್ಚು ಕ್ಯಾಲರಿಗಳು ದೊರೆತು ಹೊಸ ಹುರುಪು, ಹುಮ್ಮಸ್ಸು, ಸ್ಫೂರ್ತಿ ಸಂಚಾರವಾದ ಭ್ರಮೆ ಉಂಟಾಗುತ್ತದೆ. ಶ್ರಮ, ದಣಿವು ಪರಿಹಾರವಾದಂತಾಗುತ್ತದೆ. ಟಿ.ವಿ.ಯ ರಂಜನೀಯ ಜಾಹಿರಾತುಗಳ ಮೋಡಿಗೆ ಮೊದಲೇ ಮರುಳಾದ ಯುವಜನಾಂಗ ಖುಷಿ ನೀಡುವ ತಾತ್ಕಾಲಿಕ ಪರಿಣಾಮಗಳ ಕಪಿಮುಷ್ಟಿಯಲ್ಲಿ ಸಿಕ್ಕಾಗ ಕೋಲ್ಡ್ರಿಂಕ್ಸ್‌ಗಳ ಗುಲಾಮರಾಗುವರು.

ಕೋಲ್ಡ್ರಿಂಕ್ಸ್‌ಗಳಲ್ಲಿಯ ಸಕ್ಕರೆಯು ಬೇಗನೆ ರಕ್ತಗತವಾಗಿಬಿಡುತ್ತದೆ. ರಕ್ತದಲ್ಲಿ ಸಕ್ಕರೆ ಅಂಶ ಜಾಸ್ತಿಯಾದೊಡನೆ ದೇಹವು 'ಇನ್ಸುಲಿನ್' ಎಂಬ ಹಾರ್ಮೋನನ್ನು ಸ್ರವಿಸಬೇಕಾಗುತ್ತದೆ. ಇದರಿಂದ ಇನ್ಸುಲಿನ್ ಸ್ರವಿಸುವ ಮೇದೋಜೀರಕ ಗ್ರಂಥಿಗೆ ಅನಗತ್ಯ ಒತ್ತಡ ಬೀಳುತ್ತದೆ. ಅಮೆರಿಕದ ವೈದ್ಯರೊಬ್ಬರ ಪ್ರಕಾರ ಕೋಲ್ಡ್ರಿಂಕ್ಸ್ ಪಾನೀಯಗಳಲ್ಲಿಯ ಹೆಚ್ಚಿನ ಸಕ್ಕರೆಯಿಂದ ನಮ್ಮ ದೇಹದಲ್ಲಿರುವ ರೋಗ ನಿರೋಧಕ ಬ್ಯಾಕ್ಟೀರಿಯಾಗಳಲ್ಲಿ ಶೇ. ೯೨ರಷ್ಟು ಅಸುನೀಗುತ್ತವೆ. ಇತ್ತೀಚೆಗೆ 'ಪಥ್ಯ'ದ (ಡಯಟ್) ಪಾನೀಯಗಳು ಕಾಣಿಸಿಕೊಳ್ಳುತ್ತಿವೆ. ಇದಕ್ಕೆ ಸಕ್ಕರೆ ಬದಲು ಸಾಕರಿನ್ ಸೇರಿಸುತ್ತಾರೆ. ಆದರೆ, ಅಧಿಕ ಸಾಕರಿನ್ ಸೇವನೆ ಕ್ಯಾನ್ಸರಿಗೆ ದಾರಿ. ಪ್ರಾಣಿಗಳ ಮೇಲೆ ನಡೆಸಿದ ಪರೀಕ್ಷೆಗಳಿಂದಾಗಿ ಇದು ದೃಢಪಟ್ಟಿದೆ. ಅಲ್ಲದೆ ಅದು ನಿಶ್ಶಕ್ತಿ, ಮುಂಗೋಪ, ತಲೆನೋವು ಹಾಗೂ ಮೂಳೆ ಸವೆತಕ್ಕೂ ಕಾರಣವಾಗಬಹುದು.

ಸದ್ಯ ಮಾರುಕಟ್ಟೆಯಲ್ಲಿಯ ಕೋಲ್ಡ್ರಿಂಕ್ಸ್‌ಗಳ ಪ್ರತಿ ಬಾಟಲಿಯಲ್ಲಿಯ ಸಕ್ಕರೆಯ ಪ್ರಮಾಣ ೨೫ ಟೀ ಸ್ಪೂನ್‌ಗಳಷ್ಟು! ಇದು ನೀಡಬಹುದಾದ ಹೆಚ್ಚುವರಿ ಕ್ಯಾಲರಿಗಳು, ಅವುಗಳಿಂದಾಗುವ ದುಷ್ಪರಿಣಾಮಗಳತ್ತ ಗಮನಹರಿಸಿದಾಗ ಯಾರಿಗಾದರೂ ಹೆದರಿಕೆ ಆಗದೇ ಇರದು. ಸಕ್ಕರೆಯ ಪ್ರಮಾಣ ಹಲ್ಲುಗಳ ಮೇಲೆ ಪರಿಣಾಮ ಬೀರುತ್ತದೆ. ದಂತ ಕ್ಷಯ (dental caries)ದ ಬೀಜ ಬಿತ್ತುವುದು. ಒಸಡುಗಳಲ್ಲಿ ನೋವು ಕಾಣಿಸುವುದು. ಕಾಲಕ್ರಮೇಣ ಹಲ್ಲುಗಳು ಸಡಿಲಗೊಳ್ಳುವವು. ಪೋಷಕಾಂಶ ಪೌಷ್ಟಿಕಾಂಶ ರಹಿತವಾಗಿರುವ ಕೋಲ್ಡ್ರಿಂಕ್ಸ್ ಕುಡಿದಾತನ ದೇಹದ ತೂಕವನ್ನು ಹೆಚ್ಚಿಸುವುದರ ಹೊರತಾಗಿ ವ್ಯಕ್ತಿಯ ಆರೋಗ್ಯಕ್ಕೆ ಯಾವುದೇ ರೀತಿಯಿಂದ ಸಹಕಾರಿ ಅಲ್ಲ. ಈ ಪೇಯಗಳು ಹಸಿವನ್ನು ಹಿಂಗಿಸುತ್ತವೆ. ಹೀಗಾಗಿ ವ್ಯಕ್ತಿ ಆಹಾರ ಪದಾರ್ಥಗಳನ್ನು ಸೇವಿಸದೇ ಹೋಗುವುದರಿಂದ ಕೊರತೆಯ ಕಾಯಿಲೆಗಳ ಕರಿನೆರಳು ಕಾಣಿಸಿಕೊಳ್ಳುವುದು. ತಂಪು ಪೇಯಗಳಲ್ಲಿಯ ಆರ್ಸನಿಕ್ ಅನೇಕ ರೋಗಗಳ ಜನ್ಮದಾತನಂತೆ ವರ್ತಿಸುವುದು. ಪೇಯಗಳ ಆಮ್ಲೀಯತೆ ಹೊಟ್ಟೆ ಹುಣ್ಣಿಗೆ ಹಾದಿ ಮಾಡಬಹುದು. ಈಗಾಗಲೇ ಪಿತ್ತದಿಂದ ತತ್ತರಿಸುವವರಲ್ಲಿ ಹೊಟ್ಟೆ ಹುಣ್ಣು ಉಲ್ಬಣಗೊಂಡು ನೋವಿನಿಂದ ನಲುಗಬಹುದು. ಬಾಯಲ್ಲಿ ಹುಳಿ ಹುಳಿ ನೀರು ಬರಬಹುದು.

ಮಕ್ಕಳು ದೊಡ್ಡವರ ಹಾಗೆ ಕೋಲ್ಡ್ರಿಂಕ್ಸ್‌ಗಳನ್ನು ಗಟಗಟ ಕುಡಿಯುವುದಿಲ್ಲ. ಸಾವಕಾಶವಾಗಿ ಸ್ವಲ್ಪ ಸ್ವಲ್ಪವನ್ನೇ ಆಟವಾಡುತ್ತ ಕುಡಿಯುವರು. ಇದು ಅವರ ಸಹಜ ಸ್ವಭಾವ. ಹೀಗಾಗಿ ಕೋಲ್ಡ್ರಿಂಕ್ಸ್ ಹಲ್ಲುಗಳ ಸಂಪರ್ಕದಲ್ಲಿ ಬಹಳ ಕಾಲದವರೆಗೆ ಉಳಿಯುವುದು. ಹಲ್ಲುಗಳಿಗೆ ಹಾನಿ ಉಂಟುಮಾಡುವ ಅವಕಾಶ ಹೆಚ್ಚುವುದು. ಫಾಸ್ಫೋರಿಕ್ ಆಮ್ಲದಿಂದಾಗಿ ಕೋಲ್ಡ್ರಿಂಕ್ಸ್‌ಗಳಲ್ಲಿ ಆಮ್ಲೀಯತೆ ಇರುವುದು. ಇದು ಹಲ್ಲುಗಳ ಪದರುಗಳು ಸವೆದುಹೋಗುವಂತೆ ಮಾಡುವುದು. ಇದರಿಂದ ಹಲ್ಲುಗಳು ಅಶಕ್ತವಾಗುವುದರ ಜೊತೆಗೆ ಕಂದುಬಣ್ಣಕ್ಕೆ ತಿರುಗುವವು. ಯಾವ ಮಕ್ಕಳು ಹೆಚ್ಚು ತಂಪು ಪಾನೀಯ (cold drinks)ಗಳನ್ನು ಕುಡಿಯುವರೋ ಆ ಮಕ್ಕಳ ಹಲ್ಲುಗಳು ಹೆಚ್ಚು ಹಾಳಾಗುವವು. ಇದನ್ನು ಆಳವಾದ ಅಧ್ಯಯನಗಳು ಸ್ಪಷ್ಟಪಡಿಸಿವೆ.

ಹಲ್ಲುಗಳನ್ನು ಕೋಲ್ಡ್ರಿಂಕ್ಸ್‌ಗಳಲ್ಲಿ ಮುಳುಗಿಸಿಟ್ಟರೆ ಅದು ಕ್ಯಾಲ್ಸಿಯಂ ರಹಿತವಾಗಿ ದುರ್ಬಲಗೊಂಡು ಕೆಲವೇ ದಿನಗಳಲ್ಲಿ ಪಾನೀಯಗಳಲ್ಲಿ ಕರಗಿಹೋಗುವುದಂತೆ ! ಇದು ನಾವೆಲ್ ಸಂಶೋಧನ ಕೇಂದ್ರದ ಡಾ॥ ಕ್ಲೈವ್ ಮ್ಯಾಕ್ ಅವರ ಪ್ರಯೋಗದ ಫಲಿತಾಂಶ. ಮ್ಯಾಕ್ ಕೈಗೊಂಡ ಮತ್ತೊಂದು ಪ್ರಯೋಗದಲ್ಲಿ ಅವರು ಕೆಲವು ಇಲಿಗಳಿಗೆ ಉತ್ತಮ ಆಹಾರವನ್ನು ನೀಡಿ ಕುಡಿಯಲು ಮಾತ್ರ ಕೋಲ್ಡ್ರಿಂಕ್ಸ್ ಕೊಡುತ್ತಿದ್ದರು. ಆರು ತಿಂಗಳ ನಂತರ ಕೆಲವು ಇಲಿಗಳಲ್ಲಿ ಹಲ್ಲುಗಳು ಅತ್ಯಂತ ದುರ್ಬಲಗೊಂಡಿದ್ದರೆ, ಮತ್ತೆ ಕೆಲವು ಇಲಿಗಳಲ್ಲಿ ಇದ್ದದ್ದು ವಸಡು ಮಾತ್ರ.

ಕೋಲ್ಡ್ರಿಂಕ್‌ಗಳಲ್ಲಿ 'ಕೆಫಿನ್' ಬಳಸಲ್ಪಡುವುದು. 'ಕೆಫಿನ್' ಪ್ರಮಾಣ ಜಾಸ್ತಿಯಾದಷ್ಟು ಸೇವಿಸಿದಾತನಿಗೆ ನಿರುತ್ಸಾಹ, ತಲೆನೋವು, ನಿದ್ರಾರಾಹಿತ್ಯ ಇತ್ಯಾದಿಗಳು ಪೀಡಿಸುವವು; 'ಕೆಫಿನ್', ದೇಹದಲ್ಲಿ ಪಚನವಾದಾಗ ಯುರಿಕ್ ಆಮ್ಲವಾಗಿ ಪರಿವರ್ತನೆಗೊಳ್ಳದೇ, ಮಿಥೈಲ್ ಯುರಿಕ್ ಆಮ್ಲವಾಗಿ ರೂಪಾಂತರಗೊಳ್ಳುವುದು. ಇದು ತ್ವರಿತವಾಗಿ ಕರಗುವುದು. ಕೀಲುಗಳಲ್ಲಿ ಸಂಗ್ರಹಗೊಂಡು ಕೀಲು ನೋವು ಕಾಣಿಸಿಕೊಳ್ಳುವುದು. 'ಗೌಟ್' (gout) ರೋಗದಿಂದ ಬಳಲುವವರಿಗೆ ಮತ್ತಷ್ಟು ನೋವಿನ ಉಡುಗೊರೆ ದೊರೆಯುವುದು.

ಕೆಫಿನ್‌ಯುಕ್ತ ಕೋಲ್ಡ್ರಿಂಕ್ಸ್ ಹೃದಯ ಮತ್ತು ರಕ್ತ ಸಂಚಾರಮಂಡಲ, ನರಮಂಡಲಗಳ ಮೇಲೆ ನೇರ ಪ್ರಭಾವ ಬೀರುವುದರಿಂದ ಇವುಗಳನ್ನು ರಕ್ತದೊತ್ತಡದಿಂದ ಬಳಲುವವರು ಕುಡಿಯಬಾರದು. ಕೇಂದ್ರ ನರಮಂಡಲ ಪ್ರಚೋದನೆಯಿಂದ ತಳಮಳ ಹೆಚ್ಚಿ ನಿದ್ರಾಭಂಗ ಆಗುವುದು. ಹೃದಯದ ತಾಳ ತಪ್ಪುವುದು. ಹಾವು ನೋಡಿದ ಹೆದರಿಕೆಯಲ್ಲಿ ಹೃದಯ ಬಡಿದುಕೊಳ್ಳುವಂತೆ, ಕೋಲ್ಡ್ರಿಂಕ್ಸ್ ಕುಡಿದಾಗ ಆಗಬಹುದು. ಈ ಪರಿಣಾಮಗಳು ದೊಡ್ಡ ದೊಡ್ಡ ಬಾಟಲುಗಳಲ್ಲಿನ ಪೇಯ ಕುಡಿಯುವುದರಿಂದ ಸರ್ವಸಾಮಾನ್ಯ. ಕೆಫಿನ್‌ಯುಕ್ತ ಪೇಯಗಳನ್ನು ಕುಡಿಯುವುದು ಕಾಲಕ್ರಮೇಣ ಚಟವಾಗಿಬಿಡುವುದು. ತಾಳಿಕೆಯ ತಳಪಾಯದ ಮೇಲೆ ಮಾನಸಿಕ ಅವಲಂಬನೆ ತಲೆ ಎತ್ತುವುದು.

ಕೋಲ್ಡ್ರಿಂಕ್ಸ್‌ಗಳಲ್ಲಿ ಕೆಫಿನ್ ಜೊತೆಗೆ ಫಾಸ್ಫೋರಿಕ್ ಆಮ್ಲವು ಅಡಕವಾಗಿರುತ್ತದೆ. ಹೆಚ್ಚುವರಿ ಫಾಸ್ಫೇಟ್ ಸೇವನೆ ಎಲುಬುಗಳನ್ನು ಗಟ್ಟಿಗೊಳಿಸುವ ಬದಲು ಅನೇಕ ಸಮಸ್ಯೆಗಳನ್ನು ಹುಟ್ಟುಹಾಕುವುದು. ಫಾಸ್ಫರಸ್ ನಿತ್ಯ ಸೇವಿಸುವ ನೈಸರ್ಗಿಕ ಆಹಾರ ಪದಾರ್ಥಗಳಲ್ಲಿ ಹೇರಳವಾಗಿ ದೇಹಕ್ಕೆ ಪೂರೈಕೆಯಾಗುವುದು. ಹೀಗಾಗಿ ಅದರ ಕೊರತೆಯ ಕರಿನೆರಳು ಮಾನವರ ಸಮೀಪ ಸುಳಿಯುವುದಿಲ್ಲ. ಆದರೆ ಕೋಲ್ಡ್ರಿಂಕ್ಸ್ ಮೂಲಕ ಸೇವಿಸಿದ ಹೆಚ್ಚುವರಿ ಫಾಸ್ಫೇಟ್ ಮೂತ್ರಪಿಂಡಗಳ ಮೇಲೆ ದುಷ್ಪರಿಣಾಮವನ್ನು ಬೀರುವುದು, ಅನಾವಶ್ಯಕ ಅನಾಹುತಗಳಿಗೆ ಆಹ್ವಾನ ನೀಡುವುದು.

ಕೋಲ್ಡ್ರಿಂಕ್ಸ್‌ಗಳಲ್ಲಿ ಅಡಗಿರುವ ಇತರ ಅಂಶಗಳೆಂದರೆ – ಸೀಸ, ತವರ, ತಾಮ್ರ, ಆರ್ಸೆನಿಕ್, ಕ್ಯಾಡ್ಮಿಯಮ್ ಇತ್ಯಾದಿ. ಭಾರತೀಯ ಮಾನಕ ಸಂಸ್ಥೆ (Bureau of Indian Standards) ನಿಗದಿಪಡಿಸಿದ ಪ್ರಮಾಣಕ್ಕಿಂತ ಹೆಚ್ಚಿವೆ. ಅಹ್ಮದಾಬಾದಿನಲ್ಲಿ ಸ್ಥಾಪಿತಗೊಂಡಿರುವ ಗ್ರಾಹಕ ಶಿಕ್ಷಣ ಮತ್ತು ಸಂಶೋಧನಾ ಸಂಸ್ಥೆಯಲ್ಲಿ ಬೇರೆ ಬೇರೆ ಕಂಪನಿಗಳ ಕೋಲ್ಡ್ರಿಂಕ್ಸ್‌ಗಳನ್ನು ಕೂಲಂಕಷವಾಗಿ ವಿಶ್ಲೇಷಿಸಿದಾಗ ಅನೇಕ ಆಶ್ಚರ್ಯಕರ ಸಂಗತಿಗಳು ಬೆಳಕಿಗೆ ಬಂದವು. ಈ ಪಾನೀಯಗಳಲ್ಲಿ ನಿರ್ಧರಿತ ಪ್ರಮಾಣಕ್ಕೂ ಮಿಕ್ಕಿ ೦.ಶ ಪಿ.ಪಿ.ಎಂ.ರಷ್ಟು ಹೆಚ್ಚು ಸೀಸ ಇದೆ ಎಂಬುದು ತಿಳಿದುಬಂದಿದೆ. ಸೀಸ ಶರೀರವನ್ನು ಹೊಕ್ಕಿತೆಂದರೆ ಕೆಂಪು ರಕ್ತಕಣಗಳನ್ನು ನಾಶಗೊಳಿಸುವುದು. ನರಗಳ ದೌರ್ಬಲ್ಯ ಹೆಚ್ಚಿಸುವುದು. ವ್ಯಕ್ತಿ ಅಶಕ್ತಿಯ ಆಗರವಾಗಲು ಸಹಕರಿಸುವುದು. ರಕ್ತದ ಒತ್ತಡ ಹೆಚ್ಚಿಸುವುದು. ಒಂದೇ ಮಾತಿನಲ್ಲಿ ಹೇಳುವುದಾದರೆ ಕೋಲ್ಡ್ರಿಂಕ್ಸ್ ಕುಡಿಯುವುದೆಂದರೆ ವಿಷ ರಸಾಯನಗಳ ರಸದೂಟ ಮಾಡಿದಂತೆ !!

**ಕೋಲಾ ಕಲ್ಚರ್ ಕೋಲಾಹಲ**

ಮುಚ್ಚಳ ತೆರೆದೊಡನೆ ಬುಸ್ಸೆಂದು ಉಕ್ಕುವ ವಿಚಿತ್ರ ರುಚಿಯ, ಗಂಟಲು ಹೊಟ್ಟೆಯೆಲ್ಲ ಕೊರೆಯುವಂತೆ ಮಾಡುವ, ಪಾಶ್ಚಾತ್ಯರ ಜೀವನದ ಮತ್ತು ವ್ಯಾಪಾರ ನೀತಿಯ ಪ್ರತೀಕವಾದ 'ಕೋಲಾ' (ಕೋಲ್ಡ್ ಡ್ರಿಂಕ್ಸ್)ಗಳು, ಸಮೂಹ ಮಾಧ್ಯಮದ ರಂಗುರಂಗಿನ ಜಾಹಿರಾತುಗಳ ಮೋಡಿಯಿಂದ ನಮ್ಮ ಯುವ ಜನಾಂಗವನ್ನು ಮರುಳುಗೊಳಿಸಿವೆ. ಯುವ ಜನರಿಗೆ 'ಕೋಲಾ ಕಲ್ಚರ್' ಆಧುನಿಕ ಜೀವನದ ಒಂದು ಅವಿಭಾಜ್ಯ ಅಂಗವಾಗಿದೆ. ಕೋಲಾ-ಕೋಲಾಹಲ ಜೀವಕ್ಕೆ ಹಾಲಾಹಲ ಎಂಬ ಅರಿವು ಜನರಲ್ಲಿ ಇಲ್ಲದಿರುವುದು ಒಂದು ದೊಡ್ಡ ದುರಂತ. ಜನರ ಈ ಅಜ್ಞಾನವನ್ನೇ ಬಂಡವಾಳವಾಗಿಸಿಕೊಂಡಿರುವ ಕೋಲ್ಡ್ರಿಂಕ್ಸ್ ಕಂಪನಿಗಳು ರಂಗುರಂಗಿನ ಬಾಟಲುಗಳನ್ನು ಬಜಾರಕ್ಕೆ ಬಿಡುಗಡೆ ಮಾಡುತ್ತಲೇ ಇವೆ. ಈ ಪಾನೀಯಗಳು ಅತೀ ತಂಪಾಗಿರುವುದರಿಂದ ಗಟಗಟನೆ ಕುಡಿದಾಗ ರಕ್ತನಾಳಗಳು ಒಮ್ಮೆಲೇ ಸಂಕುಚಿತವಾಗುವವು. ಇದರಿಂದ ಜೀರ್ಣರಸಗಳ ಸ್ರಾವ ಒಮ್ಮೆಲೆ ಕಡಿಮೆಯಾಗುವುದು. ಅಲ್ಪ ಸ್ವಲ್ಪ ಪಾಚಕರಸಗಳು ಪಾನೀಯದೊಂದಿಗೆ ಸೇರಿ ಹೆಚ್ಚು ನೀರಾಗಿ ದುರ್ಬಲಗೊಳ್ಳುತ್ತವೆ.

ಹೀಗಾಗಿ ಕೋಲ್ಡ್ರಿಂಕ್ಸ್ ಕುಡಿದ ನಂತರ ಸೇವಿಸಿದ ಆಹಾರ ಪಚನವಾಗುವುದಿಲ್ಲ. ಅಲ್ಲದೇ ತೇಗು, ಹೊಟ್ಟೆ ಉಬ್ಬರ ಉಂಟಾಗುತ್ತದೆ. ಒಂದು ಅಧ್ಯಯನದ ಪ್ರಕಾರ ಒಂದು ಲೋಟ ಕೋಲ್ಡ್ರಿಂಕ್ಸ್‌ನ ವಿಷಾಮ್ಲಗಳ ದುಷ್ಪರಿಣಾಮವನ್ನು ನಿವಾರಿಸಲು ಹೆಚ್ಚು ಕ್ಷಾರಾಂಶ ಹೊಂದಿದ ೩೨ ಲೋಟ ನೀರು ಕುಡಿಯಬೇಕು ! ಮೆಕ್ಸಿಕೋದ ಡಾ|| ಫ್ರಾನ್ಸಿಸ್ಕೋ ಕೊಂಟ್ರಾರೀಸರ್ ಪ್ರಕಾರ ಕೋಲ್ಡ್ರಿಂಕ್ಸ್‌ಗಳ ಸೇವನೆ ದೇಹದಲ್ಲಿ ಆಮ್ಲಜನಕದ ಪ್ರಮಾಣವನ್ನು ಕುಗ್ಗಿಸಿ ಯಾವುದೇ ತರಹದ ಕ್ಯಾನ್ಸರನ್ನು ಆಮಂತ್ರಿಸಬಹುದು. ಅಮೇರಿಕನ್ನರು ವರ್ಷಕ್ಕೆ ಸರಾಸರಿ ತಲಾ ೮೦೦ ಬಾಟಲಿಗಿಂತ ಹೆಚ್ಚು ತಂಪು ಪಾನೀಯಗಳನ್ನು ಸೇವಿಸುತ್ತಾರೆ. ಅಮೇರಿಕಾದಲ್ಲಿ ಸಾವಿಗೆ ಕ್ಯಾನ್ಸರ್ ಎರಡನೇ ಸ್ಥಾನದಲ್ಲಿದೆ !

ಕೋಲ್ಡ್ರಿಂಕ್ಸ್ ಸೇವನೆಯಿಂದ ಟೈಫಾಯ್ಡ್, ವಾಂತಿಭೇದಿ, ಆಮಶಂಕೆ ರೋಗಗಳಿಗೆ ಆಹ್ವಾನ ನೀಡಿದಂತೆ ! ಅಲರ್ಜಿ ಆಗಮನಕ್ಕೆ ವೀಳ್ಯ ಕೊಟ್ಟಂತೆ !! ಇದಕ್ಕೆ ಕಾರಣ ಅದರಲ್ಲಿರುವ ನಂಜುಕಾರಕ ಅಂಶಗಳು. ಬಾಯಾರಿಕೆ ತಣಿಸಲು, ಆರೋಗ್ಯ ವರ್ಧಿಸಲು ಕ್ಯಾಲೋರಿಗಳಿಲ್ಲದ ಶುದ್ಧ ನೀರಿನ ಸಮ ಯಾವುದೂ ಇಲ್ಲ. ಇದು ಸತ್ಯ. ಉಳಿದೆಲ್ಲಾ ಮಿಥ್ಯ.

**ಕಡೆಗಣಿಸಿದ ಕಟ್ಟೆಚ್ಚರಿಕೆಗಳು**

ಭಾರತೀಯ ಔಷಧಿ ನಿಯಂತ್ರಣಕಾರರು ಔಷಧ ತಯಾರಿಕೆಯಲ್ಲಿ ಗ್ಲಿಸರೋಫಾಸ್ಫೇಟ್ ಮತ್ತು ಕೆಫಿನ್ ಬಳಸಬಾರದೆಂದು ಕಟ್ಟೆಚ್ಚರಿಕೆ ನೀಡುವುದರ ಜೊತೆಗೆ ಈ ಘಟಕಗಳಿರುವ ಔಷಧಿಗಳನ್ನು ಮಾರಾಟಕ್ಕೆ ನಿಷೇಧಿಸಿದೆ. ಇದರ ಅರಿವು ಸಾರ್ವಜನಿಕರಿಗೆ ಇಲ್ಲ. ಈ ದೌರ್ಬಲ್ಯವನ್ನೇ ಬಂಡವಾಳವಾಗಿ ಬಳಸಿಕೊಂಡಿರುವ ಕೋಲ್ಡ್ರಿಂಕ್ಸ್ ಕಂಪನಿಗಳು ಪೇಯಗಳ ತಯಾರಿಕೆಯಲ್ಲಿ ಬಳಸುತ್ತಿರುವುದು ಮತ್ತು ಅವು ಯಾವ ಪ್ರಮಾಣದಲ್ಲಿವೆ ಎಂಬುದನ್ನು ಬಾಟಲುಗಳ ಲೇಬಲ್ ಮೇಲೆ ಮುದ್ರಿಸದೇ ಇರುವುದು ಗ್ರಾಹಕರನ್ನು ಕಗ್ಗತ್ತಲಲ್ಲಿ ಇಟ್ಟಂತಾಗಿದೆ.

ಪರದೇಶಗಳಲ್ಲಿ ಪ್ರತಿಯೊಂದು ತಂಪು ಪಾನೀಯಗಳ ಪ್ಯಾಕ್ ಮೇಲೂ ಅದರ ಪ್ಯಾಕಿಂಗ್ ದಿನಾಂಕ, ಸೇವಿಸಲು ಇರುವ ಗರಿಷ್ಠ ಅವಧಿ ಅಡಕವಾಗಿರುವ ಅಂಶಗಳ ವಿವರ ಇತ್ಯಾದಿಗಳನ್ನು ನಮೂದಿಸಬೇಕಾದದ್ದು ಕಾನೂನುಬದ್ಧ ಕ್ರಮವಾಗಿದೆ. ಆದರೆ ನಮ್ಮ ದೇಶದಲ್ಲಿ ? ಅವುಗಳತ್ತ ಗಮನಹರಿಸಬೇಕಾದದ್ದು ಮುಖ್ಯ ಎಂಬ ಮೂಲಭೂತ ಪರಿಜ್ಞಾನವೂ ಗ್ರಾಹಕನಿಗಿಲ್ಲ. ಇದರ ದುರ್ಲಾಭವನ್ನು ಕೋಲ್ಡ್ರಿಂಕ್ಸ್ ಕಂಪೆನಿಗಳು ಪಡೆದುಕೊಳ್ಳುತ್ತಿವೆ.

ಇಂಗಾಲಾಮ್ಲ (carbon dioxide) ಪಿತ್ತವನ್ನು ಹೆಚ್ಚಿಸಿ, ಹೊಟ್ಟೆ ಹುಣ್ಣಿದ್ದವರಿಗೆ ಮತ್ತಷ್ಟು ತೊಂದರೆ ಕೊಡುವುದು. ಇದು ಉಸಿರಾಟ ಕೇಂದ್ರವನ್ನು ಪ್ರಚೋದಿಸುವುದು. ಕೋಲ್ಡ್ರಿಂಕ್ಸ್‌ಗಳೆಲ್ಲ ಇಂಗಾಲಿಕ (carbonated) ಪೇಯಗಳು. ಇವುಗಳ ಅತಿಯಾದ ಸೇವನೆ ತಲೆನೋವು, ತಲೆಸುತ್ತು, ಮಾನಸಿಕ ಗೊಂದಲ, ಏದುಸಿರು ಬಿಡುವಿಕೆ, ಉಸಿರಾಟದ ವೇಗದ ಹೆಚ್ಚಳಗಳಿಗೆ ಹಾದಿ ಮಾಡಬಹುದು.

ಕೋಲ್ಡ್ರಿಂಕ್ಸ್ ಪೋಷಕಾಂಶಗಳನ್ನು ಹೊಂದಿರುವುದಿಲ್ಲ. ಅವು ಕೇವಲ ಕ್ಯಾಲೋರಿಗಳನ್ನು ನೀಡಬಲ್ಲವು. ಅವುಗಳಲ್ಲಿ ಪ್ರೊಟೀನುಗಳಿಲ್ಲ. ಜೀವಸತ್ವಗಳಿಲ್ಲ. ಸದೃಢ ಶರೀರ ನಿರ್ಮಾಣದಲ್ಲಿ ಉಪಯುಕ್ತವಾಗಬಹುದಾದ ಯಾವ ಅಂಶಗಳೂ ಇಲ್ಲ. ಅನಾರೋಗ್ಯವನ್ನು ಆದರದಿಂದ ಸ್ವಾಗತಿಸುವ ಎಲ್ಲ ಸಲಕರಣೆಗಳೂ ಅವುಗಳಲ್ಲಿವೆ. ಜಗತ್ಪಸಿದ್ಧ ಆಹಾರ ವಿಜ್ಞಾನಿ ಡಾ|| ಹಾರ್ವೆ ಡೈಮಂಡ್ ತಮ್ಮ 'ಫಿಟ್ ಫಾರ್ ಲೈಫ್' ಪುಸ್ತಕದಲ್ಲಿ ಸ್ಪಷ್ಟವಾಗಿ ಹೀಗೆ ಹೇಳಿದ್ದಾರೆ : ''ಈ ಕೋಲ್ಡ್ರಿಂಕ್ಸ್ ಸೇವನೆಯಿಂದ ಇಡೀ ಮಾನವ ಜನಾಂಗಕ್ಕೆ ಅಪಾಯವಿದೆ.'' ಅಷ್ಟೇ ಅಲ್ಲ, ಈ ಪೇಯಗಳ ಬದಲಾಗಿ ಪಾರಂಪರಿಕವಾಗಿ ಸೇವಿಸುತ್ತ ಬಂದಿರುವ ನೈಸರ್ಗಿಕ ಪೇಯಗಳಾದ ಲಸ್ಸೀ, ಮಜ್ಜಿಗೆ, ಪಾನಕ, ಎಳೆನೀರು, ಹಣ್ಣಿನರಸ ಇತ್ಯಾದಿಗಳನ್ನು ಸೇವಿಸುವುದು ಹೆಚ್ಚು ಸುರಕ್ಷಿತ ಎಂಬ ಸಲಹೆಯನ್ನು ನೀಡಿದ್ದಾರೆ. ಕಾರಣ, ತಂಪು ಪಾನೀಯಗಳ ಕಂಪೆನಿಗಳ ಕಮಾಂಡರುಗಳ ಕಪ್ಪು ಹಣದ ಕಟ್ಟುಗಳಿಗೆ, ಕಸರತ್ತುಗಳಿಗೆ ಸರಕಾರ ಸೊಪ್ಪು ಹಾಕದೇ, ಈ ಮೊದಲು ಮಾರುಕಟ್ಟೆಯಲ್ಲಿದ್ದ ೨೦೦ ಮಿಲಿ ಬಾಟಲಿಗಳ ಉತ್ಪಾದನೆಗೆ ಮಾತ್ರ ಪರವಾನಿಗೆ ನೀಡಬೇಕು. ಮೆಗಾ, ಜಂಬು, ಸೂಪರ್ ಜಂಬುಗಳನ್ನು ನಿಷೇಧಿಸಬೇಕು. ಆಹಾರಾಂಶಗಳನ್ನು ಹೊಂದಿರುವ ನೈಸರ್ಗಿಕ ಹಣ್ಣಿನ ರಸಗಳ ಸೇವನೆಗೆ ಉತ್ತೇಜನ ನೀಡಬೇಕು. ಇದರಿಂದ ಎಲ್ಲರಿಗೂ ಆರೋಗ್ಯ ಸಾಧಿಸಲು ಸಾಧ್ಯವಾದೀತು !

**ಡಾ|| ಕರವೀರಪ್ರಭು ಕ್ಯಾಲಕೊಂಡ**
ವೈದ್ಯಾಧಿಕಾರಿಗಳು, ಸಮುದಾಯ ಆರೋಗ್ಯ ಕೇಂದ್ರ
ಬಾದಾಮಿ - ೫೮೭ ೨೦೧, ಜಿ|| ಬಾಗಲಕೋಟ

# ಯೋಗ ಪ್ರವೇಶ - ೧೮

ಜಿ. ರಾಮಕೃಷ್ಣ

ಮತ್ಸ್ಯೇಂದ್ರನೆಂಬ ಯೋಗಪಟುವು ಒಂದು ವಿಶಿಷ್ಟ ಆಸನವನ್ನು ಅಭ್ಯಾಸ ಮಾಡಿ ಬೋಧಿಸಿದನೆನ್ನುತ್ತಾರೆ. ಸಾಮಾನ್ಯರ ದೃಷ್ಟಿಯಿಂದ ಅದು ಕ್ಲಿಷ್ಟವೆಂದು ಹೇಳಿ ಸ್ವಾಮಿ ಕುವಲಯಾನಂದರು ದೇಹಾರೋಗ್ಯದ ಅವಶ್ಯಕತೆಯನ್ನು ಪೂರೈಸಲು ಅರ್ಧ - ಮತ್ಸ್ಯೇಂದ್ರಾಸನವನ್ನು ಅಭ್ಯಾಸ ಮಾಡಬಹುದೆಂದು ವಿವರಿಸಿದ್ದಾರೆ. ಮೂಲತಃ ಇದು ಬೆನ್ನುಹುರಿಗೆ ವ್ಯಾಯಾಮವನ್ನು ಒದಗಿಸುತ್ತದೆ. ಜಠರಾಗ್ನಿಯನ್ನು ಉತ್ತೇಜಿಸಿ ಅನೇಕ ಪ್ರಚಂಡ ರೋಗಗಳನ್ನು ನಿವಾರಿಸಲು ಈ ಆಸನವು ಉಪಯುಕ್ತವೆಂದು ಹೇಳುವ ಹಠಪ್ರದೀಪಿಕೆಯು ಕುಂಡಲಿನಿಯು ಜಾಗೃತವಾಗಲು ಹಾಗೂ ಚಂದ್ರಾಂಶದ ಸ್ಥಿರತ್ವ ಉಂಟಾಗಲು ಸಹ ಈ ಆಸನ



ಸಹಾಯಕವಾಗುತ್ತದೆಂದು ತಿಳಿಸುತ್ತದೆ (೧. ೨೭ : ಮತ್ಸ್ಯೇಂದ್ರಪೀಠಂ ಜಠರಪ್ರದೀಪ್ತಿಂ ಪ್ರಚಂಡರು - ಗ್ಮಂಡಲಖಂಡನಾಸ್ತ್ರಮ್ ! ಅಭ್ಯಾಸತಃ ಕುಂಡಲಿನೀ ಪ್ರಬೋಧಂ ಚಂದ್ರಸ್ಥಿರತ್ವಂ ಚ ದದಾತಿ ಪುಂಸಾಮ್ ॥). ಯೋಗಶಾಸ್ತ್ರ ಗ್ರಂಥಗಳಲ್ಲಿ ಕುಂಡಲಿನಿಯ ಬಗ್ಗೆ ಹಲವಾರು ಪ್ರಸ್ತಾಪಗಳಿವೆಯಾದರೂ ಶರೀರಶಾಸ್ತ್ರದ ಗ್ರಂಥಗಳ ಸಹಾಯದಿಂದ ಈ ಕಲ್ಪನೆಯ ಮೂರ್ತಸ್ವರೂಪವನ್ನು ಗುರುತಿಸುವುದು ಈವರೆಗೆ ನಿಷ್ಕೃಷ್ಟವಾಗಿ ಸಾಧ್ಯವಾಗಿಲ್ಲ. ಷಟ್ಚಕ್ರಭೇದನವೆಂದು ಕರೆಯಲಾಗುವ ಒಂದು ಪ್ರಕ್ರಿಯೆಯ ಬಗೆಗೂ ಇದನ್ನೇ ಹೇಳಬೇಕಾಗುತ್ತದೆ. ಆದ್ದರಿಂದ ಕುಂಡಲಿನಿಯ ವಿವರಣೆಗೆ ಇಲ್ಲಿ ಯತ್ನಿಸಲಾಗುವುದಿಲ್ಲ. "ಚಂದ್ರಸ್ಥಿರತ್ವ" ಎಂದರೇನು ಎಂಬ ಜಿಜ್ಞಾಸೆಯೂ ಅಮೂರ್ತವಾದ ಉತ್ತರದಲ್ಲೇ ಪರ್ಯವಸಾನವಾಗುತ್ತದೆ. ಮೂಗಿನ ಎರಡು ಹೊಳ್ಳೆಗಳಿಗೆ ಸೂರ್ಯ-ಚಂದ್ರ ಎಂಬ ಹೆಸರುಗಳನ್ನು ನೀಡುವುದು ಯೋಗಶಾಸ್ತ್ರ ಗ್ರಂಥಗಳಲ್ಲಿ ರೂಢಿಯಲ್ಲಿದೆ. ಇಲ್ಲಿ ಆ ಅರ್ಥವು ಸ್ವೀಕೃತವಾಗಲಾರದು. ಇನ್ನೊಂದು ಪರಿಭಾಷೆಯಲ್ಲಿ ಚಂದ್ರನು ನಾಲಿಗೆಯ ಬುಡದಲ್ಲಿದ್ದು ಸದಾ ಅಮೃತವನ್ನು ಉಕ್ಕಿಸುತ್ತಿರುವುದಾಗಿ ಭಾವಿಸಲಾಗುತ್ತದೆ. ಹೊಕ್ಕಳ ಬಳಿ ನೆಲೆಸಿರುವ ಸೂರ್ಯನಲ್ಲಿಗೆ ಅದು ಹರಿದಾಗ ಸೂರ್ಯನು ಅದನ್ನು ಇಂಗಿಸಿಕೊಳ್ಳುವುದಾಗಿಯೂ ಭಾವಿಸಲಾಗುತ್ತದೆ. ಆ ಅಮೃತ ಯಾವುದು ಮತ್ತು ಅದರ ಸ್ವರೂಪವೇನೆಂದು ಶರೀರಶಾಸ್ತ್ರವು ತಿಳಿಸಿಕೊಡಲು ಸಮರ್ಥವಾಗಿಲ್ಲ; ಅಂತೆಯೇ ಅದನ್ನು ಹೀರಿಕೊಳ್ಳುವ ಸೂರ್ಯ ಯಾರು ಅಥವಾ ಯಾವುದು ಮತ್ತು ಅದು ಏಕೆ ಚಂದ್ರಾಂಶವನ್ನು ಹೀರಿಕೊಳ್ಳುತ್ತದೆ ಎಂಬುದಕ್ಕೂ ಖಚಿತವಾದ ಉತ್ತರವಿಲ್ಲ. ಚಂದ್ರಾಂಶ ಹರಿಯದಿದ್ದರೆ ಆರೋಗ್ಯ ದೃಷ್ಟಿಯಿಂದ ಏಕೆ ಉತ್ತಮವೆಂಬುದೂ ತಿಳಿದಿಲ್ಲ. ಮತ್ಸ್ಯೇಂದ್ರಾಸನದಿಂದ ಚಂದ್ರನಿಂದ ಹರಿವನ್ನು ನಿಲ್ಲಿಸಬಹುದೆಂದು ಹಠಪ್ರದೀಪಿಕೆಯ ಗ್ರಹಿಕೆ. ಈ ರೂಪಕಗಳ ಮೂಲಾರ್ಥ ಸ್ಪಷ್ಟವಾಗುವವರೆಗೆ ಜಿಜ್ಞಾಸೆಯನ್ನು ತೆರೆದಿಡುವುದಷ್ಟೇ ನಾವು ಮಾಡಬಹುದಾದ್ದು. ಶರೀರಶಾಸ್ತ್ರದಿಂದ ನಿಶ್ಚಿತವಾಗಿಲ್ಲದಿರುವುದನ್ನು ಏನೇನೋ ಗೂಢಾರ್ಥವೆಂದು ಸಲ್ಲದ ಪ್ರತಿಪಾದನೆ ಮಾಡುವುದಕ್ಕಿಂತ ಅನ್ವೇಷಣೆಯ ಆಕಾಂಕ್ಷೆಯನ್ನು ಬೆಳೆಸಿಕೊಳ್ಳುವುದು ಹೆಚ್ಚು ಸೂಕ್ತವೆಂದು ತೋರುತ್ತದೆ. ಬೆನ್ನುಹುರಿಗೆ ಈ ಆಸನವು ಒಳ್ಳೆಯ ವ್ಯಾಯಾಮ ಒದಗಿಸುತ್ತದೆಂಬುದರ ಬಗೆಗಂತೂ ಅನುಮಾನಕ್ಕೆ ಕಾರಣವಿಲ್ಲ. ಅದು ಪ್ರಯೋಗಸಿದ್ಧವಾದ್ದು, ಯಾರ ಅನುಭವಕ್ಕೆ ಬೇಕಾದರೂ ಬರುವಂತಹದ್ದು.

ಸ್ವಾತ್ಮಾರಾಮನು ತಿಳಿಸಿಕೊಟ್ಟಿರುವಂತೆ ಅದನ್ನು ಮಾಡುವ ವಿಧಾನ ಇದು : ಬಲ ಪಾದವನ್ನು ಎಡ ತೊಡೆಯ ಮೂಲದಲ್ಲಿರಿಸಿ, ಬಲ ಮಂಡಿಯನ್ನು ಎಡಗಾಲಿನಿಂದ ಸುತ್ತುವರಿಸಿ, ಎರಡೂ ಕಾಲುಗಳನ್ನು ಪರಸ್ಪರ ಬೇರೆ ಕೈಗಳಿಂದ (ಅಂದರೆ, ಎಡಗಾಲನ್ನು ಬಲಗೈಯಿಂದ ಮತ್ತು ಬಲಗಾಲನ್ನು ಎಡಗೈಯಿಂದ) ಹಿಡಿದು ಶರೀರವನ್ನು (ಬಲಕ್ಕೆ) ತಿರುಚುವುದು. (೧. ೨೬: ವಾಮೋರು ಮೂಲಾರ್ಪಿತ ದಕ್ಷಪಾದಂ ಜಾನೋರ್ಬಹಿರ್ವೇಷ್ಟಿತ ವಾಮಪಾದಮ್ । ಪ್ರಗೃಹ್ಯ ತಿಷ್ಠೇತ್ ಪರಿವರ್ತಿತಾಂಗಃ ಶ್ರೀಮತ್ಸ್ಯನಾಥೋದಿತಮಾಸನಂ ಸ್ಯಾತ್ ॥)

ಇದು ಮತ್ಸ್ಯೇಂದ್ರಾಸನದ ಅರ್ಧಭಾಗವಲ್ಲವೆಂಬುದು ಗ್ರಂಥದಲ್ಲಿರುವ ಮೇಲಿನ ವಿವರಣೆಯಿಂದ ಗೊತ್ತಾಗುತ್ತದೆ. ಘೇರಂಡ ಸಂಹಿತೆಯು ಈ ಆಸನದ ಪ್ರಕಾರವನ್ನು ಸ್ವಲ್ಪ ಭಿನ್ನವಾಗಿ ವಿವರಿಸಿದೆ. ಏನೇ ಇರಲಿ, ಕಾಲು ಮಡಿಸಿ ಹಿಮ್ಮಡಿಯನ್ನು ಗುದ ಮತ್ತು ವೃಷಣ (ಅಥವಾ ಗುದ ಮತ್ತು ಉಪಸ್ಥ)ಗಳ ನಡುವಣ ಭಾಗದಲ್ಲಿ ಒತ್ತಿ ಹಿಡಿಯಬೇಕು (ಈ ಭಾಗವನ್ನು ಇಂಗ್ಲಿಷಿನಲ್ಲಿ 'ಪೆರಿನಿಯಮ್' ಎನ್ನುತ್ತಾರೆ). ಎರಡು ಕಡೆ ಗಟ್ಟಿ ಮೂಳೆಗಳು, ನಡುವೆ ಮೃದು ಭಾಗ ಇರುವುದನ್ನು ಗಮನಿಸಿದರೆ ಶರೀರದ ಈ ಭಾಗವನ್ನು ನಿರ್ದಿಷ್ಟವಾಗಿ ಗುರುತಿಸಬಹುದು. ಹಿಮ್ಮಡಿಯ ಮೇಲೆ ಕುಳಿತಿರುವಂತೆ ಆಗಬಾರದೆಂಬುದು ಮುಖ್ಯ. ಬಲಪಾದವು ಎಡ ತೊಡೆಗೆ ಆನಿಸಿಕೊಂಡಂತೆ ಇರುತ್ತದೆ (ಇಡೀ ಆಸನವನ್ನು ಪರ್ಯಾಯ ರೂಪದಲ್ಲಿ ಮಾಡಿದಾಗ ಎಡಪಾದವು ಬಲ ತೊಡೆಗೆ ಆನಿಸಿಕೊಂಡಂತೆ ಇರುತ್ತದೆ).

ಬೆನ್ನುಹುರಿಯನ್ನು ತಿರುಚುವುದು ಈ ಆಸನದ ಪ್ರಮುಖ ಉದ್ದೇಶ. ಇದನ್ನು ಮಾಡಲು ಪೂರ್ವಸಿದ್ಧತೆ ಈವರೆಗಿನ ಕ್ರಿಯೆಯಲ್ಲಿದೆ. ಇನ್ನು ಮುಂದೆ ಮಾಡಬೇಕಾದ್ದೇನೆಂದರೆ ಲಂಬದಂತೆ ನಿಂತಿರುವ ಎಡ ಮಂಡಿಯನ್ನು ಸನ್ನೆಯಂತೆ ಉಪಯೋಗಿಸಿಕೊಂಡು ಬಲಗೈಯ ತೋಳ ಹಿಂಭಾಗವನ್ನು ಅಲ್ಲಿ ಇರಿಸುವುದು. ಎಡ ಮಂಡಿಯನ್ನು ಬಲಗೈ ಬಳಸಿರುತ್ತದೆ ಮತ್ತು ಎದೆಯ ಭಾಗವು ಎಡಕ್ಕೆ ತಿರುಗಿರುತ್ತದೆ. ಬಲಗೈಯಿಂದ ಎಡಗಾಲಿನ ಉಂಗುಷ್ಠವನ್ನು ಹಿಡಿದರೆ ಆಯ ತಪ್ಪದಂತಿರುತ್ತದೆ. ಮೊಣಕೈಗೆ ಊನವಾಗದಂತೆ ಮಾತ್ರವೇ ತಿರುಚಬೇಕೆಂಬುದನ್ನು ಮರೆಯಬಾರದು. ಭುಜವು ಮಂಡಿಗೆ ಒರಗಿದಂತಿದ್ದರೆ ಈ ಅಪಾಯ ಸಂಭವಿಸುವ ಪ್ರಮೇಯವೇ ಇರುವುದಿಲ್ಲ. ಬೆನ್ನುಹುರಿಯನ್ನು ತಿರುಚಲು ಅನುಕೂಲವಾಗುವಂತೆ ಈಗ ಎಡಗೈಯನ್ನು ಹಿಂಬದಿಯಿಂದ ತಂದು ಬಲ ತೊಡೆಯನ್ನು ಹಿಡಿಯಬಹುದು. ಹೀಗೆ ಮಾಡುವುದರಿಂದ ಬೆನ್ನುಹುರಿಯ ಅತ್ಯಂತ ಹೆಚ್ಚಿನ ತಿರುಚುವಿಕೆಯನ್ನು ಸಾಧಿಸಿದಂತಾಗುತ್ತದೆ. ತಲೆಯನ್ನೂ ಪೂರ್ತಿಯಾಗಿ ಎಡಕ್ಕೆ ತಿರುಗಿಸಿ ಎಡಭುಜಕ್ಕೆ ಸಮನಾಗಿರುವಂತೆ ಮಾಡಿಕೊಳ್ಳಬಹುದು (ಚಿತ್ರಗಳನ್ನು ನೋಡಿ). ಇಡೀ ಆಸನದ ಅವಧಿಯಲ್ಲಿ ಎದೆಯು



ಬಗ್ಗಿದಂತಿರ ಬಾರದು. ಇದೇ ರೀತಿಯಲ್ಲಿ ಇನ್ನೊಂದು ಪಕ್ಕದಲ್ಲೂ ಮಾಡಬೇಕು. ಈ ಆಸನದ ಅವಧಿ ಒಂದು ನಿಮಿಷಕ್ಕೂ ಕಡಿಮೆ ಅಥವಾ ಹೆಚ್ಚೆಂದರೆ ಒಂದು ನಿಮಿಷ. ಇನ್ನೊಂದು ಪಕ್ಕಕ್ಕೂ ಅಷ್ಟೇ ಅವಧಿ. ಎರಡೆರಡು ಬಾರಿ ತಿರುಚುವಿಕೆಯನ್ನು ಮಾಡಲಡ್ಡಿಯಿಲ್ಲ; ಆದರೆ ಅದು ಕ್ರಮೇಣ ಮಾಡಬೇಕಾದ್ದು. ಈ ಆಸನದ ಪೂರ್ಣರೂಪವನ್ನು ಒಮ್ಮೆಲೇ ತಾಳಲಾಗುವುದಿಲ್ಲ. ಕಾಲಕ್ರಮೇಣ ಅದು ಅಭ್ಯಾಸದಿಂದ ಕೂಡಿಬರುತ್ತದೆಯಾದ್ದರಿಂದ ಹತಾಶೆಗೆ ಏನೂ ಅವಕಾಶವಿಲ್ಲ.

ಬೆನ್ನುಹುರಿಗೆ ಸ್ವಾಭಾವಿಕವಾಗಿ ಆರು ರೀತಿಯ ಬಗ್ಗುವಿಕೆ ಸಾಧ್ಯ : ಮುಂದಕ್ಕೆ - ಹಿಂದಕ್ಕೆ; ಎಡ ಮತ್ತು ಬಲ ಪಕ್ಕಗಳಿಗೆ; ಹಾಗೂ ಎರಡು ವಿಧದ ತಿರುಚುವಿಕೆಗಳಿಗೆ. ನಾವೀಗಾಗಲೇ ನೋಡಿರುವಂತೆ ಸರ್ವಾಂಗಾಸನ ಮತ್ತು ಹಲಾಸನಗಳಲ್ಲಿ ಮುಂದಕ್ಕೆ ಚಾಚುವ ಕ್ರಮವಿದೆ; ಮತ್ಸ್ಯಾಸನ, ಭುಜಂಗಾಸನ, ಶಲಭಾಸನ ಮತ್ತು ಧನುರಾಸನಗಳಲ್ಲಿ ಹಿಂದಕ್ಕೆ ಚಾಚುವ ಕ್ರಮವಿದೆ. ಅರ್ಧ-ಮತ್ಸ್ಯೇಂದ್ರಾಸನದಲ್ಲಿ ಎರಡು ತಿರುಚುವಿಕೆಗಳಿವೆ. ಇದನ್ನು ಮಾಡಲಾಗದವರಿಗೆ ವಕ್ರಾಸನವೆಂಬ ಸರಳ ಪದ್ಧತಿಯನ್ನು ರೂಪಿಸಲಾಗಿದೆ. ಅದನ್ನು ಮುಂದೆ ನೋಡೋಣ.

ಜೀರ್ಣಾಂಗಗಳಿಗೆ ಮತ್ತು ಮೂತ್ರಪಿಂಡಗಳಿಗೆ ಸಹ ವ್ಯಾಯಾಮ ಒದಗಿಸುವ ಅರ್ಧ-ಮತ್ಸ್ಯೇಂದ್ರಾಸನವು ಸಿಹಿಮೂತ್ರ ರೋಗದವರಿಗೆ ಉತ್ತಮ ವ್ಯಾಯಾಮ. ಬೆನ್ನುಹುರಿಯು ಗಡುಸಾಗಿರುವವರಿಗೆ ಈ ಆಸನ ಕಷ್ಟಸಾಧ್ಯವಾದ್ದರಿಂದ ಕ್ರಮೇಣ ಶರೀರವನ್ನು ಒಗ್ಗಿಸಬೇಕಾಗುತ್ತದೆ. ಕಠಿಣ ಒತ್ತಾಯ ಎಂದಿಗೂ ಖಂಡಿತ ಶ್ರೇಯಸ್ಕರವಲ್ಲ.

□□□

# ಹಕ್ಕು

'ಹಕ್ಕು' ಎನ್ನುವ ಪದಕ್ಕೆ ಕಣ್ಣು, ಮೂಗು ಮುಂತಾದವುಗಳ ಮಲ (waste), ಪಿಚ್ಚು ಎಂಬ ಒಂದು ಅರ್ಥವಿದ್ದರೂ, ಒಡೆತನ, ಸ್ವಾಮ್ಯ ಎಂಬ ಅರ್ಥದಲ್ಲಿ ಅದನ್ನು ಬಳಸುವುದೇ ಹೆಚ್ಚು. ಇದನ್ನು ನಾವು ಇಂಗ್ಲಿಷಲ್ಲಿ 'ರೈಟ್' (right) ಎಂದು ಕರೆಯುತ್ತೇವೆ. ವ್ಯಕ್ತಿ ಸಮಾಜದಿಂದ ಬೇಡಿ, ಕಾಡಿ ಅವಶ್ಯಬಿದ್ದಾಗ ಗುದ್ದಾಡಿ, ಪಡೆದ ಸೌಲಭ್ಯ, ಜನರ ಮಾನ್ಯತೆಗೆ ಪಾತ್ರವಾಗಿ, ಅದು ಪ್ರಶ್ನಾತೀತವಾದರೆ ಅದನ್ನು ಹಕ್ಕೆಂದು ಕರೆಯಬಹುದೇನೋ. ಹಕ್ಕನ್ನು ನಾವು ಬೇಡುವುದಿಲ್ಲ, ಚಲಾಯಿಸುತ್ತೇವೆ. ಅದು ಸಾಧ್ಯವಾಗದಿದ್ದಲ್ಲಿ ನಮಗೆ ಅನ್ಯಾಯವಾಗಿದೆ ಎಂದು ನಾವು ಕೊನೆಪಕ್ಷ ಕೂಗಿಕೊಳ್ಳಬಹುದು!

''ಸ್ವಾತಂತ್ರ್ಯ ನಮ್ಮ ಜನ್ಮಸಿದ್ಧವಾದ ಹಕ್ಕು'' ಎಂದು ಲೋಕಮಾನ್ಯ ತಿಲಕರು ನಮ್ಮ ಸ್ವಾತಂತ್ರ್ಯ ಚಳುವಳಿಯ ಕಾಲದಲ್ಲಿ ಘೋಷಿಸಿದಾಗ ಆ 'ಹಕ್ಕು' ಎಂಬ ಪದಕ್ಕೆ ಎಷ್ಟೊಂದು ಸೊಕ್ಕಿತ್ತು. ಅದು ಗುಂಡಿಗೂ ಹೆದರದ ಗಂಡುಲಿಯಾಗಿತ್ತು. ಈಗ ಸ್ವಾತಂತ್ರ್ಯ ಬಂದು ಅರ್ಧ ಶತಮಾನವಾದ ಮೇಲೆ 'ಹಕ್ಕು' ಎನ್ನುವುದು ಒಂದು ಠಕ್ಕು ಎನ್ನುವಂತಾಗಿದೆ. ಹೇಳಿಕೊಳ್ಳಲಿಕ್ಕೆ ಹಕ್ಕು, ಪಾಲಿಸುವಲ್ಲಿ 'ಮಕ್ಕು'!

'ಹಕ್ಕು' ಎನ್ನುವುದು ಒಂದು ಆದರ್ಶ. ತಾರತಮ್ಯವಿಲ್ಲದೆ, ವಂಚನೆಯಿಲ್ಲದೆ, 'ಸರ್ವೇ ಜನಾಃ ಸುಖಿನೋ ಭವಂತು' ಆಗುವಲ್ಲಿ ಹಕ್ಕೆನ್ನುವುದು ಒಂದು ಸಾಧನ. ನಾಗರಿಕತೆ ಬೆಳೆದಂತೆ ಹಕ್ಕುಗಳ ಪಟ್ಟಿ ದೊಡ್ಡದಾಯಿತೇ ಹೊರತು, ಸೌಖ್ಯ ದೊಡ್ಡದಾಗಿಲ್ಲ. ಎಲ್ಲ ಹಕ್ಕುಗಳು ಎಲ್ಲರಿಗೂ ಎಟಕುವಂತಾಗದಿದ್ದರೂ ಸ್ವಲ್ಪ ಹಕ್ಕುಗಳಾದರೂ ಎಲ್ಲರಿಗೂ ಎಟಕುವಂತಾಗಲಿ ಎಂದು ಉದಾರಿಗಳು ಪಟ್ಟಿ ಸ್ವಲ್ಪ ಮೊಟಕು ಮಾಡಿ ಅವುಗಳನ್ನು ''ಮೂಲಭೂತ ಹಕ್ಕುಗಳು'' ಎಂದು ಕರೆದಿದ್ದಾರೆ! ಅವುಗಳಲ್ಲಿ ಉದ್ಯೋಗ, ಶಿಕ್ಷಣ, ಆರೋಗ್ಯ, ಸಾಮಾಜಿಕ ಸುಭದ್ರತೆ ಸೇರಿಕೊಂಡಿವೆ. ಆದರೆ ಈ ಮೂಲಭೂತ ಹಕ್ಕುಗಳನ್ನು ಉಲ್ಲಂಘಿಸಿದವರನ್ನು ಗಲ್ಲಿಗೇರಿಸುವ ಹಕ್ಕು ನಮಗೆ ದಕ್ಕಿಲ್ಲ! ಅದು ಕ್ರಾಂತಿ ಬಂದಾಗಲೇ ಸಾಧ್ಯವೇನೋ!

ನಮ್ಮ ಪ್ರಜೆಗಳಿಗೆ ನಾವು ಇಷ್ಟೆಲ್ಲಾ ಹಕ್ಕು ಕೊಟ್ಟಿದ್ದೇವೆ, ಬೇರೆ ದೇಶಗಳಲ್ಲಿ ಇದರ ಅರ್ಧದಷ್ಟೂ ಇಲ್ಲ ಎಂದು ತಮ್ಮ ಬೆನ್ನನ್ನು ತಾವೇ ತಟ್ಟಿಕೊಳ್ಳುವುದು ಕೆಲವು ಸರ್ಕಾರಗಳ ಫ್ಯಾಷನ್ ಆಗಿದೆ. ಅಮೆರಿಕೆಯಂತೂ ತನ್ನ ದೇಶದಲ್ಲಿ ಹಕ್ಕುಗಳ ಮಹಾಪೂರವನ್ನೇ ಹರಿಸಿದೆ ಎಂದುಕೊಂಡು ಇತರ ದೇಶಗಳನ್ನು ಕ್ಷೀಣವಾಗಿ ಕಾಣುವ ದುರ್ವ್ಯಸನಕ್ಕೆ ತುತ್ತಾಗಿದೆ.

ಎಷ್ಟು ಹಕ್ಕುಗಳಿವೆ ಎನ್ನುವುದು ಮುಖ್ಯವಲ್ಲ. ನಮಗೆ ಲಭ್ಯವಾಗಿರುವ ಹಕ್ಕುಗಳಲ್ಲಿ ಜನಸಾಮಾನ್ಯರ ಜೀವನ ಹಸನಾಗಿರಲು ಎಷ್ಟು ಹಕ್ಕುಗಳು ಸಾರ್ಥಕತೆ ಪಡೆದಿವೆ ಎನ್ನುವುದು ಮುಖ್ಯ.

ಹಕ್ಕೆನ್ನುವುದು ನಾಣ್ಯದ ಒಂದು ಮುಖ ಮಾತ್ರ. ಇನ್ನೊಂದು ಮುಖ ಕರ್ತವ್ಯ. ಹಕ್ಕು ಮತ್ತು ಕರ್ತವ್ಯ ಒಂದಕ್ಕೊಂದು ಹೆಣೆದುಕೊಂಡಿವೆ. ಉದಾಹರಣೆಗೆ, ನಿಮ್ಮ ಮೂಗಿನಲ್ಲಿ ಬೆರಳು ಹಾಕಿ 'ಹಕ್ಕು' ಹೊರ ತೆಗೆಯುವ ಹಕ್ಕು ನಿಮಗಿದೆ. ಆದರೆ ಅದನ್ನು ಎಲ್ಲರ ಮುಂದೆ ಮಾಡದೆ, ಅವರು ಅಸಹ್ಯಪಡದಂತೆ ನೋಡಿಕೊಳ್ಳುವ ಕರ್ತವ್ಯವೂ ನಿಮ್ಮ ಮೇಲಿದೆ. ಕರ್ತವ್ಯವನ್ನು ಒತ್ತಾಯದಿಂದ ಪರಿಪಾಲಿಸದೆ ಆತ್ಮಸಂತೋಷದಿಂದ ಪರಿಪಾಲಿಸುವವನು ಹಕ್ಕಿನ ಹಕ್ಕುದಾರನಾಗುತ್ತಾನೆ!

**ಹಾಲಾಡಿ ಮಾರುತಿರಾವ್**
೩/೪, ಮ್ಹಾಳಸಾ ನಿವಾಸ, ಅಬ್ಬಿಗೆರೆ ಬಡಾವಣೆ
ಚಿಕ್ಕಬಾಣಾವರ ರಸ್ತೆ, ಬೆಂಗಳೂರು - ೫೬೦ ೦೯೦

# ಪರಿಪ್ರಶ್ನೆ

**ಜ್ಞಾನವನ್ನು** ಸಂಪಾದಿಸುವುದು ಹೇಗೆ? ಒಂದು ವಿಧಾನವನ್ನು ಭಗವದ್ಗೀತೆ ಹೀಗೆ ತಿಳಿಸಿಕೊಡುತ್ತದೆ :

*ತದ್ವಿದ್ಧಿ ಪ್ರಣಿಪಾತೇನ ಪರಿಪ್ರಶ್ನೇನ ಸೇವಯಾ*
*ಉಪದೇಕ್ಷ್ಯಂತಿ ತೇ ಜ್ಞಾನಂ ಜ್ಞಾನಿನಸ್ತತ್ತ್ವದರ್ಶಿನಃ (೪.೩೪)*

(ಜ್ಞಾನವನ್ನು ದೀರ್ಘ ನಮಸ್ಕಾರದಿಂದಲೂ ಪರಿಪ್ರಶ್ನೆಯಿಂದಲೂ ಗುರು ಶುಶ್ರೂಷೆಯಿಂದಲೂ ತಿಳಿದುಕೊ. ತತ್ತ್ವವನ್ನು ಅರಿತ ಜ್ಞಾನಿಗಳು ನಿನಗೆ ಅದನ್ನು ಉಪದೇಶ ಮಾಡುವರು).

ಇದು ತುಂಬ ಮನನಿಸಬೇಕಾದ ಮಾತು. ಇಲ್ಲಿ ಪ್ರಣಿಪಾತ, ಸೇವೆಗಳು ಒಂದು ಕಡೆ ನಿಂತರೆ, ಪರಿಪ್ರಶ್ನೆ ಇನ್ನೊಂದು ಕಡೆ ನಿಲ್ಲುತ್ತದೆ. ಸಾಮಾನ್ಯವಾಗಿ ಎರಡೂ ಪರಸ್ಪರ ವಿರುದ್ಧವಾದ ಗುಂಪುಗಳು ಎಂಬುದು ಗಮನಾರ್ಹ! ಪರಿಪ್ರಶ್ನೆ ವೈಚಾರಿಕತೆಗೆ ಸಂಬಂಧಿಸಿದ್ದು ; ಪ್ರಣಿಪಾತ, ಸೇವೆಗಳು ಭಕ್ತಿಗೆ ಮತ್ತು ಶ್ರದ್ಧೆಗೆ ಸಂಬಂಧಿಸಿದವು.

ಅನೇಕರು ಪ್ರಶ್ನಿಸುತ್ತಾರೆ; ಆದರೆ ಅವರದು ಪ್ರಶ್ನೆಗಾಗಿ ಪ್ರಶ್ನೆ, ಜ್ಞಾನಲಾಭಕ್ಕಾಗಿಯಲ್ಲ. ಅವರ ಪ್ರಶ್ನೆಯ ಹಿಂದೆ ಉದ್ಧಟತನವಿರುತ್ತದೆ; ತಾವೇ ಸರ್ವಜ್ಞರೆಂಬ ಅಹಂಕಾರವೂ ಇದ್ದೀತು. ಈ ನಿಲುವು ಸಾಧುವಲ್ಲ. ಇನ್ನು ಕೆಲವರು ಭಕ್ತಿ, ಗೌರವಗಳ ಭರದಲ್ಲಿ ಪ್ರಶ್ನಿಸುವ ಬುದ್ಧಿಯನ್ನೇ ಕಳೆದುಕೊಳ್ಳುತ್ತಾರೆ. ಗುರು ಹೇಳಿದ್ದನ್ನೆಲ್ಲ ಅವರು ಅಕ್ಷರಶಃ, ಕಣ್ಣು ಮುಚ್ಚಿಕೊಂಡು ಸ್ವೀಕರಿಸಿಬಿಡುತ್ತಾರೆ. ಈ ಧೋರಣೆಯೂ ತಪ್ಪು.

ನಮ್ರತೆ ಬೇಕು, ಸೇವಾ ಮನೋಭಾವ ಬೇಕು; ಆದರೆ ವೈಚಾರಿಕತೆ ತುಕ್ಕು ಹಿಡಿಯಬಾರದು; ಪ್ರಶ್ನಪ್ರವೃತ್ತಿ ತೂಕಡಿಸಬಾರದು. ವಿನಯದಿಂದ – ದೈನ್ಯದಿಂದಲ್ಲ – ಪ್ರಶ್ನಿಸುವುದು, ಸಂದೇಹಗಳನ್ನು ಮುಂದಿಡುವುದು ಯಾವಾಗಲೂ ಒಳ್ಳೆಯದು. ಲೋಕದಲ್ಲಿ ವಿರಳವಾದ ಈ ವಿನಯ, ವಿಚಾರಗಳ ಸಮನ್ವಯಕ್ಕೆ ಭಗವದ್ಗೀತೆ ಒತ್ತುಕೊಟ್ಟಿದೆ.

ಗುರುವನ್ನು ಪರಿಪ್ರಶ್ನಿಸುವುದಷ್ಟೆ ಅಲ್ಲ, ಪರೀಕ್ಷಿಸುವುದೂ ಕೂಡ ಶಿಷ್ಯನ ಕೆಲಸ. ಸ್ವಾಮಿ ವಿವೇಕಾನಂದರು ತಮ್ಮ ಗುರುವಾದ ಶ್ರೀರಾಮಕೃಷ್ಣ ಪರಮಹಂಸರಲ್ಲಿ ಭಕ್ತಿಯುಳ್ಳವರಾಗಿಯೂ ಅವರನ್ನು ಪರೀಕ್ಷಿಸಿದರು. ಆ ಗುರುವರ್ಯರೂ ಅಂಥ ಪರೀಕ್ಷೆಗೆ ಉತ್ತೇಜನವಿತ್ತರು! ಇಂದು ಆ ಬಗೆಯ ಗುರುಶಿಷ್ಯರು ಎಲ್ಲಿ ಸಿಕ್ಕುತ್ತಾರೆ?

ವೈಚಾರಿಕತೆಯ ದೃಷ್ಟಿಯಿಂದ ಗೀತೆಯ ಇನ್ನೊಂದು ಹೇಳಿಕೆಯೂ ಮಹತ್ತ್ವಪೂರ್ಣ. ಗೀತೋಪದೇಶದ ಕಡೆಯಲ್ಲಿ ಕೃಷ್ಣ ಅರ್ಜುನನಿಗೆ ನುಡಿಯುತ್ತಾನೆ : ''ಹೀಗೆ ಗುಹ್ಯಕ್ಕಿಂತಲೂ ಗುಹ್ಯತರವಾದ ಜ್ಞಾನವನ್ನು ನಾನು ನಿನಗೆ ಹೇಳಿದ್ದೇನೆ. ಇದನ್ನು ಸಂಪೂರ್ಣವಾಗಿ ವಿಮರ್ಶೆ ಮಾಡಿ, ಹೇಗೆ ಇಚ್ಛಿಸುವೆಯೋ ಹಾಗೆ ಮಾಡು!'' (೧೮.೬೩).

ಭಗವದ್ಗೀತೆಯಷ್ಟು ದೀರ್ಘವಾದ ಉಪದೇಶ ಜಗತ್ತಿನಲ್ಲಿ ಬಹುಶಃ ಇನ್ನೊಂದಿಲ್ಲ. ಅಷ್ಟನ್ನೆಲ್ಲ ಹೇಳಿದ ಮೇಲೆ ಕೃಷ್ಣ ''ನಾನು ಹೇಳಿದ್ದನ್ನು ನೀನು ಒಪ್ಪಲೇಬೇಕು!'' ಎಂದು ಆಗ್ರಹಿಸದೆ, ''ಇದನ್ನೆಲ್ಲ ವಿಚಾರಿಸಿ, ಮನಬಂದಂತೆ ಮಾಡು!'' ಎಂದಿರುವುದು ಬಹು ಸ್ವಾರಸ್ಯದ ಸಂಗತಿ. ಇದು ವಿಚಾರ ಸ್ವಾತಂತ್ರ್ಯಕ್ಕೆ ಗೀತೆಯ ದೊಡ್ಡ ಕೊಡುಗೆ. ಇದರಿಂದ ಗೀತೆ ಗೌರವಾಸ್ಪದವಾಗುತ್ತದೆ. ಕೃಷ್ಣನ ಬೋಧೆ ಈ ಹೊತ್ತಿಗೆ ಅಪ್ರಯೋಜಕ ಎಂದು ಬೇಕಾದರೂ ಹೇಳುವ ಸ್ವಾತಂತ್ರ್ಯವನ್ನು ಗೀತೆಯೆ ನಮಗಿತ್ತಿದೆ! ನಮ್ಮ ನಿಲುವನ್ನು ವಿವರಿಸಬಹುದು, ಆದರೆ ನಮ್ಮ ಅಭಿಪ್ರಾಯವನ್ನು ಮತ್ತೊಬ್ಬರ ಮೇಲೆ ಒತ್ತಾಯದಿಂದ ಹೇರಬಾರದು ಎಂಬ ಪಾಠವನ್ನು ಕೂಡ ನಾವಿಂದು ಗೀತೆಯಿಂದ ಕಲಿಯಬೇಕಿದೆ.

ಪರಿಪ್ರಶ್ನೆ ಎಂದಕೂಡಲೆ, ಋಗ್ವೇದದ ಧೀರ ಪ್ರಶ್ನೆಯೊಂದು ನೆನಪಾಗುತ್ತದೆ: ''ಕಸ್ಮೈ ದೇವಾಯ ಹವಿಷಾ ವಿಧೇಮ ?'' (ಯಾವ ದೇವತೆಗೆ ಹವಿಸ್ಸನ್ನು ಅರ್ಪಿಸೋಣ ?) ವೈಚಾರಿಕತೆಗೆ ಇದೂ ಒಂದು ಜ್ವಲಂತ ನಿದರ್ಶನ.

'ಸೈನ್ಸ್' ಎಂಬುದಕ್ಕೆ ನಾವು 'ವಿಜ್ಞಾನ' ಶಬ್ದವನ್ನು ಸಮಾನಾರ್ಥಕವಾಗಿ ಬಳಸುತ್ತಿದ್ದೇವೆ ತಾನೆ. ಈ ಮಾತು ನಮ್ಮಲ್ಲಿ ಹಿಂದೆಯೇ ಇತ್ತು, ಗೀತೆಯಲ್ಲಿ ಬಂದಿದೆ ಎಂಬುದನ್ನು ನೆನೆಯಬೇಕು (''ಜ್ಞಾನಂ ವಿಜ್ಞಾನ ಸಹಿತಂ'').

ಪ್ರಾಚೀನ ಭಾರತದಲ್ಲಿ ವೈಜ್ಞಾನಿಕ, ವೈಚಾರಿಕ ದೃಷ್ಟಿ ಪ್ರಚುರವಾಗಿತ್ತು; ಪ್ರಖರವಾಗಿಯೂ ಇತ್ತು. ಅದು ಲುಪ್ತವಾದದ್ದು ಮಧ್ಯಕಾಲದಲ್ಲಿ. ಪಾಶ್ಚಾತ್ಯ ವಿಚಾರಧಾರೆಯ ಗಾಢ ಸಂಪರ್ಕವಿರುವ ಈ ದಿನಗಳಲ್ಲಾದರೂ ನಾವು ವೈಚಾರಿಕ ಮನೋಧರ್ಮವನ್ನು ಸಾಕಷ್ಟು ರೂಢಿಸಿಕೊಂಡಿದ್ದೇವೆಯೆ? ಪರಿಪ್ರಶ್ನೆಯ ಪ್ರವೃತ್ತಿಯನ್ನು ಬೆಳೆಸಿಕೊಂಡಿದ್ದೇವೆಯೆ? ಇಲ್ಲ ಎನ್ನುವುದು ಎಂಥ ವಿಪರ್ಯಾಸ !

**ಸಿ. ಪಿ. ಕೆ.**
೨ನೇ ಮುಖ್ಯ ರಸ್ತೆ, ವಿನಾಯಕನಗರ, ಮೈಸೂರು - ೫೭೦ ೦೧೭

